ಓಂ

ಓಂ ನಮೋ ನಾರಾಯಣಾಯ ಓಂ



ಶ್ರೀ ಮಧ್ವಾಚಾರ್ಯರು



ಶ್ರೀ ವೇದವ್ಯಾಸರು



ಶ್ರೀ ಟೀಕಾಚಾರ್ಯರು

## ಶ್ರೀಮನ್ನ್ಯಾಯಸುಧಾ

# ಪರಿಮಳ

## ಸಾರಸಂಗ್ರಹ

ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಗರ್ಭಿತಾ!
ಪ್ರತಿಭಾತಿ ಸುಧಾ [illegible] ಗ್ರಂಥಾಲ್ಪತ್ವಾ [illegible] ನೋಚ್ಯ [illegible]!!

ಪ್ರಕಾಶಕರು:
೧೦೦೮ ಶ್ರೀ ಶ್ರೀ ಮತ್ಸು ಜಯೀಂದ್ರತೀರ್ಥಪಾದಂಗಳವರ ವರಕುಮಾರಕರಾದ
೧೦೦೮ ಶ್ರೀ ಶ್ರೀ ಸುಶಮೀಂದ್ರತೀರ್ಥಪಾದಂಗಳವರು
ಪೀಠಾಧಿಪತಿಗಳು ಶ್ರೀರಾಘವೇಂದ್ರ ಸ್ವಾಮಿಗಳವರಮಠ ಮಂತ್ರಾಲಯ



**ಶ್ರೀದಿಗ್ವಿಜಯರಾಮದೇವರು ಶ್ರೀಮನ್ಮೂಲರಾಮದೇವರು ಶ್ರೀಜಯರಾಮದೇವರು**

ಶ್ರೀಮಾನ್ ಪೂರ್ವಂ ಪ್ರಜಾತೋ ದಶರಥನೃಪತೇ ರಾಮನಾಮಾಥ ನೀತೋ
ವಿಶ್ವಾಮಿತ್ರೇಣ ಮಂತ್ರಾಹೃದನುಜಸಹಿತಸ್ತಾಟಕಾಂ ಘಾತಕೋಽಸ್ತ್ರಮ್।
ಬ್ರಹ್ಮಾದ್ಯಂ ಪ್ರಾಪ್ಯ, ಹತ್ವಾ ನಿಶಿಚರನಿಕರಂ ಯಜ್ಞಪಾಲೋ ವಿಮೋಚ್ಯಾ
ಹಲ್ಯಾಶಾಪಂ ಚ ಭಂಕ್ತ್ವಾ ಶಿವಧನುರುಪಯನ್ ಜಾನಿಕೀಂ ನಃ ಪ್ರಸೀದೇತ್॥.



ಚಿತ್ತೇ ನ್ಯಾಯಯುಕ್ತ್ಯರ್ಥಂ ಕಲಯತಿ ಸಹಸಾ ನಾಭಿಧತ್ತೇನಸದ್ಭಿ
ಸ್ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಂ!!
ಉಕ್ತಿಂ ನೋ ವಕ್ತಿ ಭೂಯ: ಕ್ವಚಿದಪಿ ಲಿಖಿತಂ ನೈವನಿರ್ಮಾರ್ಷ್ಟಿತಸ್ಮಾ
ದಸ್ಮಾಭಿಸ್ಸತ್ಪ್ರಬಂಧ ಪ್ರಣಯನ ವಿಷಯೇ ಸ್ತೂಯತೇ ರಾಘವೇಂದ್ರ:!!

ಶ್ರೀ ಸುಯಮೀಂದ್ರ ತೀರ್ಥರು

ಸುಖತೀರ್ಥಮತಾಬ್ಧೀಂದುಂ ಸುಧೀಂದ್ರ ಸುತಸೇವಕಂ!
**ಸುಧಾಪರಿಮಳಾಸಕ್ತಂ ಸುಯಮೀಂದ್ರ ಗುರುಂ ಭಜೇ!!**

ಶ್ರೀ ಸುಜಯೀಂದ್ರ ತೀರ್ಥರು

ಸುಯಮೀಂದ್ರ ಕರಾಬ್ಜೋತ್ಥಂ ಸುವಿದ್ಯಾಭೋಧಕಂ ಸದಾ
ಸುಮೂಲರಾಮಪೂಜಾಢ್ಯಂ ಸುಜಯೀಂದ್ರ ಗುರುಂ ಭಜೇ!!



ಶ್ರೀ ೧೦೦೮ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರ
ವರಕುಮಾರಕರಾದ
ಶ್ರೀ ೧೦೦೮ ಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದಂಗಳವರು
ಪ್ರಸ್ತುತ ಪೀಠಾಧಿಪತಿಗಳು
ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ
ಮಂತ್ರಾಲಯ

॥ ಶ್ರೀಃ॥

# ಶ್ರೀಮನ್ನ್ಯಾಯಸುಧಾ ಪರಿಮಳ ಸಾರ ಸಂಗ್ರಹ

ಪ್ರಕಾಶಕರು :

ಶ್ರೀ ಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು

ಶ್ರೀರಾಘವೇಂದ್ರಸ್ವಾಮಿಗಳವರ ಮಠ

ಮಂತ್ರಾಲಯ.

ಸಂಗ್ರಹ ಮತ್ತು ಅನುವಾದ

ಶ್ರೀ ಜಿ. ಗುರುವೆಂಕಟಾಚಾರ್ಯ

ಶ್ರೀ ವೀರನಾರಾಯಣಾಚಾರ್ಯ ಪಾಂಡುರಂಗಿ.

ಶ್ರೀ ೧೦೦೮ ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ
ಶ್ರೀಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ
೨೦ ನೇ ವರ್ಧಂತಿ ಹಾಗೂ ಪೀಠಾರೋಹಣದ ೧೨ನೇ ವಾರ್ಷಿಕೋತ್ಸವದ
ಶುಭಸಂದರ್ಭದಲ್ಲಿ ಬಿಡುಗಡೆ ಮಾಡಿದ ಗ್ರಂಥ

# ಶ್ರೀಮನ್ನ್ಯಾಯಸುಧಾಪರಿಮಳಸಾರಸಂಗ್ರಹ


**ಪ್ರಕಾಶಕರು :** ಶ್ರೀಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು

**ಸಂಗ್ರಹ ಮತ್ತು ಅನುವಾದ :**
ವಿದ್ವಾನ್ ಶ್ರೀ ಜಿ. ಗುರುವೆಂಕಟಾಚಾರ್ಯ
ವಿದ್ವಾನ್ ಶ್ರೀ ವೀರನಾರಾಯಣಾಚಾರ್ಯ ಪಾಂಡುರಂಗಿ.

**ಪ್ರಥಮಮುದ್ರಣ : 23-10-1998**

**ಪ್ರತಿಗಳು : 1000/**





ಬೆಲೆ : ರೂ =50

ಅಕ್ಷರಜೋಡಣೆ : ಪದ್ಮಶ್ರೀಗ್ರಾಫಿಕ್ಸ್ ಬೆಂಗಳೂರು ೫೦
ಮುದ್ರಣ : ಪದ್ಮಶ್ರೀ ಪ್ರಿಂಟರ್ಸ್, ಬೆಂಗಳೂರು -560 061

## ಶ್ರೀಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹವಚನ

ಶ್ರೀ ಪರಿಮಳಾಚಾರ್ಯರೆಂದೇ ಪ್ರಖ್ಯಾತರಾಗಿರುವ ಮಂತ್ರಾಲಯ ಪ್ರಭುಗಳು, ಕಾರುಣ್ಯಮೂರ್ತಿಗಳು. ಪಂಡಿತರಿಗೂ ಪಾಮರರಿಗೂ ಉಪಕಾರವಾಗುವಂತೆ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ತಮ್ಮ ಪೂರ್ವಾಶ್ರಮದ ಸಾಂಸಾರಿಕ ಜೀವನದಲ್ಲಿ ಆರ್ಥಿಕ ಪರಿಸ್ಥಿತಿಯು ದುರ್ಬಲವಾಗಿದ್ದ ಕಷ್ಟಕರ ದಿನಗಳಲ್ಲಿಯೂ ಎದೆಗುಂದದೇ ಇದ್ದ ಮಹಾಧೀರರು. ಧನ ಸಂಪಾದನೆಗಾಗಿ ಕಂಡ ಕಂಡವರ ಮುಂದೆ ಕೈ ಯೊಡ್ಡಲಿಲ್ಲ. ತಮ್ಮ ಶಾಸ್ತ್ರ ಪಾಠ ಪ್ರವಚನ ಬಿಡಲಿಲ್ಲ. ಗ್ರಂಥ ರಚನೆಯಿಂದ ವಿಮುಖರಾಗಲಿಲ್ಲ. ಸತ್ಯಕ್ಕೆ ಧರ್ಮಕ್ಕೆ ದೂರರಾಗಲಿಲ್ಲ. ಅದಕ್ಕೆಂದೇ **ಸತ್ಯಧರ್ಮರತ**ರೆನಿಸಿದರು. ಆದ್ದರಿಂದಲೇ **ಪೂಜ್ಯರೂ** ಆದರು. ಆಶ್ರಿತರೆಲ್ಲರಿಗೆ **ಕಲ್ಪತರು**ವಾದರು. ಶಿರಬಾಗಿದ ಭಕುತರಿಗೆ **ಕಾಮಧೇನು**ವಾದರು.

ಇಂತಹ ಅದ್ಭುತ ವ್ಯಕ್ತಿತ್ವದ ಗುರುಸಾರ್ವಭೌಮರ ದಿವ್ಯ ಪೀಠದಲ್ಲಿ ವಿರಾಜಮಾನರಾಗಿದ್ದ ಶ್ರೀ ೧೦೦೮ ಶ್ರೀಸುಜಯೀಂದ್ರ ತೀರ್ಥ ಶ್ರೀಪಾದಂಗಳವರು ಈಗ್ಗೆ ಹನ್ನೆರಡು ವರ್ಷಗಳ ಹಿಂದೆ ನಮ್ಮನ್ನು ಈ ಪೀಠದಲ್ಲಿ ಕುಳ್ಳಿರಿಸಿ ಪಟ್ಟಾಭೀಷೇಕ ಮಾಡಿದರು. ಶ್ರೀಮೂಲರಾಮನ ಪದಪದ್ಮಸಂಗದಿಂದ ದಿವ್ಯಶಕ್ತಿಭರಿತವಾದ ತಮ್ಮ ಹಸ್ತವನ್ನು ನನ್ನ ಮಸ್ತಕದಲ್ಲಿಟ್ಟು ಅನುಗ್ರಹ ಮಾಡಿದರು. ಅವರ ಅನುಗ್ರಹ ಬಲದಿಂದ ನಾವು ಈ ಹನ್ನೆರಡು ವರ್ಷಗಳ ಕಾಲ ಜಪತಪಾದಿ ಸ್ವಕರ್ಮಾನುಷ್ಠಾನ ನಿರತರಾಗಿ ಶ್ರೀಮೂಲ ರಘುಪತಿವೇದ ವ್ಯಾಸದೇವರ ಪೂಜಾಕೈಂಕರ್ಯವನ್ನೂ ಶ್ರೀಗುರುರಾಜರ ಸೇವೆಯನ್ನೂ ಮಾಡುತ್ತಾ ಲೋಕಕಲ್ಯಾಣವನ್ನು ಪ್ರಾರ್ಥಿಸುತ್ತಾ ಬಂದಿದ್ದೇವೆ. ಶ್ರೀಮತ್ ಸಮೀರಸಮಯ ಸಂವರ್ಧಿನೀ ಸಭೆಯನ್ನೂ, ಶ್ರೀಗುರುಸಾರ್ವಭೌಮ ವಿದ್ಯಾಪೀಠವನ್ನೂ, ವಿವಿಧ ಭಾಷೆಗಳಲ್ಲಿ ಗ್ರಂಥ ಪ್ರಕಾಶನ ಕಾರ್ಯವನ್ನೂ, ನಾನಾ ಊರುಗಳಲ್ಲಿ ಶ್ರೀಗುರುರಾಜರ ಮೃತ್ತಿಕಾ ಬೃಂದಾವವನ ಪ್ರತಿಷ್ಠಾಪನೆಯನ್ನೂ, ಪಂಡಿತರು ಮತ್ತು ಪುರೋಹಿತರ ವ್ಯವಸ್ಥೆಯನ್ನೂ, ಕ್ಷೇತ್ರಾಭಿವೃದ್ಧಿ ಕಾರ್ಯವನ್ನೂ ಮುಂದುವರೆಸುತ್ತಾ ಬಂದಿದ್ದೇವೆ.

ಶ್ರೀಗುರುರಾಜರೇ ನಮ್ಮನ್ನು ನಿಮಿತ್ತ ಮಾಡಿಕೊಂಡು ಈ ಕಾರ್ಯವನ್ನೆಲ್ಲ ನೆರವೇರಿಸುತ್ತಾ ಇದ್ದಾರೆ. ಜನರೂ ನಮ್ಮ ಮೇಲೆ ಅಪಾರ ಭಕ್ತಿ ವಿಶ್ವಾಸಗಳನ್ನು ತೋರಿ ನಮ್ಮನ್ನು ತುಲಾಭಾರ ಮೊದಲಾದ ನಾನಾವಿಧಗಳಲ್ಲಿ ಗೌರವಿಸುತ್ತಿದ್ದಾರೆ. ಅವೆಲ್ಲವನ್ನೂ ನಾವು ಗುರ್ವಂತರ್ಯಾಮಿ ಶ್ರೀಮೂಲರಾಮನಿಗೆ ಸಲ್ಲಿಸಿ ಭಕ್ತರ ಅಭೀಷ್ಟಗಳನ್ನು ಪೂರೈಸುವಂತೆ ಪ್ರಾರ್ಥಿಸುತ್ತಿದ್ದೇವೆ.

ಪ್ರಸ್ತುತ ನಮ್ಮ ೭೦ನೇ ವರ್ಧಂತಿ ಹಾಗೂ ಪೀಠಾರೋಹಣದ ಹನ್ನೆರಡನೆಯ ವರ್ಷದ ಶುಭಸಂದರ್ಭದಲ್ಲಿ ಶ್ರೀಗುರುರಾಜರ ಪರಿಮಳದ ಸಾರಸಂಗ್ರಹವನ್ನು ಕನ್ನಡದಲ್ಲಿ ಅನುವಾದ ಮಾಡಿಸಿ ಜನ ಸಾಮಾನ್ಯಕ್ಕೆ ತಲುಪುವಂತೆ ಮಾಡಬೇಕೆಂದು ನಮಗೆ ರಾಯರ ಪ್ರೇರಣೆಯಾಯಿತು. ಹತ್ತಾರು ವರ್ಷಗಳ ಅಧ್ಯಯನದ ಓನ್ನೆಲೆ ಇಲ್ಲದವರಿಗೆ ಇದು ಅರ್ಥವಾಗುವುದು ಕಷ್ಟ. ಆದರೂ ವೇದಪಾರಾಯಣದಿಂದ ಧನ್ಯರಾಗುವಂತೆ ಇದರ ಕನ್ನಡಾನುವಾದ ವನ್ನಾದರೂ ಪಾರಾಯಣ ಮಾಡಿ ಧನ್ಯರಾಗಬಯಸಿದ ಗುರುರಾಜ ಭಕ್ತರಿಗಾಗಿ ಇದನ್ನು ಪ್ರಕಟಪಡಿಸುತ್ತಿದ್ದೇವೆ. ಈ ಗ್ರಂಥದ ವಿತರಣೆಯಿಂದ ಬಂದ ಹಣವನ್ನು ಪ್ರತ್ಯೇಕವಾಗಿ ನಾವೇ ಸ್ಥಾಪನೆ ಮಾಡಿದ ಶ್ರೀವಿಬುಧೇಂದ್ರ ಸಂಶೋಧನ ಮತ್ತು ಪ್ರಕಾಶನ ದತ್ತಿ ಸಂಸ್ಥೆಗೆ ಜ್ಞಾನ ಪ್ರಸಾರಕ್ಕಾಗಿ ಸಹಾಯ ಧನವನ್ನಾಗಿ ನೀಡುವ ಸಂಕಲ್ಪ ಮಾಡಿದ್ದೇವೆ. ಮತ್ತು ಈ ಗ್ರಂಥದ ಹಕ್ಕು ಬಾಧ್ಯತೆಗಳನ್ನು ಆ ಸಂಸ್ಥೆಗೆ ಒಪ್ಪಿಸಿದ್ದೇವೆ.

ಈ ಕಾರ್ಯಕ್ಕಾಗಿ ನಮ್ಮ ಶ್ರೀಮಠದ ಶಿಷ್ಯರೂ, ಶ್ರೀಪೇಜಾವರ ಮಠದ ಶ್ರೀವಿಶ್ವೇಶತೀರ್ಥಶ್ರೀಗಳಲ್ಲಿ ಸುಧಾಂತ ವೇದಾಂತ ಅಧ್ಯಯನ ಮಾಡಿ ಪೂರ್ಣ ಪ್ರಜ್ಞವಿದ್ಯಾಪೀಠದಲ್ಲಿ ಪ್ರಾಧ್ಯಾಪಕರೂ ಆಗಿರುವ ಶ್ರೀ ಜಿ.ಗುರುವೆಂಕಟಾಚಾರ್ಯರಿಗೆ ಆಜ್ಞಾಪಿಸಿದೆವು. ಅವರು ತಮ್ಮ ಸಹೋದ್ಯೋಗಿಗಳಾದ ವಿದ್ಯಾಪೀಠದ ಪಂಡಿತರಾದ ಶ್ರೀವೀರನಾರಾಯಣಾ ಚಾರ್ಯರೂ, ಎಚ್. ಪಿ. ನಾಗರಾಜಾಚಾರ್ಯ, ತಿರುಮಲಾಚಾರ್ಯ ಮತ್ತು ಕಡ್ಡೀ. ಬದರಿನಾರಾಯಣಾಚಾರ್ಯರ ಸಹಕಾರದೊಂದಿಗೆ ಇದನ್ನು ಸಮರ್ಥವಾಗಿ ಪೂರೈಸಿದ್ದಾರೆ. ಸುಂದರವಾಗಿ ಅಕ್ಷರ ಜೋಡಣೆ ಮಾಡಿದ ಅನಂತಕೃಷ್ಣ ನಿಜಗಲ್ ಮತ್ತು ಶ್ರೀನಿವಾಸರಾವ್ ಕೋಡಿಕಲ್ ಅವರಿಗೆ, ಅತಿಶೀಘ್ರವಾಗಿ ಮುದ್ರಿಸಿಕೊಟ್ಟ ಅನಿಲ್ ಆರ್ ಕಡ್ಡಿ ಮತ್ತು ಶ್ರೀಕಾಂತ ಜೆ ಕಡ್ಡಿ ಅವರಿಗೂ ಮತ್ತು ನಮ್ಮ ಈ ಎಲ್ಲ ಕಾರ್ಯಗಳಲ್ಲಿಯೂ ಅಭಿಮಾನ ಪೂರ್ವಕವಾಗಿ ಸಹಕರಿಸಿ ಶ್ರೀಗುರುರಾಜರ ಸೇವೆ ಸಲ್ಲಿಸುತ್ತಿರುವ ಆಪ್ತಕಾರ್ಯದರ್ಶಿಗಳಾದ ರಾಜಾ ಎಸ್. ಕೃಷ್ಣಾಚಾರ್ಯರು

ದ್ವಾರಪಾಲಕ ಆನಂದರಾವ್ ಇವರೇ ಮೊದಲಾದವರಿಗೂ, ಮುಖಪುಟ ಮುದ್ರಣದ ಮೂಲಕ ಸೇವೆಸಲ್ಲಿಸಿದ ಬಿ.ವಿ.ಟಿ. ಶೆಟ್ಟಿ ಅವರಿಗೂ ಮತ್ತು ಅನೇಕ ರೀತಿಯಲ್ಲಿ ಸಹಕರಿಸಿ ಸೇವೆ ಸಲ್ಲಿಸಿದ ಗುರುರಾಜರ ಭಕ್ತರೆಲ್ಲರಿಗೂ ಗುರ್ವಂತರ್ಯಾಮಿ ಮಧ್ವವಲ್ಲಭ ಸೀತಾಪತಿ ಶ್ರೀಮೂಲರಾಮಚಂದ್ರ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಬಹುಧಾನ್ಯ-ಆಶ್ವಯುಜ-ಕೃಷ್ಣ-ಪ್ರತಿಪತ್ ಇತಿ ನಾರಾಯಣ ಸ್ಮರಣೆಗಳು.

ಶ್ರೀಶ್ರೀ ೧೦೦೮ ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರ
ವರಕುಮಾರಕರಾದ
ಶ್ರೀಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು
ಪ್ರಸ್ತುತ ಪೀಠಾಧಿಪತಿಗಳು
ಶ್ರೀರಾಘವೇಂದ್ರಸ್ವಾಮಿಗಳವರ ಮಠ
ಮಂತ್ರಾಲಯ.

# ಶ್ರೀ ೧೦೦೮ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದಂಗಳವರ ಅನುಗ್ರಹವಚನ

**ಶ್ರೀಮನ್ನ್ಯಾಯಸುಧಾಪರಿಮಳಸಾರಸಂಗ್ರಹ** ಎಂಬ ಗ್ರಂಥವನ್ನು ನೋಡಿದೆವು. ಇದು ಸಂಸ್ಕೃತ ಭಾಷೆಯಲ್ಲಿ ಇರತಕ್ಕ ಸುಧಾ ಪರಿಮಳ ಗ್ರಂಥದ ಸರಳ ಕನ್ನಡ ಭಾಷೆಯಿಂದ ಅನುವಾದವು. ಸುಧಾ ಗ್ರಂಥವು ಎಷ್ಟು ಶ್ರೇಷ್ಠವೆಂದರೆ ''ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ'' ಅಂದರೆ ಮನುಷ್ಯ ಜನ್ಮ ಸಾರ್ಥಕವಾಗಬೇಕಾದರೆ ಸುಧಾ ಗ್ರಂಥವನ್ನು ಪಠಿಸಲೇ ಬೇಕು. ಅದು ಸಾಧ್ಯವಾಗದೇ ಇದ್ದರೆ ಅಖಂಡ ವಸುಧಾ ಪಾಲಕನಾಗಬೇಕು. ಅಷ್ಟು ಶ್ರೇಷ್ಠವಾದ ಸುಧಾ ಗ್ರಂಥದ ವ್ಯಾಖ್ಯಾನ ರೂಪವಾದ ಪರಿಮಳಗ್ರಂಥದ ಕನ್ನಡ ಅನುವಾದವನ್ನು ಪಠಿಸಿದರೂ ನ್ಯಾಯ ಸುಧಾಗ್ರಂಥದ ಪಠನದ ಎಲ್ಲಾ ಫಲವೂ ಪ್ರಾಪ್ತವಾಗುತ್ತದೆ. ಇಂಥ ಶ್ರೇಷ್ಠವಾದ ಅನುವಾದವನ್ನು ನ್ಯಾಯ ವೇದಾಂತ ವಿದ್ವಾನ್ ಗುರುವೇಂಕಟಾ ಚಾರ್ಯರು ೧೦೦೮ ಶ್ರೀಶ್ರೀಗಳಾದ ಸುಶಮೀಂದ್ರ ತೀರ್ಥ ಶ್ರೀಪಾದರ ಆಜ್ಞೆಯಿಂದ ಮಾಡಿ ಪರಿಗುರುಗಳ ಪೂರ್ಣ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ.

ಬಹುಧಾನ್ಯ-ಆಶ್ವಯುಜ-ಕೃಷ್ಣ-ಪ್ರತಿಪತ್

ಇತಿ ನಾರಾಯಣ ಸ್ಮರಣೆಗಳು

ಪಲಿಮಾರು-ಭಂಡಾರಕೇರಿ ಉಭಯಮಠಾಧೀಶರು

ಉಡುಪಿ

# ಶ್ರೀ ೧೦೦೮ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರ ಅನುಗ್ರಹವಚನ

ಶ್ರೀ ಮಟ್ಟೀಕಾಕೃತ್ಪಾದರು ರಚಿಸಿದ ಶ್ರೀಮನ್ನ್ಯಾಯ ಸುಧಾಗ್ರಂಥವು ಮಾಧ್ವವಾಙ್ಮಯದಲ್ಲಿಯೇ ಮೇರುಕೃತಿಯೆನಿಸಿದೆ. ಇದು ಮಾಧ್ವ ಸಿದ್ಧಾಂತದ ಆಕರ ಗ್ರಂಥವಾಗಿದೆ. ದ್ವೈತಸಿದ್ಧಾಂತದ ಪ್ರಮಾಣ ಪ್ರಮೇಯಗಳಿಗೆ ಸಂಬಂಧಿಸಿದ ಎಲ್ಲಾ ತತ್ವರತ್ನಗಳ ಗಣಿಯಾಗಿದೆ. ಇಂಥಹ ಅಮೋಘ ಗ್ರಂಥಕ್ಕೆ ಶ್ರೀರಾಘವೇಂದ್ರರು ರಚಿಸಿದ ಪರಿಮಳ ವ್ಯಾಖ್ಯಾನವು ಸುಪ್ರಸಿದ್ಧವಾಗಿದೆ. ಇದರ ಸಹಾಯವಿಲ್ಲದೇ ಸುಧಾಗ್ರಂಥವನ್ನು ನಾವು ಅರ್ಥಮಾಡಿಕೊಳ್ಳಲಾರೆವು.

ಸುಧಾಗ್ರಂಥದ ಪ್ರಮೇಯದ ಬಗ್ಗೆ ನಮಗೆ ಸಂದೇಹವುಂಟಾದಾಗ ಸಂಕ್ಷಿಪ್ತ ಸರಳ ಶೈಲಿಯಲ್ಲಿ ಅದನ್ನು ಪರಿಹರಿಸುವ ರಾಯರ ಜಾಣ್ಮೆ ಅಸಾಧಾರಣವಾದುದು. ಇಂಥಹ ಅತ್ಯುಪಯುಕ್ತ ಗ್ರಂಥವನ್ನು

ಜಿಜ್ಞಾಸುಗಳ ಉಪಕಾರಕ್ಕಾಗಿ ಕನ್ನಡದಲ್ಲಿ ಅನುವಾದಿಸಿ ಪ್ರಕಟಗೊಳಿಸುವ ಶ್ರೀಮಂತ್ರಾಲಯ ಶ್ರೀರಾಘವೇಂದ್ರಸ್ವಾಮಿ ಮಠದ ಶ್ರೀಗಳವರ ಯೋಜನೆಯನ್ನು ನಾವು ಅತ್ಯಂತ ಆನಂದದಿಂದ ಸ್ವಾಗತಿಸುತ್ತೇವೆ.

ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಧ್ಯಾಪಕರೂ, ಪಾಠಪ್ರವಚನ ಉಪನ್ಯಾಸಗಳಲ್ಲಿ ವಿಶೇಷ ಖ್ಯಾತಿಯನ್ನು ಪಡೆದು ಜನತೆಯ ಗೌರವಾಭಿಮಾನ ಪಾತ್ರರೂ, ಪಂಡಿತವರ್ಯರೂ, ನಮ್ಮ ಪ್ರಿಯ ಶಿಷ್ಯರೂ ಆದ ಶ್ರೀಗುರುವೆಂಕಟಾಚಾರ್ಯರು ಇದರ ಅನುವಾದ ವನ್ನು ಮಾಡಿರುವುದು ನಮಗೆ ಹೆಚ್ಚಿನ ಸಂತಸವನ್ನುಂಟು ಮಾಡಿದೆ. ಲೇಖಕರನ್ನೂ, ಪ್ರಕಾಶಕರನ್ನೂ ನಾವು ಈ ಸಂಧರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ.

ಬಹುಧಾನ್ಯ- ಆಶ್ವಯುಜ- ಪ್ರತಿಪತ್

ಇತಿ ನಾರಾಯಣಸ್ಮರಣೆಗಳು

ಶ್ರೀಶ್ರೀ೧೦೦೮ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರು
ಪೇಜಾವರಅಧೋಕ್ಷಜಮಠ ಉಡುಪಿ

# ಮೊದಲ ಮಾತು

ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರ ಮಠಾಧೀಶರಾದ ಶ್ರೀಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರಿಗೆ ಶ್ರೀಮಂತ್ರಾಲಯ ಕ್ಷೇತ್ರದಲ್ಲಿ ಏರ್ಪಟ್ಟಿದ್ದ ತುಲಾಭಾರ ಸಮಾರಂಭ ಒಂದರಲ್ಲಿ ನಾನೂ ಪಾಲ್ಗೊಂಡಿದ್ದೆ ಆಗ ಶ್ರೀಪಾದಂಗಳವರು ನನಗೆ 'ಶ್ರೀಪರಿಮಳ ಗ್ರಂಥದ ಸಾರವನ್ನು ಸಂಗ್ರಹಿಸಿ ಕನ್ನಡಾನುವಾದ ಮಾಡಿ ಕೊಡಬೇಕು. ಜನರಿಗೆ ಅದರ ಪರಿಚಯವಾಗಬೇಕು' ಎಂದು ಆಜ್ಞಾಪಿಸಿದರು. ಈ ಮಹಾಕಾರ್ಯ ಮಾಡಲು ನನಗೆ ಸಾಮರ್ಥ್ಯವಿದೆಯೇ ಎಂಬ ಸಂದೇಹ ಉಂಟಾಯಿತು. ಶ್ರೀಗಳವರು ಮಂತ್ರಾಕ್ಷತೆಯನ್ನು ಕೊಟ್ಟು ತಲೆಯ ಮೇಲೆ ಕೈ ಇಟ್ಟು ರಾಯರು ಮಾಡಿಸುತ್ತಾರೆ ನೀವು ಯೋಚಿಸಬೇಡಿ ಎಂದರು. ಪರಿಮಳವು ಟಿಪ್ಪಣೀ ಗ್ರಂಥ. ಸ್ವತಂತ್ರ ಗ್ರಂಥವಲ್ಲ. ಟಿಪ್ಪಣೀ ಗ್ರಂಥಗಳ ಅನುವಾದ ಕಷ್ಟ. ಆದರೂ ಅಲ್ಲಿರುವ ಕೆಲವು ವಿಚಾರಗಳನ್ನು ಆರಿಸಿ ಅವುಗಳ ಭಾವಾನುವಾದವನ್ನು ಮಾಡಿಕೊಡಬೇಕೆಂದು ತೀರ್ಮಾನಿಸಿದೆ. ವೇದಾಂತ-ನ್ಯಾಯ-ಪೂರ್ವಮೀಮಾಂಸಾ ಮತ್ತು ವ್ಯಾಕರಣಗಳಿಗೆ ಸಂಬಧಿಸಿದ ಅನೇಕ ವಿಚಾರಗಳನ್ನು ಸಂಗ್ರಹಿಸಿದೆ. ಈ ಕೆಲಸವು ಬೇಗನೇ ಆಗಬೇಕೆಂಬ ಉದ್ದೇಶದಿಂದ ನಮ್ಮ ಸಹೋದ್ಯೋಗಿ ಶ್ರೀವೀರನಾರಾಯಣಾಚಾರ್ಯರೂ ಮತ್ತು ನಾನು ಇಬ್ಬರೂ ಸೇರಿ ಶ್ರೀಗಳವರ ಅನುಗ್ರಹದ ಬಲದಿಂದ ಅವುಗಳ ಅನುವಾದಕಾರ್ಯವನ್ನು ಪೂರೈಸಿದೆವು. ಅನುವ್ಯಾಖ್ಯಾನದಲ್ಲಿ ಬಂದಿರುವ ನ್ಯಾಯ ಮಾಲಾ ಶ್ಲೋಕಗಳಲ್ಲಿರುವ ಪೂರ್ವ ಪಕ್ಷ ಸಿದ್ಧಾಂತಯುಕ್ತಿಗಳನ್ನು ಶ್ರೀರಾಯರು ಯಾವ ಅಧಿಕರಣದಲ್ಲಿ ಯಾವುದು ಪೂರ್ವಪಕ್ಷಯುಕ್ತಿ ಯಾವುದು ಸಿದ್ಧಾಂತ ಯುಕ್ತಿ ಎಂಬುದನ್ನು ವಿಭಾಗ ಮಾಡಿ ತೋರಿಸಿದ್ದಾರೆ. ಮಿತಭಾಷಿಗಳಾದ ರಾಯರು ಅದರ ವಿವರಣೆಯನ್ನು ನ್ಯಾಯ ವಿವರಣದಲ್ಲಿ ನೋಡಿಕೊಳ್ಳಲಿ ಎಂದು ಬಿಟ್ಟದ್ದಾರೆ. ನಾವು ಓದುಗರಿಗೆ ಅಧಿಕರಣ ಗಳ ಸಾರವೂ ತಿಳಿಯಲೆಂಬ ಉದ್ದೇಶದಿಂದ ಶ್ರೀಮದಾಚಾರ್ಯರ ನ್ಯಾಯ ವಿವರ ಣದ ಆಧಾರದ ಮೇಲೆ ಆ ಯುಕ್ತಿಗಳನ್ನು ವಿವರಿಸಿದ್ದೇವೆ. ಮತ್ತು ಖಂಡನೆಗಾಗಿ ಸುಧೆಯಲ್ಲಿ ಅನುವಾದ ಮಾಡಲ್ಪಟ್ಟ ಮತಾಂತರ ಪ್ರಕ್ರಿಯೆಗಳನ್ನು ರಾಯರು ಸ್ಪಷ್ಟವಾಗಿ ವಿವರಿಸಿದ್ದಾರೆ. ಅವುಗಳ ಭಾವವನ್ನೂ ಕೊಟ್ಟಿದ್ದೇವೆ. ಖಂಡನೆಯನ್ನು ಸುಧಾದಿಂದ ತಿಳಿಯಬೇಕು. ಪರಿಮಳದ ಇನ್ನೂ ಎಷ್ಟೋ ವಿಚಾರಗಳು ಉಳಿದು ಹೋಗಿವೆ. ಶ್ರೀಗಳವರ ಆದೇಶದಂತೆ ದ್ವಿತೀಯಾವೃತ್ತಿಯಲ್ಲಿ ಅವುಗಳನ್ನು ಸೇರಿಸುತ್ತೇವೆ. ಈ ವಾಙ್ಮಯಸೇವೆಯ ಸದವಕಾಶವನ್ನು ಕಲ್ಪಿಸಿ ಕೊಟ್ಟಿರುವ ಮತ್ತು

ವಿಶೇಷಾನುಗ್ರಹವನ್ನು ನನ್ನ ಮೇಲೆ ಮಾಡುತ್ತಿರುವ ಶ್ರೀಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದಂಗಳವರಿಗೂ, ನನ್ನನ್ನು ಕರೆದುಕೊಂಡು ಬಂದು ವಿದ್ಯಾಪೀಠಕ್ಕೆ ಸೇರಿಸಿ ಸಚ್ಛಾಸ್ತ್ರಾಭ್ಯಾಸದ ಸೌಭಾಗ್ಯವನ್ನೊದಗಿಸಿಕೊಟ್ಟ ಮತ್ತು ಈಗ ಮುನ್ನಡಿಯನ್ನು ಕೊಟ್ಟು ಅನುಗ್ರಹಿಸಿದ ಪಲಿಮಾರು-ಭಂಡಾರಕೇರಿ ಉಭಯಮಠಾಧೀಶರಾದ ಶ್ರೀ ೧೦೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರಿಗೂ, ಹಾಗೂ ನಮ್ಮನ್ನು ವಿದ್ಯಾಪೀಠದಲ್ಲಿ ಅಕ್ಕರೆಯಿಂದ ಮಕ್ಕಳನ್ನೆಂಬಂತೆ ಬೆಳೆಸಿ ಅಶನವಸನಗಳೊಂದಿಗೆ ವಿದ್ಯೆಯನ್ನೂ ನೀಡಿದ್ದಲ್ಲದೆ ಇಲ್ಲಿಯೇ ಪಾಠಪ್ರವಚನ ಮಾಡುವಅವಕಾಶ ಮಾಡಿ ಕೊಟ್ಟಿರುವ ಮತ್ತು ಪ್ರಸ್ತುತಗ್ರಂಥಕ್ಕೆ ಮುನ್ನಡಿಯನ್ನು ಕೊಟ್ಟುಅನುಗ್ರಹಿಸಿರುವ ಪೂಜ್ಯರಾದ ಶ್ರೀಶ್ರೀ೧೦೦೮ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರಿಗೂ ಭಕ್ತಿ ಕೃತಜ್ಞತಾಪುರಸ್ಸರ ವಾಗಿ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಪರಿಮಳದ ಸಾರಸಂಗ್ರಹ ಮತ್ತು ಅನುವಾದ ಕಾರ್ಯದಲ್ಲಿ ನೆರವಾದ ವೀರನಾರಾಯಣಾಚಾರ್ಯರಿಗೂ, ಈ ಕಾರ್ಯದಲ್ಲಿ ಸೂಕ್ತ ಸಲಹೆಗಳನ್ನು ಕೊಡುವುದಲ್ಲದೆ ಇದನ್ನು ಪರಿಶೀಲಿಸಿ ಕರಡು ಪ್ರತಿಯನ್ನು ತಿದ್ದಿ ವಿಶೇಷವಾಗಿ ಶ್ರಮಿಸಿದ ಶ್ರೀ ಹೆಚ್.ಪಿ. ನಾಗರಾಜಾಚಾರ್ಯ, ಕಡ್ಡೀ ಬದರಿನಾರಾಯಣಾಚಾರ್ಯ ಹಾಗೂ ತಿರುಮಲಾಚಾರ್ಯ ಇವರಿಗೆ, ಅಕ್ಷರ ಜೋಡಣೆ ಮಾಡಿದ ಅನಂತಕೃಷ್ಣ ನಿಜಗಲ್ ಹಾಗೂ ಶ್ರೀನಿವಾಸರಾವ್ ಕೋಡಿಕಲ್ ರವರಿಗೂ ಮತ್ತು ಅತಿ ಶೀಘ್ರದಲ್ಲಿ ಮುದ್ರಣ ಮಾಡಿದ ಪದ್ಮಶ್ರೀ ಪ್ರಿಂಟರ್ಸ ನ ಅನಿಲ್ ಆರ್. ಕಡ್ಡಿ ಮತ್ತುಶ್ರೀಕಾಂತ.ಜೆ.ಕಡ್ಡಿಅವರಿಗೂ ಮುಖಪುಟವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಬಿ.ಪಿ.ಟಿ ಶೆಟ್ಟಿ ಅವರಿಗೂ ಆಭಾರಿಯಾಗಿದ್ದೇನೆ.

'ಗಚ್ಛತಃ ಸ್ಖಲನಂ ಕ್ವಾಪಿ' ಎಂಬಂತೆ ಇದರಲ್ಲಿ ಸಂಭವಿಸಿದ ಪ್ರಮಾದಗಳನ್ನು ಜ್ಞಾನಿಗಳು ಮನ್ನಿಸುತ್ತಾರೆಂಬ ವಿಶ್ವಾಸದೊಂದಿಗೆ ಅಸ್ಮದ್ಗುರ್ವಂತರ್ಗತ - ಮಧ್ವಪತಿ ಶ್ರೀಮನ್ಮೂಲರಘುಪತಿ-ವೇದವ್ಯಾಸದೇವರ ಪಾದಕಮಲಗಳಲ್ಲಿ ಸಮರ್ಪಿಸುತ್ತೇನೆ.

ಬಹುಧಾನ್ಯ- ಆಶ್ವಯುಜ-ಸಪ್ತಮೀ

ಸಜ್ಜನವಿಧೇಯ

**ಶ್ರೀಗುರುವೆಂಕಟಾಚಾರ್ಯರು**

ಪ್ರಾಧ್ಯಾಪಕರು

ಪೂರ್ಣಪ್ರಜ್ಞ ವಿದ್ಯಾಪೀಠ. ಬೆಂಗಳೂರು

# ಪ್ರಾಸ್ತಾವಿಕ

## ವೇದಗಳ ಉದ್ದೇಶ

ಈಶ ಜೀವ ಜಡಾತ್ಮಕವಾದ ಈ ಪ್ರಪಂಚದಲ್ಲಿ ಜಡ ಪದಾರ್ಥಗಳಿಗೆ ದುಃಖವಿಲ್ಲ. ಈಶನಿಗೆ ದುಃಖವಿಲ್ಲ. ಜೀವರಿಗೆ ಮಾತ್ರವೇ ದುಃಖವಿರುವುದು. ಅವರಿಗೆ ಮುಕ್ತಿಯನ್ನು ಕೊಟ್ಟು ದುಃಖ ಪರಿಹರಿಸುವವನು ಪರಮಾತ್ಮ. ಅವನ ಮಹಿಮೆಯನ್ನು ತಿಳಿಸಲು ಪ್ರವೃತ್ತವಾಗಿದೆ ವೇದ.

## ವೇದಪ್ರಾಮಾಣ್ಯ

ಧರ್ಮ ಅಧರ್ಮ ಸ್ವರ್ಗ ನರಕ ಮುಂತಾದ ಅತೀಂದ್ರಿಯ ಪದಾರ್ಥಗಳನ್ನು ಎಲ್ಲ ಮತದವರೂ ಒಪ್ಪಿಯೇ ಇದ್ದಾರೆ. ಆ ಧರ್ಮಾಧರ್ಮಾದಿಗಳ ವಿಷಯದಲ್ಲಿ ಯಾವುದಾದರೂ ಪ್ರಮಾಣವನ್ನು ಹೇಳಲೇಬೇಕು. ಅವುಗಳು ಅತೀಂದ್ರಿಯವಾದುದರಿಂದ ಪ್ರತ್ಯಕ್ಷ ಪ್ರಮಾಣ ವೇದ್ಯವಾಗಲು ಸಾಧ್ಯವಿಲ್ಲ. ಯುಕ್ತಿಗಳಿಂದಲೂ ಧರ್ಮಾದಿಗಳನ್ನು ಸಮರ್ಥಿಸಲು ಸಾಧ್ಯವಿಲ್ಲ. ಜನರು ಅನುಭವಿಸುತ್ತಿರುವ ಸುಖದುಃಖಾದಿಗಳಿಂದ ಪೂರ್ವಜನ್ಮದಲ್ಲಿ ಇವರು ಪಾಪಪುಣ್ಯಗಳನ್ನು ಮಾಡಿದವರು ಎಂದು ಸಾಮಾನ್ಯವಾಗಿ ಸಾಧಿಸಬಹುದಾದರೂ ಸೂಕ್ಷ್ಮವಾಗಿ ಯಾವುದು ಪುಣ್ಯಕರ್ಮ ಯಾವುದು ಪಾಪ ಇತ್ಯಾದಿಯಾಗಿ ಅದರ ವೈವಿಧ್ಯ ಮೊದಲಾದುದನ್ನು ಯುಕ್ತಿಯಿಂದ ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಆಗಮಕ್ಕೇ ಶರಣಾಗಬೇಕು. ಅದರಲ್ಲಿಯೂ ಪೌರುಷೇಯಾಗಮಗಳಿಂದ ಅತೀಂದ್ರಿಯವನ್ನು ಸಾಧಿಸಲು ಹೊರಟರೆ ಯಾವ ಪೌರುಷೇಯಾಗಮವನ್ನು ಅವಲಂಬಿಸಬೇಕು ಎಂದು ಗೊಂದಲ ಉಂಟಾಗುತ್ತದೆ. ಒಂದೊಂದು ಮತದವರೂ ತಮ್ಮ ತಮ್ಮ ಮೂಲ ಪುರುಷನನ್ನೇ ಸರ್ವಜ್ಞ ಪ್ರಾಮಾಣಿಕ ಎಂದು ಮುಂತಾಗಿ ಕಲ್ಪಿಸಿ ಆತನಿಂದ ರಚಿತವಾದ ಆಗಮವೇ ಪ್ರಮಾಣ ಎಂದು ವಾದಿಸುತ್ತಾರೆ. ಅವುಗಳಾದರೂ ಪರಸ್ಪರ ವಿರುದ್ಧವಾಗಿವೆ. ಮತ್ತು ಪೌರುಷೇಯವಾದ್ದರಿಂದ ಪುರುಷ ದೋಷ ಮೂಲಕವಾಗಿ ಅವುಗಳಲ್ಲಿ ದೋಷ ಬಂದಿರಬಹುದೆಂಬ ಸಂದೇಹಕ್ಕೂ ಅವಕಾಶವಿದೆ. ಆಯಾ ಆಗಮಗಳಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದಾಗ ಕೆಲವೊಮ್ಮೆ ಫಲ ಕಂಡದ್ದೂ ಇದೆ. ಫಲ ಸಿಗದೇ ಇದ್ದ ಪ್ರಸಂಗವೂ ಇದೆ.

ಆ ಆಗಮಗಳೇ ಅಪ್ರಮಾಣವಾದ್ದರಿಂದ ಫಲವು ಉಂಟಾಗಲಿಲ್ಲವೋ? ಅಥವಾ ನಮ್ಮ ಅನುಷ್ಠಾನದಲ್ಲಿಯೇ ಲೋಪದೋಷವಿದೆಯೋ ಎಂಬುದಾಗಿ ಸಂದೇಹವೇ ಬರುತ್ತದೆ ಹೊರತು ಯಾವುದೂ ನಿಶ್ಚಯವಾಗುವುದಿಲ್ಲ. ಆದ್ದರಿಂದ ಅತೀಂದ್ರಿಯ ಪದಾರ್ಥಗಳ ಸ್ವರೂಪ ನಿರ್ಧಾರಕ್ಕೋಸ್ಕರವಾಗಿ ನಿತ್ಯವಾದ ಅಪೌರುಷೇಯವಾದ ಒಂದು ಗ್ರಂಥವನ್ನು ಅವಲಂಬಿಸುವುದು ಎಲ್ಲಾದಾರ್ಶನಿಕರಿಗೆ ಅನಿವಾರ್ಯವಾದಾಗ 'ಇದು ಅಕರ್ತೃಕ' ಎಂದು ಪ್ರಸಿದ್ಧವಾದ ವೇದವನ್ನೇ ಅಪೌರುಷೇಯ ಎಂದು ಒಪ್ಪುವುದು ಸೂಕ್ತವಾದ ಮಾರ್ಗ.ಮತ್ತು ವೇದಗಳ ವಿಷಯದಲ್ಲಿ 'ಮೊದಲೇ ಇದ್ದ ವೇದವನ್ನು ಕಲಿಸುತ್ತಿದ್ದೇವೆ ಎಂಬುದಾಗಿಯೇ ಎಲ್ಲ ಅಧ್ಯಾಪಕರೂ ಹೇಳುತ್ತಾರೆ. ಅವರ ಪೂರ್ವಿಕರನ್ನು ಕೇಳಿದರೂ ಅವರೂ  ಹಾಗೆಯೇ ಹೇಳುವವರು. ಅವರ ಪೂರ್ವಿಕರೂ ಅಷ್ಟೇ. ಈ ಪರಂಪರೆಗೆ ಎಲ್ಲಿಯೂ ವಿಚ್ಛೇದವಿಲ್ಲ. ಕುಮಾರ ಸಂಭವಾದಿ ಕಾವ್ಯಗಳಿಗೂ ಮೊದಲೇ ಇದ್ದದ್ದನ್ನು ಕಲಿಸುತ್ತೇವೆ ಎಂಬ ಪರಂಪರೆ ಇದ್ದರೂ ಕಾಳಿದಸನಲ್ಲಿ ಅದಕ್ಕೆ ವಿಚ್ಛೇದವಿದೆ. ಕಾಳಿದಾಸನಿಗಿಂತ ಹಿಂದೆ ಆ ಪರಂಪರೆ ಇಲ್ಲ. ಗೂಢಕರ್ತೃಕ ಕಾವ್ಯದಲ್ಲಿಯೂ ಅವನಿಗಿಂತ ಪೂರ್ವಕಾಲದಲ್ಲಿ ಅಂತಹ ಪರಂಪರೆ ಇರುವುದಿಲ್ಲ. ಆದ್ದರಿಂದ ಅವುಗಳೆಲ್ಲ ಪೌರುಷೇಯ. ವೇದವು ಅಪೌರುಷೆಯ ಎಂದು ಸಿದ್ಧವಾಗುತ್ತದೆ. ವೇದದ್ರಷ್ಟಾರರಾದ ಋಷಿಗಳೂ ಕೂಡ. ಮೊದಲೇ ಇದ್ದ ವೇದವು ನಮಗೆ ಪ್ರತಿಭಾತವಾಗಿದೆ. ಎಂಬುದಾಗಿಯೇ ಹೇಳುತ್ತಾರೆ ಹೊರತು ನಾವು ಮಾಡಿದ್ದೆಂದು ಯಾರೂ ಹೇಳುವುದಿಲ್ಲ. ಭಗವಂತನೂ ಕೂಡ ಮೊದಲೇ ಇದ್ದ ವೇದವನ್ನು ನಾನು ಉಪದೇಶಿಸಿದ್ದೇನೆ ಎಂದೇ ಹೇಳುತ್ತಾನೆ. ಆದ್ದರಿಂದ ವೇದವು ಅಪೌರುಷೇಯ ಎಂದು ತಿಳಿಯಬೇಕು. ಆದರೆ ಯಾರಾದರೊಬ್ಬ ವ್ಯಕ್ತಿಯು ಒಂದು ಕಾವ್ಯವನ್ನು ತಾನೆ ರಚಿಸಿ, ವೇದ ದ್ರಷ್ಟಾರರು ಹೇಳುವಂತೆ, ಮೊದಲೇ ಇದ್ದ ಈ ಕಾವ್ಯವು ನನಗೆ ಪ್ರತಿಭಾತವಾಗಿದೆ ಎಂದು ಹೇಳಿದರೆ ಅದನ್ನೂ ಅಪೌರುಷೇಯ ಎಂದು ಅಂಗೀಕರಿಸಬೇಕಾಗುತ್ತದೆ. ಅವನ ಮಾತಿನಲ್ಲಿ ಅವಿಶ್ವಾಸ ಮಾಡುವುದಾದರೆ ಋಷಿಗಳ ಮಾತಿನಲ್ಲಾದರೂ ಹೇಗೆ ವಿಶ್ವಾಸ ಮಾಡಬಹುದು? ಎಂಬ ಸಂಶಯ ಬರುತ್ತದೆ. ಅದಕ್ಕಾಗಿ ಸ್ಮೃತಿಯಲ್ಲಿ ಹೇಳಿದ ವೇದ ದ್ರಷ್ಟಾರರ ಲಕ್ಷಣಗಳನ್ನು ತಿಳಿದುಕೊಂಡು ಅಂತಹ ಲಕ್ಷಣೋಪೇತರಾದ ವಸಿಷ್ಠಾದಿಗಳ ಮಾತಿನಲ್ಲಿ ವಿಶ್ವಾಸವಿಟ್ಟು ವೇದವನ್ನು ಅಪೌರುಷೇಯ ಎಂದು ನಂಬಬೇಕು.

**ವೇದಗಳ ಆಂತರ್ಯ.**

ಸಮಸ್ತ ವೇದಗಳೂ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ ಎಂಬುದಾಗಿ 'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ' ಎಂಬ ಶ್ರುತಿಯು ಹೇಳುತ್ತಿದೆ. ಇದು ಭಾಲ್ಲವೇಯ ಶ್ರುತಿಯ ವಾಕ್ಯ. ಈ ವಾಕ್ಯವು ಇಂದು ಉಪಲಬ್ಧವಾಗುತ್ತಿಲ್ಲ. ಆದರೆ ಆಕಾರಣದಿಂದ ಇದನ್ನು ಅಲ್ಲಗಳೆಯುವಂತಿಲ್ಲ. ಒಂದು ವೇಳೆ ಇದು ಉಪಲಬ್ಧವಾಗಿಲ್ಲ ಎಂಬ ಕಾರಣದಿಂದ ಇದ್ದನ್ನು ತಿರಸ್ಕರಿಸುವುದಾದರೆ ಪೂರ್ವಮೀಮಾಂಸಾದಲ್ಲಿ ಉದಾಹರಿಸಲ್ಪಟ್ಟಿರುವ ಊರ್ಜಂ ಪಶೂನಾಪ್ನೋತಿ ... ಇತ್ಯಾದಿ ವಾಕ್ಯವನ್ನು, ಶಾಂಕರಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಯಥಾ ಹ್ಯಯಂ ಜ್ಯೋತಿರಾತ್ಮಾ ಇತ್ಯಾದಿ ವಾಕ್ಯವನ್ನೂ, ರಾಮಾನುಜ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಇಂದ್ರಃ ಶಚೀ ಪತಿರ್ಬಲೇನ ಪೀಡಿತಃ ಇತ್ಯಾದಿ ವಾಕ್ಯಗಳನ್ನೂ ಕೈಬಿಡುವ ಪ್ರಸಂಗ ಬರುತ್ತದೆ. ಆದ್ದರಿಂದ ಕೇವಲ ಶ್ರೀಮನ್ಮಾಧ್ವಾಚಾರ್ಯರು ಮಾತ್ರವಲ್ಲದೇ ಇತರ ಆಚಾರ್ಯರೂ ಇಂತಹ ಇಂದು ಅನುಪಲಬ್ಧವಾದ ಶ್ರುತಿಗಳನ್ನು ಉದಾಹರಿಸಿದ ಪ್ರಸಂಗಗಳಿರುವಾಗ ಇವರ ಮೇಲೆ ಮಾತ್ರ ಕಲ್ಪಿತ ಶ್ರುತಿಗಳನ್ನುದಾಹರಿಸುತ್ತಾರೆ ಅದು ಪ್ರಮಾಣವಾಗಲಾರದು ಎಂದು ಆಕ್ಷೇಪಿಸುವುದು ಸರಿಯಲ್ಲ.

'ಯೋ ದೇವಾನಾಂ ನಾಮಧಾ ಏಕ ಏವ, ಸರ್ವೇ ವೇದಾ ಯತ್ಪದಮಾಮನಂತಿ, ವೇದೈಶ್ಚ ಸರ್ವೈರಹಮೇವ ವೇದ್ಯಃ' ಇತ್ಯಾದಿ ಅನೇಕ ಶ್ರುತಿ ಸ್ಮೃತಿ ಪುರಾಣ ವಾಕ್ಯಗಳಿಂದಲೂ ವಿಷ್ಣುವೇ ಸಕಲ ವೇದ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಎಷ್ಟೋ ಸೂಕ್ತಗಳು ಮೇಲ್ನೋಟಕ್ಕೆ ಇಂದ್ರ ಅಗ್ನಿ ವರುಣ ಇತ್ಯಾದಿ ದೇವತೆಗಳನ್ನು ಪ್ರತಿಪಾದಿಸುವಂತೆ ಕಂಡು ಬಂದರೂ ಆ ಸೂಕ್ತಗಳೆಲ್ಲವೂ ಇಂದ್ರ ಅಗ್ನಿ ವರುಣ ಇತ್ಯಾದಿ ಶಬ್ದವಾಚ್ಯನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಆಶಬ್ದಗಳೆಲ್ಲವೂ ಮುಖ್ಯವಾಗಿ ವಿಷ್ಣುವಾಚಕಗಳೇ ಆಗಿವೆ.

ಇಲ್ಲಿ ಒಂದು ಸಂದೇಹ ಬರುತ್ತದೆ - ಅಗ್ನಿ ವರುಣ ಇಂದ್ರ ಇತ್ಯಾದಿ ಶಬ್ದಗಳು ಭಗವಂತನನ್ನೇ ಮುಖ್ಯವಾಗಿ ಪ್ರತಿಪಾದಿಸುವುದಾದರೆ ಮತ್ತು ಇದರಂತೆ ಎಲ್ಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸಿದರೆ ಜಗತ್ತಿನ ವ್ಯವಹಾರವೇ ನಿಂತು ಹೋಗಬೇಕಾಗುತ್ತದೆ. ಯಾವ ವ್ಯವಹಾರ ಮಾಡುವುದಾದರೂ ಅದಕ್ಕೆ ಶಬ್ದ ಬೇಕು. ಎಲ್ಲ ಶಬ್ದಗಳಿಂದಲೂ ಭಗವಂತನೇ ವಾಚ್ಯನಾದಾಗ ನೀರನ್ನು ತಾ (ಜಲ ಮಾನಯ) ಇವೇ ಮೊದಲಾದ ವ್ಯವಹಾರಕ್ಕೆ

ಶಬ್ದವೇ ಇಲ್ಲದಂತಾಗುವುದು ಎಂದು. ಈ ಅನುಪಪತ್ತಿಯ ಪರಿಹಾರಕ್ಕಾಗಿ ಎಲ್ಲ ಶಬ್ದಗಳೂ ಜಗತ್ತಿನಲ್ಲೂ ಅಮುಖ್ಯವಾಗಿ ಪ್ರವೃತ್ತವಾಗುತ್ತವೆ. ಎಂದು ಒಪ್ಪಿದರೆ ಎಲ್ಲ ಶಬ್ದಗಳಿಗೆ ಜಗತ್ತಿನಲ್ಲಿ ಲಕ್ಷಣಾ ವೃತ್ತಿಯನ್ನು ಅಂಗೀಕರಿಸಿದಂತಾಗುತ್ತದೆ. ಆಗ ಗಂಗಾದಿ ಶಬ್ದಗಳಿಂದ ನದಿಯು ವಾಚ್ಯ. ತೀರವು ಮಾತ್ರವೇ ಲಕ್ಷ್ಯ ಎಂಬ ಲೋಕ ಸಿದ್ಧವಾದ ಪ್ರವಾದಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ಅದಕ್ಕಾಗಿ ಎಲ್ಲ ಶಬ್ದಗಳಿಗೆ ವಿಷ್ಣುವಿನಲ್ಲಿ ಪರಮ ಮುಖ್ಯ ವೃತ್ತಿಯನ್ನು ಇತರ ಪದಾರ್ಥಗಳಲ್ಲಿ ಮುಖ್ಯವೃತ್ತಿಯನ್ನೂ ಒಪ್ಪಲಾಗಿದೆ. ಆದ್ದರಿಂದ ಇಂದ್ರ ಅಗ್ನಿ ವರುಣ ಮುಂತಾದ ಶಬ್ದಗಳು ಆಯಾ ದೇವತೆಗಳಿಗೂ ವಾಚಕಗಳೇ ಆಗಿವೆ.

ಆದರೂ ಆ ಶಬ್ದಗಳು ಪರಮ ಮುಖ್ಯ ವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತಿರುವಾಗ ಆ ಶಬ್ದಗಳನ್ನೊಳಗೊಂಡ ಆಯಾ ಸೂಕ್ತಗಳನ್ನು ವಿಷ್ಣು ಸೂಕ್ತಗಳೆಂದು ವ್ಯವಹರಿಸದಂತೆ ಇಂದ್ರ ಸೂಕ್ತ ಮುಂತಾಗಿ ವ್ಯವಹಾರ ಮಾಡುವ ಉದ್ದೇಶ್ಯವೇನು? ಎಂಬ ಸಂಶಯ ಬರುತ್ತದೆ. ಇದಕ್ಕೆ ಬ್ರಹ್ಮ ಸೂತ್ರದಲ್ಲಿಯೇ ಮೂರು ಪ್ರಕಾರವಾಗಿ ಸಮಾಧಾನ ಹೇಳಲಾಗಿದೆ -

ಅಗ್ನಿಸೂಕ್ತವೇ ಮೊದಲಾದ ಸೂಕ್ತಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದವರಿಗೆ ಬ್ರಹ್ಮನು ಅಗ್ನ್ಯಾದಿಗಳಲ್ಲಿಯೇ ಅಭಿವ್ಯಕ್ತನಾಗುವುದರಿಂದ ಆ ಸೂಕ್ತಗಳು ಅಗ್ನ್ಯಾದಿಸೂಕ್ತಗಳೆಂದು ಪ್ರಸಿದ್ಧವಾಗಿವೆ.

ಆಯಾ ಸೂಕ್ತಗಳಿಂದ ಅಗ್ನಿ ಮೊದಲಾದ ದೇವತೆಗಳಲ್ಲಿಯೇ ಬ್ರಹ್ಮನನ್ನು ಉಪಾಸನೆ ಮಾಡುವ ಪ್ರಯುಕ್ತ ಆ ಸೂಕ್ತಗಳು ಅಗ್ನ್ಯಾದಿಸೂಕ್ತಗಳೆಂದು ಪ್ರಸಿದ್ಧ ವಾಗಿವೆ. ಆಯಾ ಸೂಕ್ತಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದವರು ಅಗ್ನಿ ಮೊದಲಾದ ದೇವತೆಗಳಲ್ಲಿ ಅಂತರ್ಯಾಮಿಯಾದ ಬ್ರಹ್ಮನನ್ನು ಪಡೆಯು ತ್ತಾರೆ. ಆದ್ದರಿಂದ ಆ ಸೂಕ್ತಗಳು ಅಗ್ನ್ಯಾದಿಸೂಕ್ತಗಳೆಂದು ಪ್ರಸಿದ್ಧ ವಾಗಿವೆ. ಎಂದು.

### ವ್ಯಾಸಾವತಾರದ ಹಿನ್ನೆಲೆ

ದ್ವಾಪರಯುಗದಲ್ಲೊಮ್ಮೆ ಹನ್ನೆರಡು ವರ್ಷಗಳ ಕಾಲ ಮಳೆ ಬೆಳೆ ಇಲ್ಲದೆ ದುರ್ಭಿಕ್ಷ ಉಂಟಾಯಿತು. ಆಗ ಗೌತಮ ಋಷಿಗಳ ಕ್ಷೇತ್ರದಲ್ಲಿ ಮಾತ್ರ ಅವರ ತಪಸ್ಸಿನ ಪ್ರಭಾವದಿಂದ ಸುಭಿಕ್ಷೆ ಇತ್ತು. ಎಲ್ಲ ಋಷಿಗಳೂ ಗೌತಮ ಕ್ಷೇತ್ರಕ್ಕೆ ಬಂದು ಅಲ್ಲಿ ನೆಲೆಸಿದು. ಹನ್ನೆರಡು ವರ್ಷಗಳ ನಂತರ ಮಳೆ ಬಂದು ಎಲ್ಲ ಕಡೆಯಲ್ಲಿ ಸುಭಿಕ್ಷೆಯುಂಟಾದದ್ದನ್ನು ತಿಳಿದು ಋಷಿಗಳು ತಮ್ಮ ತಮ್ಮ ಆಶ್ರಮಕ್ಕೆ ಹೊರಡಲುದ್ಯುಕ್ತರಾಗಿ ಗೌತಮರಲ್ಲಿ ಅನುಮತಿ ಕೇಳಿದರು. ಅವರು ಸತ್ಸಂಗ

ತಪ್ಪಿಹೋಗುವುದೆಂಬ ಚಿಂತೆಯಿಂದ ಅವರನ್ನು ಬೀಳ್ಕೊಡದೆ ಕಾಲ ಮುಂದೂಡುತ್ತಾ ಬಂದರು.

ಇತ್ತ ಶಿವನ ತಲೆಯಲ್ಲಿದ್ದ ಗಂಗೆಯನ್ನು ಕೆಳಗಿಳಿಸಲು ಯೋಚಿಸುತ್ತಿದ್ದ ಪಾರ್ವತಿಯು ಗಣೇಶನನ್ನು ಪ್ರೇರಿಸಿದಳು. ಗಣೇಶನು ಋಷಿಗಳ ಬಳಿ ಬಂದು ಅವರು ಗೌತಮ ಕ್ಷೇತ್ರದಿಂದ ತಮ್ಮ ಆಶ್ರಮಗಳಿಗೆ ಹಿಂತಿರುಗುವ ಉಪಾಯವನ್ನು ಬೋಧಿಸಿದ. ಋಷಿಗಳು ಗಣೇಶನ ಮಾತಿನಂತೆ ತಮ್ಮ ತಪೋಬಲದಿಂದ ಒಂದು ಬಡಕಲು ಹಸುವನ್ನು ಸೃಷ್ಟಿಸಿ ಗೌತಮರ ಹೊಲಗದ್ದೆಗಳಲ್ಲಿ ಮೇಯಲು ಬಿಟ್ಟರು. ಗೌತಮರು ಅದನ್ನು ಓಡಿಸಲು ಸ್ಪರ್ಶಮಾಡಿದ ಮಾತ್ರದಿಂದಲೇ ಅದು ಸತ್ತು ಹೋಯಿತು. ಗೋಹತ್ಯೆ ಮಾಡಿದವರ ಅನ್ನ ಸ್ವೀಕರಿಸಬಾರದೆಂಬ ನೆಪಒಡ್ಡಿ ಋಷಿಗಳು ತೆರಳಿದರು. ಗೌತಮರು ಚಿರಕಾಲ ತಪಸ್ಸು ಮಾಡಿ ಶಿವನನ್ನೊಲಿಸಿಕೊಂಡು ಗಂಗೆಯನ್ನು ಒದಂಶದಿಂದ ಇಳಿಸಿ ಅದರ ಪ್ರೋಕ್ಷಣೆಯಿಂದ ದನವನ್ನು ಬದುಕಿಸಿದರು. ಬಳಿಕ ಇದೇಕೆ ಹೀಗಾಯಿತೆಂದು ಧ್ಯಾನಿಸಿ ಎಲ್ಲವನ್ನೂ ಯೋಗ ದೃಷ್ಟಿಯಿಂದ ತಿಳಿ ಬ್ರಾಹ್ಮಣರ ಮೇಲಿನ ಸಿಟ್ಟಿನಿಂದ ಕಲ್ಯಾವೇಶಕ್ಕೊಳಗಾಗಿ ಸರ್ವತ್ರ ಜ್ಞಾನ ಲೋಪವಾಗಲಿ ಎಂದು ಶಪಿಸಿದರು. ಅದರಿಂದ ಸಜ್ಜನರಲ್ಲೆಲ್ಲ ತತ್ತ್ವಜ್ಞಾನವು ಲೋಪವಾಯಿತು. ಆಗ ಸಜ್ಜನರ ಮೇಲಿನ ಕರುಣೆಯಿಂದ ಬ್ರಹ್ಮಾದಿಗಳೆಲ್ಲರೂ ಭಗವಂತನನ್ನು ಪ್ರಾರ್ಥಿಸಲು ಭಗವಂತನು ದ್ವಾಪರಾಂತ್ಯದಲ್ಲಿ ಪರಾಶರರಿಂದ ಸತ್ಯವತೀ ದೇವಿಯಲ್ಲಿ ಪ್ರಾದುರ್ಭವಿಸಿದನು. ವೇದವ್ಯಾಸರೆಂದು ಪ್ರಖ್ಯಾತನಾದನು. ಆ ವ್ಯಾಸರು ಆವಾಗ ಸ್ವತಃ ಬೇರೆಬೇರೆಯಾಗಿದ್ದ ಅಕ್ಕಿ ಬೇಳೆ ಮೊದಲಾದ ಧಾನ್ಯಗಳು ಕಲ ಬೆರಕೆಯಾಗಿ ಒಂದು ರಾಶಿಯಲ್ಲಿರುವಂತೆ ವೇದಗಳೂ ಕೂಡ ಸ್ವತಃ ಋಕ್ ನಿಗದ ಮೊದಲಾಗಿ ನಾಲ್ಕುಭಾಗವಾಗಿದ್ದರೂ ಪ್ರತ್ಯೇಕ ಪ್ರತ್ಯೇಕವಾಗಿ ಬೇರ್ಪಡಿಸಲು ಸಾಧ್ಯವಾಗದಂತೆ ಏಕರಾಶಿಯಂತಾಗಿದ್ದುದನ್ನು ಕಂಡು ಅವುಗಳನ್ನು ಬೇರ್ಪಡಿಸಿದರು. ಅವುಗಳನ್ನು ಪುನಃ ಅನೇಕ ಶಾಖೆಗಳನ್ನಾಗಿ ಮಾಡಿ ಶಿಷ್ಯರಿಗೆ ಉಪದೇಶಿಸಿದರು. ಅವುಗಳ ಅರ್ಥ ನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನೂ ರಚಿಸಿದರು.

ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಂ।
ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರ ಮಚೀಕ್ಲೃಪತ್ ।
ತಸ್ಮಾತ್ ಸೂತ್ರಾರ್ಥ ಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ ॥

ಮ.ತಾ.ನಿ.

ಆಪಾತತಃ ಪರಸ್ಪರ ವಿರುದ್ಧವೆಂದು ತೋರುವ ವೇದ ವಾಕ್ಯಗಳಿಂದ ಬರುವ ಸಂಶಯ ವಿಪರೀತ ಜ್ಞಾನಗಳನ್ನು ಪರಿಹರಿಸಲು ವ್ಯಾಸರು ಬ್ರಹ್ಮ ಸೂತ್ರಗಳನ್ನು ರಚಿಸಿದ್ದಾರೆ. ಆದ್ದರಿಂದ ಸೂತ್ರ ಸೂಚಿತವಾದ ಅರ್ಥವನ್ನೂ ಇಟ್ಟುಕೊಂಡೇ ಸಕಲ ಶಾಸ್ತ್ರಗಳ ಅರ್ಥವನ್ನು ತಿಳಿಯಬೇಕು.

**ಬ್ರಹ್ಮಸೂತ್ರಗಳು**

ಬ್ರಹ್ಮ ಎಂದರೆ ವೇದ. ಅದರ ಅರ್ಥವನ್ನು ನಿರ್ಣಯಿಸುವ ಸೂತ್ರಗಳೇಬ್ರಹ್ಮಸೂತ್ರಗಳು.

ಬ್ರಹ್ಮ ಎಂದರೆ ಪರಬ್ರಹ್ಮ, ವಿಷ್ಣು. ಅವನ ಸ್ವರೂಪವನ್ನು ನಿರ್ಣಯಿಸುವ ಸೂತ್ರಗಳೇ ಬ್ರಹ್ಮ ಸೂತ್ರಗಳು. ಶ್ರೀಮಜ್ಜಯತೀರ್ಥರೇ ತಮ್ಮ ಶ್ರೀಮನ್ನ್ಯಾಯ ಸುಧಾದಲ್ಲಿ ಈ ಅರ್ಥವನ್ನು ಹೇಳಿದ್ದಾರೆ - 'ಬ್ರಹ್ಮ ವೇದಃ ತದರ್ಥಃ ಪರಬ್ರಹ್ಮ ವಾ। ತಸ್ಯ ಸೂತ್ರಾಣಿ ಬ್ರಹ್ಮಸೂತ್ರಾಣಿ । ಸಕಲ ವೇದಾರ್ಥಭೂತಸ್ಯ ಪರಬ್ರಹ್ಮಣೋ ವಿಷ್ಣೋಃ ಸ್ವರೂಪ ನಿರ್ಣಯಾರ್ಥಾನಿ ಸೂತ್ರಾಣೀತಿ ಯಾವತ್ ।

ಬ್ರಹ್ಮ ಎಂದರೆ ಜ್ಞಾನ ಪರಿಪೂರ್ಣರಾದ ಶ್ರೀವ್ಯಾಸರು. ತತ್ಪ್ರಣೀತ ಸೂತ್ರಗಳಾದ್ದರಿಂದ ಬ್ರಹ್ಮ ಸೂತ್ರಗಳೆಂಬ ಅರ್ಥವನ್ನೂ ಇಟ್ಟುಕೊಳ್ಳಬಹುದು.

**ಸೂತ್ರವೆಂದರೆ** - ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಮ್।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ।

ಅಲ್ಪಾಕ್ಷರತ್ವ - ಎಷ್ಟು ಅಕ್ಷರಗಳಿಲ್ಲದಿದ್ದರೆ ವಿವಕ್ಷಿತಾರ್ಥವು ತಿಳಿಯುವುದಿಲ್ಲವೋ ಅಷ್ಟಕ್ಕಿಂತ ಅಧಿಕಾಕ್ಷರಗಳು ಇರಕೂಡದು. ಅಸಂದಿಗ್ಧಂ-ಸಂದೇಹಕ್ಕೆ ಆಸ್ಪದವಿಲ್ಲದಂತೆ ವಿಷಯವನ್ನು ನಿರೂಪಿ ಸಬೇಕು. ಸಾರವತ್ - ಇತರ ಶಾಸ್ತ್ರಗಳಿಂದ ಲಭ್ಯವಾಗದ ಉತ್ತಮ ವಿಷಯವನ್ನು ಪ್ರತಿಪಾದಿಸಬೇಕು. ವಿಶ್ವತೋಮುಖಂ - ವೇದಗಳಲ್ಲಿರುವ ಅನೇಕ ಶಾಖಾ ನಿರ್ಣಯಕವಾಗಿರಬೇಕು. ಅಸ್ತೋಭಂ-ಪ್ರಕೃತಕ್ಕೆ ಅನುಪಯುಕ್ತವಾದ, ಆದರೂ, ಸಾಮವೇದದಲ್ಲಿ ಬಳಸುವಂತಹ ಸ್ತೋಭಾಕ್ಷದಂತಹ ಅಕ್ಷರಗಳು ಇರಕೂಡದು. ಅನವದ್ಯಂ - ಅಪಶಬ್ದಗಳಿರಕೂಡದು. ಇಂಥ ಸೂತ್ರಗಳನ್ನು ಮಾತ್ರ ಸೂತ್ರಗಳೆಂದು ಕರೆಯುವರು.

ಬ್ರಹ್ಮ ಸೂತ್ರಗಳೇ ಮುಖ್ಯಸೂತ್ರಗಳು. ಏಕೆಂದರೆ ಅನನ್ಯಲಭ್ಯವಾದ ಅತ್ಯುತ್ತಮ ವಿಷಯನಾದ ಬ್ರಹ್ಮನನ್ನು ಇವು ಪ್ರತಿಪಾದಿಸುತ್ತವೆ. ಮತ್ತು ವೇದಗಳು ಅನಂತ. 'ಅನಂತಾ ವೈ ವೇದಾಃ'. ಬ್ರಹ್ಮಸೂತ್ರಗಳು ಮಾತ್ರ ಕೇವಲ ೫೬೪.

ಹೀಗಿರುವಾಗಿ ಈ ಕೆಲವೇ ಸೂತ್ರಗಳು ಅನಂತ ವೇದಗಳ ಅರ್ಥಕ್ಕೆ ಹೇಗೆ ನಿರ್ಣಯಕವಾಗಬಲ್ಲವು ಎಂದು ಸಂಶಯ ಪಡಯಬೇಕಾಗಿಲ್ಲ. ಅನಂತ ವೇದಗಳನ್ನು ಬ್ರಹ್ಮ ದೇವರಿಗೆ ಉಪದೇಶಿಸುತ್ತಿರುವ ವೇದವ್ಯಾಸರೇ 'ಓಂ ಗತಿ ಸಾಮಾನ್ಯಾತ್ ಓಂ 'ಎಂದಿದ್ದಾರೆ. ಈ ಬ್ರಹ್ಮ ಸೂತ್ರಗಳಲ್ಲಿ ನಿರ್ಣಯಿಸಲ್ಪಟ್ಟ ಪ್ರಮೇಯಕ್ಕೆ ವಿರುದ್ಧವಾಗಿ ಅನಂತ ವೇದಗಳಲ್ಲಿ ಅಂತರ್ಗತವಾದ ಯಾವ ವಾಕ್ಯವೂ ಹೇಳುತ್ತಿಲ್ಲ ಎಂಬುದನ್ನು ಖಚಿತವಾಗಿ ಹೇಳಿದ್ದಾರೆ. 'ಸರ್ವೇ ವೇದಾಃ ಯುಕ್ತಯಃ ಸುಪ್ರಮಾಣಾಃ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ। ಪ್ರಕಾಶಯಂತೇ ನ ವಿರೋಧಃ ಕುತಶ್ಚಿತ್ ವೇದೇಷು ಸರ್ವೇಷು ತಥೇತಿಹಾಸೇ।' ಎಂಬ ಶ್ರುತಿವಾಕ್ಯವೂ ಇದನ್ನೇ ಹೇಳುತ್ತದೆ. ಆದ್ದರಿಂದಲೂ ಈ ಸೂತ್ರಗಳಲ್ಲಿಯೇ ಮುಖ್ಯವಾಗಿ ವಿಶ್ವತೋ ಮುಖತ್ವ ಇರುವ ಪ್ರಯುಕ್ತ ಇವುಗಳೇ ಮುಖ್ಯವಾಗಿ ಸೂತ್ರಗಳಾಗಿವೆ. ಉಳಿದೆಲ್ಲ ಸೂತ್ರಗಳೂ ಔಪಚಾರಿಕವಾಗಿ ಸೂತ್ರಗಳಾಗಿವೆ. ಆದ್ದರಿಂದ ಯಾವ ವಿಶೇಷಣವನ್ನೂ ಕೊಡದೇ ಕೇವಲ 'ಸೂತ್ರ' ಪದವನ್ನು ಪ್ರಯೋಗಿಸಿದರೆ ಅದು ಬ್ರಹ್ಮಸೂತ್ರವನ್ನೇ ತಿಳಿಸುತ್ತದೆ.

' ನಿರ್ವಿಶೇಷಿತ ಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯತಃ.'

ಪ್ರತಿಯೊಂದು ಸೂತ್ರವೂ ಶ್ರುತ್ಯರ್ಥ ನಿರ್ಣಾಯಕ ನ್ಯಾಯ(ಯುಕ್ತಿ) ಸೂಚಕವಾದ ಪ್ರಯುಕ್ತ ಈ ಸೂತ್ರಗಳನ್ನು ಬ್ರಹ್ಮಮೀಮಾಂಸಾ ಎಂದೂ ಕರೆಯುತ್ತಾರೆ.

ಇವುಗಳಿಗೇ ಶಾರೀರಕ ಮೀಮಾಂಸಾ ಎಂಬ ಮತ್ತೊಂದು ಹೆಸರೂ ಇದೆ. ಶಾರೀರಕ ಎಂದರೆ ವಿಷ್ಣು. 'ಶಾರೀರೌ ತಾವು ಭೌಜ್ಞೇಯೌ ಜೀವಶ್ಚೇಶ್ವರ ಸಂಜ್ಞಿತಃ ಅನಾದಿ ಬಂಧನಸ್ತ್ವೇಕೋ ನಿತ್ಯ ಮುಕ್ತ ಸ್ತಥಾಽಪರಃ' (ಜೀವ ಮತ್ತು ಈಶ್ವರ ಇಬ್ಬರೂ ಶಾರೀರರೆನಿಸಿದ್ದಾರೆ. ಅವರಲ್ಲಿ ಜೀವನು ಅನಾದಿ ಬಂಧನ ಉಳ್ಳವನು. ಈಶ್ವರನು ನಿತ್ಯಮುಕ್ತನು) ಎಂದು ಭಗವದ್ಗೀತಾ ಸಪ್ತಮಾಧ್ಯಾಯದ ಭಾಷ್ಯದಲ್ಲಿ ಉದಾಹರಿಸಲಾಗಿದೆ. ಜೀವರ ಶರೀರದಲ್ಲಿ ನಿಯಾಮಕನಾಗಿರುವುದರಿಂದ ವಿಷ್ಣುವು ಶಾರೀರ ಶಾರೀರ ಏವ ಶಾರೀರಕಃ ಎಂಬ ವ್ಯುತ್ಪತ್ತಿಯಿಂದ ಶಾರೀರನಾದ ವಿಷ್ಣುವೇ ಶಾರೀರಕ ಅಥವಾ ಶಾರೀರನಾದ ಜೀವನಿಗೆ ಕ-ಸುಖವನ್ನು ಕೊಡುವುದರಿಂದ ಶಾರೀರಕ ವಿಷ್ಣು. ಆದ್ದರಿಂದ ಶಾರೀರಕ ಮೀಮಾಂಸೆ ಎಂದರೂ ಬ್ರಹ್ಮ ಮೀಮಾಂಸಾ ಎಂದೇ ಅರ್ಥ.

ಅದ್ವೈತ ಮತದ ಪ್ರಕಾರವಾಗಿ ಶಾರೀರಕ ಮೀಮಾಂಸಾ ಎಂಬುದಕ್ಕೆ ಜೀವ ಬ್ರಹ್ಮೈಕ್ಯ ಮೀಮಾಂಸಾ ಎಂದು ಅರ್ಥ ಮಾಡಲಾಗಿದೆ. ಆದರೆ ಪೃಥಗುಪದೇಶಾತ್ ನೇತರೋನುಪಪತ್ತೇಃ ಭೇದವ್ಯಪದೇಶಾತ್ ಇತ್ಯಾದಿ ಅನೇಕ ಭೇದ ಪ್ರತಿಪಾದಕ ಸೂತ್ರಗಳಿಂದ ವಿರುದ್ಧವಾದುದರಿಂದಲೂ ಒಂದಾದರೂ ಐಕ್ಯ ಪ್ರತಿಪಾದಕ ಸೂತ್ರವಿಲ್ಲದಿರುವುದರಿಂದಲೂ ಆ ಅರ್ಥವೂ ವ್ಯಾಸರಿಗೆ ಅಸಮ್ಮತ ಎನ್ನುವುದು ಸ್ಪಷ್ಟ.

## ಬ್ರಹ್ಮ ಸೂತ್ರಗಳಲ್ಲಿ ಸರ್ವೋತ್ಕೃಷ್ಟ ಪ್ರಾಮಾಣ್ಯ

ಯಾವುದಾದರೊಂದು ಶಾಸ್ತ್ರದ ವಿಷಯದಲ್ಲಿ ಅದು ಅಪ್ರಮಾಣ ಎಂದು ಸಂಶಯ ಪಡಬೇಕಾದರೆ ಅದರಲ್ಲಿ ದೋಷ ಸಂಶಯ ಬರಬೇಕು. ಬೌದ್ಧಾದಿ ಶಾಸ್ತ್ರಗಳಲ್ಲಿ ದೋಷ ಸಂಶಯ ಬರುವ ಪ್ರಯುಕ್ತ ಅದರ ವಿಷಯದಲ್ಲಿ ಪ್ರಾಮಾಣ್ಯ ಸಂಶಯವು ಬರುತ್ತದೆ. ಆದರೆ ಸರ್ವಜ್ಞರಾದ ವ್ಯಾಸರಿಂದ ಪ್ರಣೀತವಾದ ಬ್ರಹ್ಮ ಸೂತ್ರಗಳಲ್ಲಿ ದೋಷ ಸಂಶಯಕ್ಕೆ ಅವಕಾಶವಿಲ್ಲ. ಏಕೆಂದರೆ

ಆಪ್ತಿ ಮೂಲತಯಾ ತೇನ ಶ್ರುತಿ ಮೂಲತಯಾ ತಥಾ।
ಯುಕ್ತಿ ಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ।
ದೃಶ್ಯತೇ ಬ್ರಹ್ಮಸೂತ್ರಾಣಾಮ್.....

ಎಂದು ಹೇಳಿದಂತೆ ಬ್ರಹ್ಮ ಸೂತ್ರಗಳುಆಪ್ತಿ ಮೂಲ ಶ್ರುತಿ ಮೂಲ ಮತ್ತು ಯುಕ್ತಿ ಮೂಲಗಳಾಗಿವೆ. ಬ್ರಹ್ಮಸೂತ್ರಗಳನ್ನು ರಚಿಸಿದ ವ್ಯಾಸರು ನಿರ್ದುಷ್ಟ ಗುಣ ಪೂರ್ಣನಾದ ಶ್ರೀಮನ್ನಾರಾಯಣಾವತಾರಭೂತರಾದುದರಿಂದ ವಿವಕ್ಷಿತಾರ್ಥ ತತ್ತ್ವ ಜ್ಞಾನ ಇಂದ್ರಿಯ ಪಾಟವಾದಿಗಳುಳ್ಳವದಾದುದರಿಂದ ಆಪ್ತರೇ ಆಗಿದ್ದಾರೆ. ಶ್ರೋತೃಗಳಾದ ಬ್ರಹ್ಮ ರುದ್ರಾದಿ ದೇವತೆಗಳಂತೂ ಉತ್ತಮಾಧಿಕಾರಿಗಳಾಗಿದ್ದಾರೆ. ಸಜ್ಜನರಲ್ಲಿ ಜ್ಞಾನ ಲೋಪವಾದಾಗ ಜ್ಞಾನ ಕಾರ್ಯಕ್ಕಾಗಿ ಅವತರಿಸಬೇಕೆಂದು ಬ್ರಹ್ಮಾದಿಗಳು ಪ್ರಾರ್ಥಿಸಿದಾಗ ಅವತರಿಸಿ ಈ ಶಾಸ್ತ್ರವನ್ನು ರಚಿಸಿದ್ದರಿಂದ ಅನುಕೂಲವಾದ ಪ್ರಸಂಗವೂ ಇದೆ. ಇದರಿಂದ ಬ್ರಹ್ಮ ಸೂತ್ರಗಳಿಗೆ ಆಪ್ತಿ ಮೂಲತ್ವವು ಸಿದ್ಧವಾಯಿತು. ಮತ್ತು ಬ್ರಹ್ಮ ಸೂತ್ರಗಳು ಶ್ರುತಿ ಸಂವಾದಿ ಹಾಗೂ ಯುಕ್ತಿಯುಕ್ತವೂ ಆದ್ದರಿಂದ ಇದರಲ್ಲಿ ಅಪ್ರಾಮಾಣ್ಯ ಸಂದೇಹಕ್ಕೆ ಎಲ್ಲಿ ಅವಕಾಶ? ಇಂತಹ ಪ್ರಮಾಣ ಬೇರೊಂದಿಲ್ಲ.

ಜೈಮಿನ್ಯಾದಿ ರಚಿತವಾದ ಕರ್ಮಮೀಮಾಂಸಾದಿ ಶಾಸ್ತ್ರಗಳು ಸಾಕಷ್ಟು ಇವೆ. ಅವುಗಳು ಶ್ರುತಿ ಸಂವಾದಿ ಯುಕ್ತಿಸಂವಾದಿ ಮತ್ತು ಆಪ್ತವಾಕ್ಯಗಳೂ ಆಗಿವೆ.

ಆದರೂ ವೇದವ್ಯಾಸರಲ್ಲಿರುವ ನಿರವಧಿಕವಾದ ಆಪ್ತತ್ವ ಅವರಲ್ಲಿಲ್ಲ. ಏಕೆಂದರೆ ಅವರಲ್ಲಿ ವ್ಯಾಸರಲ್ಲಿರುವಂತೆ ನಿವಧಿಕವಾದ ಸರ್ವಜ್ಞತ್ವಾದಿಗಳು ಇಲ್ಲವಷ್ಟೆ? ಆದ್ದರಿಂದಲೇ ಶ್ರೀಮದಾಚಾರ್ಯರು ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ಎಂದಿದ್ದಾರೆ.

## ಅನುತ್ತಮವಾದ ಪರವಿದ್ಯೆ.

'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ । ತತ್ರಾಪರಾ ಋಗ್ವೇದೋ ..ಅಥ ಪರಾ ಯಯಾ ತದಕ್ಷರಮಧಿಗಮ್ಯತೇ।' ಎಂಬುದಾಗಿ ಆಥರ್ವಣೋಪನಿಷತ್ತು ಬ್ರಹ್ಮ ಸೂತ್ರಗಳನ್ನು ಪರವಿದ್ಯೆ ಎಂದು ನಿರೂಪಿಸಿದೆ. ಪರವಿದ್ಯೆ ಎಂದರೆ ಅಕ್ಷರನಾಮಕನಾದ ಪರಮಾತ್ಮನ ಜ್ಞಾನ ಸಾಧನವಾದ ವಿದ್ಯೆ ಎಂದರ್ಥ. ಋಗ್ವೇದಾದಿಗಳು ವಿಷ್ಣುವಾಚಕವಾಗದೇ ಇದ್ದಾಗ ಅಪರವಿದ್ಯೆಯೆಂದೂ ವಿಷ್ಣು ವಾಚಕವಾದಾಗ ಪರವಿದ್ಯೆಯೆಂದೂ ಕರೆಯಲ್ಪಡು ತ್ತವೆ. ಉಪನಿಷತ್ತುಗಳಿಗೆ ವಿಷ್ಣುವಾಚಕತ್ವದಶೆ ಇಲ್ಲದ ಪ್ರಸಂಗವೇ ಇಲ್ಲ. ಆದ್ದರಿಂದ ಅವುಗಳು ಕೇವಲ ಪರವಿದ್ಯೆಯೇ ಆಗಿವೆ. ಆದರೂ ಋಗ್ವೇದಾದಿಗಳಾಗಲೀ ಉಪನಿಷತ್ತುಗಳಾಗಲೀ ನಿರ್ಣಾಯಕವಾದ ಬ್ರಹ್ಮಸೂತ್ರಗಳ ಸಹಾಯದಿಂದಲೇ ವಿಷ್ಣುವನ್ನು ತಿಳಿಸುವ ಪ್ರಯುಕ್ತ ಬ್ರಹ್ಮಸೂತ್ರಗಳೇ ಮುಖ್ಯ ಪರವಿದ್ಯೆಯೆನಿಸುತ್ತವೆ. ಆದ್ದರಿಂದಲೇ ಶ್ರೀಮದಾಚಾರ್ಯರು 'ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್' ಎಂದಿದ್ದಾರೆ. ಅನುತ್ತಮ ಎಂದರೆ ಅದಕ್ಕಿಂತ ಉತ್ತಮವಾದ ಶಾಸ್ತ್ರ ಬೇರೊಂದಿಲ್ಲ ಎಂದರ್ಥ.

## ಬ್ರಹ್ಮ ಸೂತ್ರಗಳ ಅಗಾಧತೆ

ಶ್ರೀಮನ್ಮಧ್ವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯ, ಅನುಭಾಷ್ಯ (ಅನುವ್ಯಾಖ್ಯಾನ) ನ್ಯಾಯವಿವರಣ ಮತ್ತು ಅಣುಭಾಷ್ಯ ಎಂಬ ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಆ ಗ್ರಂಥಗಳಲ್ಲಿ ಸೂತ್ರಗಳಿಗೇನೇನು ವ್ಯಾಖ್ಯಾನ ಮಾಡಿದ್ದಾರೆ ಅದಷ್ಟೇ ಸೂತ್ರಗಳ ಹೃದಯ ಎಂದುಭ್ರಮೆ ಬರುವ ಸಂಭವವಿದೆ. ಹಾಗಾಗಬಾರದೆಂದು ಶ್ರೀಮದಾಚಾರ್ಯರೇ ಬ್ರಹ್ಮಸೂತ್ರಗಳ ಗಾಂಭೀರ್ಯವನ್ನು ಕುರಿತು ಹೇಳುತ್ತಾರೆ.

ವಾಸುದೇವಾದಿರೂಪೇಣ ಚತುರ್ಮೂರ್ತಿಸ್ತ್ವ ಸರ್ವಶಃ ।<br>
ಅಥವಾ ಪಂಚಮೂರ್ತಿಃ ಸಃ ಪ್ರೋಕ್ತೋಧಿಕರಣಂ ಪ್ರತಿ ।

ಪ್ರತಿಸೂತ್ರಂ ಪ್ರತಿಪದಂ ಪ್ರತ್ಯಕ್ಷರಮಥಾಪಿ ವಾ ।
ತೈಸ್ತೈರ್ಯುಕ್ತಿ ಶ್ರುತಿನ್ಯಾಯ ವಿಶೇಷೈಃ ಯೋಗ್ಯತಾ ಯಥಾ ।
ಬೃಹತ್ತಂತ್ರ ಪ್ರಮಾಣೇನ ಬಹ್ವರ್ಥಮಪಿ ಸಂಗ್ರಹಾತ್ ।
ಉಚ್ಯತೇ ನರಬುದ್ಧೀನಾಮಪಿ ಕಿಂಚಿದ್ಗ್ರಾಹಾರ್ಥತಃ ।

ಈ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಪ್ರತಿಯೊಂದು ಅಧಿಕರಣದಲ್ಲಿ ಪ್ರತಿಯೊಂದು ಸೂತ್ರದಲ್ಲಿ ಪ್ರತಿಯೊಂದು ಪದದಲ್ಲಿ ಪ್ರತಿಯೊಂದು ಅಕ್ಷರದಲ್ಲಿಯೂ ಆಯಾ ಚೇತನರ ಯೋಗ್ಯತಾನುಸಾರವಾಗಿ ಯುಕ್ತಿ ಶ್ರುತಿ ನ್ಯಾಯ ವಿಶೇಷಗಳಿಂದ ವಾಸುದೇವಾದಿ ಚತುರ್ಮೂರ್ತಿ ಅಥವಾ ಪಂಚಮೂರ್ತಿಯಾದ ಪರಮಾತ್ಮನು ಪ್ರತಿಪಾದಿಸಲ್ಪಟ್ಟಿದ್ದಾನೆ. ಇದು ಬೃಹತ್ತಂತ್ರ ಪ್ರಮಾಣ ಸಿದ್ಧವಾದ ವಿಷಯವಾಗಿದೆ. ಆದರೂ ಮಾನವರ ಬುದ್ಧಿಯು ಅಲ್ಪಗ್ರಾಹಿ ಎಂಬ ಕಾರಣದಿಂದ ನಾವು ಸ್ವಲ್ಪವನ್ನೇ ಹೇಳಿದ್ದೇವೆ ಮಂದ ಬುದ್ಧಿಯುಳ್ಳ ಮಾನವರಿಗೆ ಮಾತ್ರ ಭಾಷ್ಯವು ಅಲ್ಪಾರ್ಥ ಪ್ರತಿಪಾದಕವೆಂದು ತೋರುತ್ತದೆ. ಶೇಷದೇವರೇ ಮೊದಲಾದ ಮಹಾಜ್ಞಾನಿಗಳಿಗೆ ಭಾಷ್ಯದಲ್ಲಿಯೇ ಅರ್ಥವಿಶೇಷಗಳು ತಿಳಿಯುತ್ತವೆ.

'ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।
ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ।

## ಬ್ರಹ್ಮ ಸೂತ್ರಗಳೆಲ್ಲವೂ ಸಿದ್ಧಾಂತ ಸೂತ್ರಗಳೇ

ಇತರ ಭಾಷ್ಯ ಕಾರರು ಬ್ರಹ್ಮಸೂತ್ರಗಳಲ್ಲಿ ಕೆಲವು ಸೂತ್ರಗಳನ್ನು ಪೂರ್ವಪಕ್ಷ ಸೂತ್ರಗಳೆಂದು ಉಳಿದವುಗಳನ್ನು ಸಿದ್ಧಾಂತ ಸೂತ್ರಗಳೆಂದೂ ವಿಂಗಡಿಸಿದ್ದಾರೆ. ಆದರೆ ಶ್ರೀಮನ್ಮಧ್ವಾಚಾರ್ಯರ ಪ್ರಕಾರ ಎಲ್ಲವೂ ಸಿದ್ಧಾಂತ ಸೂತ್ರಗಳೇ ಹೊರತು ಪೂರ್ವಪಕ್ಷ ಸೂತ್ರಗಳೆಂಬ ವಿಭಾಗವಿಲ್ಲ. ಇದರಿಂದ ಪ್ರತಿಯೊಂದು ಸೂತ್ರಕ್ಕೂ ಶ್ರುತ್ಯರ್ಥನಿರ್ಣಾಯಕತ್ವವನ್ನು ಹೇಳಿದಂತಾಗುವುದು. ಇಲ್ಲದಿದ್ದರೆ ಪೂರ್ವಪಕ್ಷ ಸೂತ್ರಗಳೆಂದು ಪರಿಗಣಿಸಲ್ಪಟ್ಟ ಸೂತ್ರಗಳಿಗೆ ಶ್ರುತ್ಯರ್ಥ ನಿರ್ಣಾಯಕತ್ವವೇ ಇಲ್ಲದಂತಾಗಿ ಸೂತ್ರವೇ ಅಲ್ಲವೆಂದಾಗುವುದು.

ಕೆಲವು ಸೂತ್ರಗಳಲ್ಲಿ ಜೈಮಿನಿ ಆಶ್ಮರಥ್ಯ ಮೊದಲಾದ ಋಷಿಗಳ ಉಲ್ಲೇಖವು ಕಂಡು ಬಂದು ಇದು ವೇದವ್ಯಾಸರು ಸಿದ್ಧಾಂತವಲ್ಲವೇನೋ ಎಂಬ ಸಂಶಯವು ಉಂಟಾಗುತ್ತದೆ. ಈ ಸಂಶಯವನ್ನು ಶ್ರೀಮದಾಚಾರ್ಯರೇ ಪಾದ್ಮ ಪುರಾಣದ ಪ್ರಮಾಣ ವಾಕ್ಯವನ್ನು ದಾಹರಿಸಿ ಪರಿಹರಿಸಿದ್ದಾರೆ -

ಕೃಷ್ಣ ದ್ವೈಪಾಯನಮತಾದೇಕದೇಶವಿದಃ ಪರೇ ।
ವದಂತಿ ತೇ ಯಥಾಪ್ರಜ್ಞಂ ನ ವಿರೋಧಃ ಕಥಂಚನ ।

ಜೈಮಿನ್ಯಾದಿಗಳ ಅಭಿಪ್ರಾಯವೆಲ್ಲವೂ ವೇದವ್ಯಾಸರ ಅಭಿಪ್ರಾಯವೇ ಆಗಿರುತ್ತದೆ. ಜೈಮಿನ್ಯಾದಿಗಳು ಶ್ರೀವ್ಯಾಸರ ಮತದ ಏಕದೇಶವನ್ನು ತಮ್ಮ ಬುದ್ಧಿಗಳನುಸಾರವಾಗಿ ತಿಳಿದು ಹೇಳುತ್ತಾರೆ. ಶ್ರೀವೇದವ್ಯಾಸರಾದರೂ ತಮ್ಮ ಶಿಷ್ಯರೇ ಆದ ಜೈಮಿನ್ಯಾದಿಗಳ ಮೇಲಿನ ವಾತ್ಸಲ್ಯದಿಂದ ಅವರ ಕೀರ್ತಿಗೋಸ್ಕರವಾಗಿ ಅವರ ಹೆಸರನ್ನು ಉಲ್ಲೇಖಿಸಿ ಅವರ ಮತವೆಂದು ಪ್ರತಿಪಾದಿಸಿದ್ದಾರೆ. ಇದು ಅವರ ದೊಡ್ಡಗುಣ. ಅವರೆಲ್ಲರ ಮತಗಳೂ ಕೂಡ ಅಧಿಕಾರಿ ಭೇದದಿಂದ ಪ್ರವೃತ್ತವಾಗಿರುವ ಪ್ರಯುಕ್ತ ವಿರುದ್ಧವೂ ಅಲ್ಲ.

## ಬ್ರಹ್ಮಸೂತ್ರಗಳ ವಿಷಯ ವಿಭಾಗ

ಬ್ರಹ್ಮ ಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳು - ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ ಮತ್ತು ಫಲಾಧ್ಯಾಯ. ಒಂದೊಂದು ಅಧ್ಯಾಯದಲ್ಲಿ ನಾಲ್ಕು ನಾಲ್ಕು ಪಾದಗಳಿವೆ.

ಸಮನ್ವಯಾಧ್ಯಾಯದ ನಾಲ್ಕು ಪಾದಗಳಲ್ಲಿ -

ಅನ್ಯತ್ರಪ್ರಸಿದ್ಧನಾಮ ಸಮನ್ವಯ ,. ಅನ್ಯತ್ರ ಪ್ರಸಿದ್ಧ ಲಿಂಗ ಸಮನ್ವಯ,. ಉಭಯತ್ರ ಪ್ರಸಿದ್ಧ ನಾಮಲಿಂಗ ಸಮನ್ವಯ, . ಅನ್ಯತ್ರೈವ ಪ್ರಸಿದ್ಧ ನಾಮಲಿಂಗ ಸಮನ್ವಯ ಇವುಗಳನ್ನು ವಿಷ್ಣುವಿನಲ್ಲಿ ತೋರಿಸಲಾಗಿದೆ.

ಅವಿರೋಧಾಧ್ಯಾಯದ ನಾಲ್ಕು ಪಾದಗಳಲ್ಲಿ ಯುಕ್ತಿ ವಿರೋಧ ಪರಿಹಾರ ,. ಸಮಯ ವಿರೋಧ ಪರಿಹಾರ ,.ಶ್ರುತಿ ವಿರೋಧ ಪರಿಹಾರ ,. ನ್ಯಾಯೋಪೇತಿ ಶ್ರುತಿ ವಿರೋಧ ಪರಿಹಾರ. ಇವುಗಳನ್ನು ತೋರಿಸಲಾಗಿದೆ.

ಸಾಧನಾಧ್ಯಾಯದ ೪ ಪಾದಗಳಲ್ಲಿವೈರಾಗ್ಯ,. ಭಕ್ತಿ ,. ಉಪಾಸನಾ,. ಜ್ಞಾನ. ಇವುಗಳನ್ನು ವಿವರಿಸಲಾಗಿದೆ.

ಫಲಾಧ್ಯಾಯದ ೪ಪಾದಗಳಲ್ಲಿ ಕರ್ಮಕ್ಷಯ ,. ದೇವತೆಗಳ ಲಯ ಹಾಗೂ ಬೇರೆಯವರ ಉತ್ಕ್ರಾಂತಿ,. ಮಾರ್ಗ,. ಭೋಗ ಇವುಗಳನ್ನು ವಿವರಿಸಲಾಗಿದೆ.

## ಬ್ರಹ್ಮಸೂತ್ರಗಳ ಪ್ರಮೇಯ (ಸ್ಥೂಲಪರಿಚಯ)

ಸರ್ವದೋಷವಿಹೀನತ್ವಂ ಗುಣೈಃ ಸ ರ್ವೈರುದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಹಿ ।

ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।
ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ
ತಸ್ಮಾದೇತದ್ವಿರುದ್ಧಂ ಯತ್ ಮೋಹಾರ್ಥಂ ತದುದಾಹೃತಮ್।

ಬ್ರಹ್ಮಮೀಮಾಂಸಾ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ಸರ್ವಗುಣ ಪೂರ್ಣತ್ವವು ಪ್ರತಿಪಾದಿಸಲ್ಪಟ್ಟಿದೆ. ಎರಡನೆಯ ಅಧ್ಯಾಯದಲ್ಲಿ ಸರ್ವದೋಷ ದೂರತ್ವವು ಪ್ರತಿಪಾದಿತವಾಗಿದೆ. ಎರಡನೆಯ ಅಧ್ಯಾಯವು ಅವಿರೋಧಾಧ್ಯಾಯ. ಗುಣಪೂರ್ಣತ್ವದ ವಿಷಯದಲ್ಲಿ ಶ್ರುತ್ಯಾದಿ ವಿರೋಧವನ್ನು ಪರಿಹರಿಸುತ್ತದೆ. ಗುಣಪೂರ್ಣತ್ವವು ಶ್ರುತ್ಯಾದಿ ವಿರುದ್ಧವಾದ ಪಕ್ಷದಲ್ಲಿ ಜ್ಞಾನಾದಿ ಗುಣಗಳು ಸಿದ್ಧಿಸದೇ ಅಜ್ಞಾನಾದಿ ದೋಷಗಳು ಸಂಭಾವಿತವಾಗುತ್ತವೆ. ವಿರೋಧವನ್ನು ದೂರೀಕರಿಸಿದಾಗ ಗುಣಪೂರ್ಣತ್ವವು ಸಿದ್ಧವಾಗಿ ತನ್ಮೂಲಕ ನಿರ್ದೋಷತ್ವವೂ ಸಿದ್ಧವಾಗುತ್ತದೆ. ಇದರಂತೆ ಪ್ರಥಮಾಧ್ಯಾಯವು ಸಮನ್ವಯಾಧ್ಯಾಯವಾದರೂ ಅದು ಬ್ರಹ್ಮನಲ್ಲಿ ಸಕಲ ಶಬ್ದ ಸಮನ್ವಯ ಮಾಡುವುದರ ಮೂಲಕ ಸಕಲ ವೇದ ಪ್ರತಿಪಾದ್ಯ ಗುಣಗಳನ್ನೇ ಭಗವಂತನಲ್ಲಿ ಸಮರ್ಥಿಸುತ್ತದೆ. 'ಓಂ ಉಭಯ ವ್ಯಪದೇಶಾತ್ತ್ವಹಿ ಕುಂಡಲವತ್ ಓಂ' ಎಂಬ ಅಧಿಕರಣದಲ್ಲಿ ಅಧಿಷ್ಠಾನ ಭಿನ್ನ ಭಿನ್ನವಾದರೂ ತದ್ಗತ ಭಗವದ್ರೂಪಗಳು ಅಭಿನ್ನ ಎಂದು ಸಮರ್ಥಿಸಲಾಗಿದೆ. ನೇತರೋಽನುಪಪತ್ತೇಃ ಪೃಥಗುಪದೇಶಾತ್ ಇವೇ ಮೊದಲಾದ ಅನೇಕ ಸೂತ್ರಗಳಲ್ಲಿ ಭೇದವು ಹೇಳಲ್ಪಟ್ಟಿದೆ. ಓಂ ತತ್ತು ಸಮನ್ವಯಾತ್ ಎಂಬಲ್ಲಿ ಸರ್ವವೇದೇಡ್ಯತ್ವವೂ, ಇಯದಾಮನನಾತ್ ಎಂಬಲ್ಲಿ ತಾರತಮ್ಯವೂ 'ವಿದ್ಯೈವ ತು ನಿರ್ಧಾರಣಾತ್' ಎಂಬಲ್ಲಿ ಜ್ಞಾನದಿಂದಲೇ ಮುಕ್ತಿ ಎಂಬುದೂ ಸಮರ್ಥಿಸಲ್ಪಟ್ಟಿವೆ.

### ಬ್ರಹ್ಮ ಸೂತ್ರದ ಭಾಷ್ಯಗಳು

ಬ್ರಹ್ಮ ಸೂತ್ರಗಳ ಮೇಲೆ ಶ್ರೀಮದಾಚಾರ್ಯರು ಭಾಷ್ಯರಚಿಸುವುದಕ್ಕಿಂತ ಪೂರ್ವದಲ್ಲಿ ೨೧ ಜನರು ಭಾಷ್ಯಗಳನ್ನು ರಚಿಸಿದ್ದಾರೆ

೧) ಭಾರತೀಶವಿಜಯ ೨) ಸಚ್ಚಿದಾನಂದ ೩) ಬ್ರಹ್ಮಘೋಷ ೪) ಶತಾನಂದ ೫) ಉದ್ವರ್ತ ೬) ವಿಜಯ ೭) ರುದ್ರಭಟ್ಟ ೮)ವಾಮನ ೯) ಯಾದವ ಪ್ರಕಾಶ ೧೦) ರಾಮಾನುಜ ೧೧) ಭರ್ತೃ ಪ್ರಪಂಚ ೧೨) ದ್ರವಿಡ ೧೩) ಬ್ರಹ್ಮ ದತ್ತ ೧೪) ಭಾಸ್ಕರ ೧೫) ವಿಶಾಖ ೧೬) ವೃತ್ತಿಕಾಂಶ ೧೭) ವಿಜಯಭಟ್ಟ ೧೮) ವಿಷ್ಣುಕ್ರಾಂತ ೧೯) ವಾದೀಂದ್ರ ೨೦) ಮಾಧವದಾಸಕ ೨೧) ಶಂಕರ

ಈ ಇಪ್ಪತ್ತೊಂದು ಜನರ ಭಾಷ್ಯಗಳಿದ್ದರೂ ವೇದವ್ಯಾಸರಿಗೆ ಇದಾವುದೂ ಸಮ್ಮತವಾಗಲಿಲ್ಲ. ಆದ್ದರಿಂದಲೇ ಶ್ರೀಮದಾಚಾರ್ಯರಿಗೆ ಬದರೀಕಾಶ್ರಮದಲ್ಲಿ ಆಜ್ಞೆ ಮಾಡಿದರಂತೆ 'ಕುರು ಸೂತ್ರ ಭಾಷ್ಯಮವಿಲಂಬಿತಂ ವ್ರಜೇಃ ಸುಮತೇನ ಯೋಜಯ ಕವೇ ಶ್ರುತಿಸ್ಮೃತೀಃ' (ಇಲ್ಲಿಂದ ಹಿಂತಿರುಗಿರಿ. ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿರಿ. ಶ್ರುತಿಸ್ಮೃತಿಗಳ ಸಮೀಚೀನವಾದ ಹಾರ್ದವನ್ನು ಪ್ರಕಟ ಪಡಿಸಿರಿ.) ಬಳಿಕ ಈ ಆಜ್ಞೆಯಂತೆ ಮಧ್ವರು ಬ್ರಹ್ಮ ಸೂತ್ರಭಾಷ್ಯವನ್ನು ರಚಿಸಿದರು. ಅದು ವ್ಯಾಸದೇವ ಹೃದಯಾತಿವಲ್ಲಭವಾಯಿತು. ತಾರ್ಕಿಕ ಶಿಖಾಮಣಿಗಳಾದ ಶೋಭನಭಟ್ಟರೇ ಮೊದಲಾದ ಪಂಡಿತರು ಅದನ್ನು ಸಭೆಗಳಲ್ಲಿ ಕೊಂಡಾಡಿದರು.

**ಭಾಷ್ಯದ ಲಕ್ಷಣ.**

ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಕಾರಿಭಿಃ ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ।

ಯಾವ ಗ್ರಂಥದಲ್ಲಿ ಸೂತ್ರಗಳನ್ನೇ ಹೋಲುವ ಸಂಕ್ಷಿಪ್ತಪದಗಳಿಂದ ಸೂತ್ರಾರ್ಥವು ವರ್ಣಿಸಲ್ಪಡುವುದೋ ಮತ್ತು ತನ್ನ (ಆ ಗ್ರಂಥದ) ಪದಗಳೂ ವರ್ಣಿಸಲ್ಪಡುತ್ತವೆಯೋ ಆ ಗ್ರಂಥವು ಭಾಷ್ಯವೆನಿಸುತ್ತದೆ. ಶ್ರೀಮದಾಚಾರ್ಯರ ಭಾಷ್ಯವೇ ಮುಖ್ಯವಾದ ಅರ್ಥದಲ್ಲಿ ಭಾಷ್ಯವೆನಿಸಿದೆ. ಏಕೆಂದರೆ ಆರಂಭದಲ್ಲಿ 'ದ್ವಾಪರೇ ಸರ್ವತ್ರ....' ಇತ್ಯಾದಿಯಾಗಿ ಹೇಳಿ ಅವುಗಳನ್ನೇ 'ಸಂಕೀರ್ಣಬುದ್ಧಯೋ ದೇವಾಃ......'ಇತ್ಯಾದಿ ಪ್ರಮಾಣವಚನಗಳಿಂದ ವಿವರಿಸಿದ್ದಾರೆ.

**ಅನುವ್ಯಾಖ್ಯಾನದ ಆವಶ್ಯಕತೆ.**

'ಭಾಷ್ಯಂ ಚಾತ್ಯರ್ಥ ವಿಸ್ತರಂ' ಎಂದು ಹೇಳಿದಂತೆ ಸೂತ್ರಭಾಷ್ಯದಲ್ಲಿ ಅನೇಕ ಅರ್ಥಗಳು ಅಡಗಿವೆ. ಅದು ಸಾಗರವಿದ್ದಂತೆ ಮಂದರಿಗೆ ಅದರಿಂದ ಯುಕ್ತಿ ರತ್ನಗಳನ್ನು ಆರಿಸಿ ತೆಗೆಯುವುದು ಅಸಾಧ್ಯ. ಆದರೆ ದುರ್ಮತಗಳನ್ನು ನಿರಾಕರಿಸಲು ಅಂಥ ಯುಕ್ತಿಗಳ ಆವಶ್ಯಕತೆ ಇತ್ತು. 'ಯುಕ್ತಯೋ ನೋ ದುರದ್ಧರಾಃ ।'ಮನೋಮಾಂದ್ಯಾತ್, ತತೋ ಗ್ರಂಥಂ ವ್ಯಕ್ತ ತರ್ಕತತಿಂ ಕುರು' ಎಂದು ಶಿಷ್ಯರು ಪ್ರಾರ್ಥಿಸಿದರು. ಅವರ ಮೇಲಿನ ದಯೆಯಿಂದ ಆಚಾರ್ಯರು ಮಂದಮನಸ್ಕರಿಗೂ ಸುಬೋಧವಾಗುವಂತೆ ಸ್ಪಷ್ಟಯುಕ್ತಿಗಳಿಂದ ಕೂಡಿದ ಅನುವ್ಯಾಖ್ಯಾನವನ್ನು ರಚಿಸಿದರು - ಅದರ ಆವಶ್ಯಕತೆಯನ್ನು ಆಚಾರ್ಯರೇ ತಮ್ಮ ಗ್ರಂಥದಲ್ಲಿ ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ಎಂದು

ಸ್ಪಷ್ಟೀಕರಣಕ್ಕಾಗಿ ಅನುವ್ಯಾಖ್ಯಾನ ರಚಿತವಾಗಿದೆ. ಎಂದಿದ್ದಾರೆ. ಸ್ಪಷ್ಟೀಕರಣವೆಂದರೇನೆಂಬುದನ್ನು ಶ್ರೀಮಜ್ಜಯತೀರ್ಥರು ನ್ಯಾಯಸುಧಾದಲ್ಲಿ ತಿಳಿಸಿದ್ದಾರೆ -ಸ್ಪಷ್ಟೀಕರಣಂ ಚಾನೇಕ ವಿಧಂ ....

೧) ಭಾಷ್ಯದಲ್ಲಿ ಹೇಳದಿರುವುದನ್ನು ಇಲ್ಲಿ ಹೇಳಲಾಗಿದೆ.

(ಉದಾ -೧ .ಪದಗಳಿಗೆ ಸಿದ್ಧಾರ್ಥಬೋಧಕತ್ವ - ')

(೨. ಅತಃ ಶಬ್ದದ ನಾನಾ ಅರ್ಥಗಳು.)

೨) ಅತಿಸಂಕ್ಷಿಪ್ತವಾದುದನ್ನು ವಿಸ್ತಾರಗೊಳಿಸುವುದು

ಉದಾ- ಭಾಷ್ಯದಲ್ಲಿ ಸಂಕ್ಷಿಪ್ತವಾಗಿ ಹೇಳಲ್ಪಟ್ಟ ಮಾಂತ್ರವರ್ಣಿಕ ಸಮಾಖ್ಯೆಯನ್ನು ಅನುವ್ಯಾಖ್ಯಾನದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

೩) ಅತಿವಿಸ್ತಾರವಾಗಿ ಭಾಷ್ಯದಲ್ಲಿ ನಿರೂಪಿಸಿದ್ದನ್ನು ಸಂಕ್ಷೇಪಗೊಳಿಸಲಾಗಿದೆ.

ಉದಾ- ಪ್ರಥಮಾಧ್ಯಾಯದ ಮೂರನೇ ಪಾದಾರ್ಥವನ್ನು ಕೇವಲ ಪೂರ್ವಪಕ್ಷಸಿದ್ಧಾಂತ ನ್ಯಾಯಮಾಲಾ ನಿರೂಪಣೆಯ ಮೂಲಕ ಸಂಗ್ರಹಿಸಲಾಗಿದೆ.

೪) ಬೇರೆಬೇರೆ ಪ್ರಸಂಗಗಳಲ್ಲಿ ಬಂದುದನ್ನು ಒಂದೇ ಕಡೆ ನಿರೂಪಿಸುವುದು.

ಉದಾ - ಚತುರ್ಥಾಧ್ಯಾಯ ಭಾಷ್ಯದಲ್ಲಿ ವಿಕ್ಷಿಪ್ತವಾಗಿ ವರ್ಣಿಸಲ್ಪಟ್ಟ ಶೇಷ ಮಾರ್ಗ ಗರುಡಮಾರ್ಗಗಳನ್ನು ಅನುವ್ಯಾಖ್ಯಾನದಲ್ಲಿ 'ಸೋಮಸ್ತುವಾರೀಶ ಯುತಃ 'ಎಂಬಲ್ಲಿ ಕ್ರೋಡೀಕರಿಸಿದ್ದಾರೆ.

೫) ಭಾಷ್ಯದಲ್ಲಿ ಹೇಳಲ್ಪಟ್ಟ ಅಂಶವನ್ನು ಇಲ್ಲಿ ಉಪಪಾದಿಸಲಾಗಿದೆ.

ಉದಾ - ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ತತ್ಪ್ರಸಾದತಃ ।

ಅಚೇತನ ಸ್ವಭಾವಸ್ತು ವಿವರಾದಿಃ ಕಥಂ ಭವೇತ್ ॥

ಎಂಬಲ್ಲಿ ಅಧಿಕಾಶಂಕಾ ಪ್ರದರ್ಶನ ಪೂರ್ವಕವಾಗಿ ಭಾಷ್ಯೋಕ್ತವಾದುದನ್ನು ಉಪಪಾದಿಸಲಾಗಿದೆ.

೬) ಅಪವ್ಯಾಖ್ಯಾನ ನಿರಾಸದ ಮೂಲಕ ದೃಢೀಕರಿಸುವಿಕೆ.

ಉದಾ - 'ಇತ್ಯುಕ್ತೇಃ ಬಂಧ ಮಿಥ್ಯಾತ್ವಂ ನೈವ ಮುಕ್ತಿರಪೇಕ್ಷ್ಯತೇ 'ಎಂಬಲ್ಲಿ ಅಪವ್ಯಾಖ್ಯಾನ ನಿರಾಸದ ಮೂಲಕ ಭಾಷ್ಯೋಕ್ತ ಪ್ರಥಮ ಸೂತ್ರಾರ್ಥವನ್ನು ದೃಢೀಕರಿಸಿದ್ದಾರೆ.

**ಶ್ರೀಮನ್ಯಾಯ ಸುಧಾ ಗ್ರಂಥವು ಶ್ರೀಜಯತೀರ್ಥರ ಮೇರುಕೃತಿ**

'ಪಶ್ಯಂತೋऽಪಿ ನ ಪಶ್ಯಂತಿ ಮೇರೋಃ ರೂಪಂ ವಿಪಶ್ಚಿತಃ 'ಎಂದು ಹೇಳಿದಂತೆ ಸುಧಾ ಗ್ರಂಥವನ್ನು ಎಷ್ಟು ಬಾರಿ ಅವಲೋಕನ ಮಾಡಿದರೂ ತಿಳಿಯುವ ಅಂಶಗಳು ಉಳಿದೇ ಇರುತ್ತವೆ. ಅನುವ್ಯಾಖ್ಯಾನವನ್ನು ಕುರಿತು ಶ್ರೀಜಯತೀರ್ಥರು 'ಅನುವ್ಯಾಖ್ಯಾನ ನಲಿನೇಚಂಚರೀಕತಿ ಮೇ ಮನಃ' ನನ್ನ ಮನಸ್ಸು ದುಂಬಿಯಂತೆ ಪುನಃ ಪುನಃ ಅನುವ್ಯಾಖ್ಯಾನದ ಒಂದೊಂದು ಪದ್ಯದ ಸಾರವನ್ನು ಹೀರಲು ಹಾತೊರೆಯುತ್ತಿದೆ ಎಂದು ಹೇಳಿದಂತೆ ಶ್ರೀಮಂತ್ರಾಲಯ ಪ್ರಭುಗಳು

' ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಗರ್ಭಿತಾ ।
ಪ್ರತಿಭಾತಿ ಸುಧಾऽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ।'

ಶ್ರೀಮನ್ನ್ಯಾಯ ಸುಧಾ ಗ್ರಂಥದ ಪ್ರತಿಯೊಂದು ಪದ ಅಕ್ಷರಗಳೂ ಭಾವ ಪರಿಪೂರ್ಣವಾಗಿವೆ. ಎಂದು ಈ ಗ್ರಂಥದ ಮಹಿಮೆಯನ್ನು ಕೊಂಡಾಡಿದ್ದಾರೆ.

ದ್ವೈತಸಿದ್ಧಾಂತದ ಯಾವ ಪ್ರಮೇಯದ ವಿಷಯದಲ್ಲಿ ಸಂದೇಹ ಬಂದರೂ ಅದಕ್ಕೆ ಸೂಕ್ತ ಪರಿಹಾರ ಶ್ರೀಮನ್ನ್ಯಾಯಸುಧಾದಲ್ಲಿದೆ. ದ್ವೈತ ಸಿದ್ಧಾಂತದ ವಿಶ್ವಕೋಶ ಇದು. ಜೈನ, ಬೌದ್ಧ, ಮೀಮಾಂಸಾ ನ್ಯಾಯ ವೈಶೇಷಿಕ ಭಾಸ್ಕರ ರಾಮಾನುಜ ಶಾಂಕರ ಮೊದಲಾದ ಇತರ ದರ್ಶನಗಳ ಕೂಲಂಕಷ ವಿಮರ್ಶೆ ಈ ಗ್ರಂಥದಲ್ಲಿದೆ.

**ಪರಿಮಳ**

ಶ್ರೀರಾಘವೇಂದ್ರಗುರುಗಳು ಶ್ರೀಮನ್ನ್ಯಾಯಸುಧಾ ಗ್ರಂಥದ ಮೇಲೆ ರಚಿಸಿದ ಟಿಪ್ಪಣಿಯೇ ಪರಿಮಳ ಎನಿಸಿದೆ. ಈ ಗ್ರಂಥವು 'ರೂಪಮನ್ಯದಿವ ಧನ್ಯಮಾತ್ಮನಃ' ಎಂದು ಹೇಳಿದಂತೆ ಗುರುರಾಜರ ಮತ್ತೊಂದು ರೂಪದಂತಿದೆ. ಆದ್ದರಿಂದಲೇ ಅವರು ಶ್ರೀಪರಿಮಳಾಚಾರ್ಯರೆಂದು ಪ್ರಖ್ಯಾತರಾಗಿದ್ದಾರೆ.

**ಪ್ರಥಮಾಧ್ಯಾಯ**

ಪ್ರಥಮಪಾದದ ಆರಂಭದಲ್ಲಿ ಶಮಾದಿ ಸಂಪನ್ನನಾದ ಅಧಿಕಾರಿಯೂ ಜೀವಾತಿರಿಕ್ತ ಬ್ರಹ್ಮರೂಪ ವಿಷಯವೂ ಮೋಕ್ಷರೂಪ ಪ್ರಯೋಜನವೂ ಅವುಗಳ ಪರಸ್ಪರ ಸಂಬಂಧವೂ ಇರುವುದರಿಂದ ಬ್ರಹ್ಮ ವಿಚಾರವನ್ನು ಮಾಡಬೇಕೆಂದು ಹೇಳಿ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬ ಶ್ರುತ್ಯರ್ಥವನ್ನು ನಿರ್ಣಯಿಸಿದ್ದಾರೆ. ಇಲ್ಲಿರುವ ಬ್ರಹ್ಮ ಶಬ್ದಕ್ಕೆ ಜೀವ ಎಂಬ ಅರ್ಥವನ್ನಿಟ್ಟುಕೊಳ್ಳಬಾರದು. ಅದೇ ಶ್ರುತಿಯಲ್ಲಿ ಮುಂದೆ 'ಯತೋವಾ ಇಮಾನಿ' ಎಂಬುದಾಗಿ ಜಗನ್ನಿಮಿತ್ತ ಕಾರಣತ್ವರೂಪ ಬ್ರಹ್ಮ ಲಕ್ಷಣವನ್ನು ಹೇಳಿದ್ದಾರೆ. ಅದು ಜೀವನಲ್ಲಿಲ್ಲ. ಅನುಮಾನ ಮತ್ತು ಪಾಶುಪತಾದ್ಯಾಗಮಗಳಿಂದ ರುದ್ರಾದಿಜೀವರು ಜಗತ್ಕಾರಣ ಎಂದು ಕಲ್ಪಿಸಬಾರದು. ಜಗತ್ಕಾರಣನು ಋಗ್ವೇದಾದಿ ಶಾಸ್ತ್ರಗಳಿಂದ ಮಾತ್ರವೇದ್ಯ. ರುದ್ರಾದಿಗಳೇ ಜಗತ್ಕಾರಣರೆಂದು ಶಾಸ್ತ್ರ ಹೇಳುತ್ತದೆ ಎಂದೂ ಶಂಕಿಸಬಾರದು. ಉಪಕ್ರಮ ಉಪಸಂಹಾರ ಮೊದಲಾದ ತಾತ್ಪರ್ಯಲಿಂಗಗಳಿಂದ ವಿಚಾರ ಮಾಡಿದಾಗ ವಿಷ್ಣುವೇ ಜಗತ್ಕಾರಣ ಎಂದು ನಿರ್ಣಯವಾಗುತ್ತದೆ. 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಯ ಪ್ರಕಾರ ಬ್ರಹ್ಮನು ವಾಚ್ಯನೇ ಅಲ್ಲ ಎಂದು ಶಂಕಿಸಕೂಡದು. ಅವನಿಗೆ ವಾಚ್ಯತ್ವವನ್ನು ಅಂಗೀಕರಿಸದಿದ್ದರೆ ಶ್ರುತಿಯಲ್ಲಿ ಹೇಳಲ್ಪಟ್ಟ ವೇದ್ಯತ್ವವೇ ಅನುಪಪನ್ನವಾದೀತು. ಆದ್ದರಿಂದ ಅವನು ವಾಚ್ಯನೇ ಆಗಿದ್ದಾನೆ. ಅವನು ಸಾಕಲ್ಯೇನ ವಾಚ್ಯನಲ್ಲ ಎಂಬ ಅಭಿಪ್ರಾಯದಿಂದ ಯತೋ ವಾಚೋ ಎಂಬ ಶ್ರುತಿಯು ಪ್ರವೃತ್ತವಾಗಿದೆ. ಎಂದು ಪಂಚಾಧಿಕರಣೆಯಲ್ಲಿ ಹೇಳಲಾಗಿದೆ. ಮುಂದೆ ಬ್ರಹ್ಮನಲ್ಲಿ ಸಕಲ ಶ್ರುತಿ ಸಮನ್ವಯವನ್ನು ಸ್ಪಷ್ಟೀಕರಿಸಲು, ಆನಂದಮಯಾದಿಅಧಿಕರಣಗಳು ಪ್ರವೃತ್ತವಾಗಿವೆ.

ತೈತ್ತಿರೀಯೋಪನಿಷತ್ತಿನಲ್ಲಿ ಬಂದಿರುವ ಅನ್ನಮಯಾದಿ ಪ್ರಕರಣದಲ್ಲಿ ವಿಷ್ಣುವಿನಲ್ಲಿಯೇ ಮುಖ್ಯವಾದ ಬ್ರಹ್ಮಶಬ್ದವು ಅನೇಕ ಬಾರಿ ಶ್ರುತವಾಗಿರುವುದರಿಂದ ಅನ್ನಮಯಾದಿ ಶಬ್ದವಾಚ್ಯ ವಿಷ್ಣುವೇ ಆಗಿದ್ದಾನೆ ಎಂದು ಆನಂದ ಮಯಾಧಿಕರಣದಲ್ಲಿ ಹೇಳಿದ್ದಾರೆ. ಅಂತಃಸ್ಥತ್ವಾಧಿಕರಣದಲ್ಲಿ ಇಂದ್ರಾದಿ ದೇವತಾ ವಾಚಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ. ಆಕಾಶಾಧಿಕರಣದಲ್ಲಿ ಆಕಾಶಾದಿ ಭೂತವಾಚಕ ಶಬ್ದಗಳನ್ನೂ, ಪ್ರಾಣಾಧಿಕರಣದಲ್ಲಿ ಅಧ್ಯಾತ್ಮಗತ (ದೇಹದಲ್ಲಿರುವ ಪ್ರಾಣಾದಿ ವಾಚಕಗಳಾದ) ಪ್ರಾಣಾದಿ ಶಬ್ದಗಳನ್ನೂ, ಜ್ಯೋತಿರಧಿಕರಣದಲ್ಲಿ ಸೂಕ್ತಗತ ಅಶೇಷ ,ನಾಮಗಳನ್ನೂ

ಗಾಯತ್ರ್ಯಧಿಕರಣದಲ್ಲಿ ಅಧಿವೇದಗತವಾದ ಗಾಯತ್ರೀ ಮೊದಲಾದ ಶಬ್ದಗಳನ್ನೂ ಸಮನ್ವಯಗೊಳಿಸಲಾಗಿದೆ. ಪಾದಾಂತ್ಯ ಪ್ರಾಣಾಧಿಕರಣದಲ್ಲಿ - ಐತರೇಯಾರಣ್ಯಕದಲ್ಲಿ ಬಂದಿರುವ 'ತಾ ವಾ ಏತಾ ... ಮನೋ ವಾಕ್‌ಪ್ರಾಣಃ' ಎಂಬ ನಿರವಾಕಾಶ ಶ್ರುತಿಯನ್ನು ಸಮನ್ವಯಗೊಳಿಸಿದ್ದಾರೆ.

**ಎರಡನೇ ಪಾದದಲ್ಲಿ** - 'ಏತಮಸ್ಯಾಂ ಏತಂ ದಿವಿ' ಎಂಬ ಐತರೇಯ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಗತತ್ವವನ್ನೂ 'ಸರ್ವಂ ವಾ ಅತ್ತೀತಿ' ಎಂಬಲ್ಲಿ ಹೇಳಲ್ಪಟ್ಟ ಅತ್ತೃತ್ವ (ಸರ್ವಸಂಹರ್ತೃತ್ವ)ವನ್ನೂ 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಎಂಬಲ್ಲಿ ಶ್ರುತವಾದ ಹೃದಯಗುಹಾ ಪ್ರವಿಷ್ಟತ್ವವನ್ನೂ,'ಯ ಏಷೋಽಂತರಕ್ಷಣಿ 'ಎಂಬಲ್ಲಿ ಶ್ರುತವಾದ ಚಕ್ಷುರಂತಃ ಸ್ಥಿತ್ವಾ ರಮಣ ಕರ್ತೃತ್ವ (ಕಣ್ಣಿನೊಳಗಿದ್ದು ಕ್ರೀಡಿಸುವಿಕೆ) ಎಂಬ ಧರ್ಮವನ್ನೂ, 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ' ಎಂಬಲ್ಲಿ ಹೇಳಲ್ಪಟ್ಟ ಅಂತರ್ಯಾಮಿತ್ವವನ್ನೂ 'ಯತ್ತದದ್ರೇಶ್ಯಮಗ್ರಾಹ್ಯಂ' ಎಂಬಲ್ಲಿ ಶ್ರುತವಾದ ಸಾಕಲ್ಯೇನ ದೃಶ್ಯತ್ವಾಭಾವವೇ ಮೊದಲಾದ ಅಭಾವರೂಪ ಧರ್ಮಗಳನ್ನೂ ಸಮನ್ವಯಗೊಳಿಸಿದ್ದಾರೆ. ಮತ್ತು 'ಯಸ್ತ್ವೇತಮೇವಂ ... ಆತ್ಮಾನಂ ವೈಶ್ವಾನರ ಮುಪಾಸ್ತೇ 'ಎಂಬಲ್ಲಿರುವ ವೆಶ್ವಾನರ ಎಂಬ ನಾಮ ಸಮನ್ವಯ ಮಾಡುವ ಮೂಲಕ ಪಾಚಕತ್ವಾದಿ ಅನೇಕ ಧರ್ಮ ಸಮನ್ವಯವನ್ನು ತೋರಿಸಿದ್ದಾರೆ.

ಮೂರನೆಯ ಪಾದದಲ್ಲಿ- 'ಯಸ್ಮಿನ್ ದ್ಯೌಃ ಪೃಥಿವೀಚಾಂತರಿಕ್ಷ-ಮೋತಮ್। ಮನಃ ಸಹ ಪ್ರಾಣೈಶ್ಚ ಸರ್ವೈ ಎಂಬಲ್ಲಿ ಹೇಳಲ್ಪಟ್ಟ 'ದ್ಯುಲೋಕ, ಭೂಮಿ, ಅಂತರಿಕ್ಷ ಇತ್ಯಾದಿ ಸರ್ವಾಧಾರತ್ವವನ್ನೂ 'ಏತಸ್ಮಿನ್ ಬ್ರಹ್ಮ ಪುರೇ ದಹರಂ .. ದಹರೇಽಸ್ಮಿನ್ ಅಂತರ ಆಕಾಶಃ' ಎಂಬಲ್ಲಿ ಶ್ರುತವಾದ ಹೃತ್ಪದ್ಮಸ್ಥತ್ವವನ್ನೂ, ತದೇತದಿತಿ ಮನ್ಯತೇ.. ಕಥಂ ನು ತದ್ವಿಜಾನೀಯಾಂ ಎಂಬಲ್ಲಿ ಶ್ರುತವಾದ ಜ್ಞಾನಾರ್ಥವಾಗಿ ಪ್ರಾರ್ಥಿಸಲ್ಪಡುವಿಕೆ (ಆನುಕೂಲ್ಯೇನ ಗೃಹ್ಯಮಾಣತ್ವ) ಎಂಬ ಧರ್ಮವನ್ನೂ ಸವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದ್ರವತಿ ಸ್ವಪ್ನಾಯ್ಯೈವ ಎಂಬಲ್ಲಿ ಹೇಳಲ್ಪಟ್ಟ ಸ್ವಪ್ನಾದಿ ದ್ರಷ್ಟೃತ್ವವನ್ನೂ ಬ್ರಹ್ಮನಲ್ಲಿ ಸಮನ್ವಯಗೊಳಿಸಲಾಗಿದೆ.

ಇದರಂತೆ ನಾಮಾತ್ಮಕವಾದ 'ಯೋ ವೈ ಭೂಮಾ ತತ್ಸುಖಂ 'ಎಂಬಲ್ಲಿರುವ ಭೂಮ ಶಬ್ದವನ್ನೂ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ' ಎಂಬಲ್ಲಿ ಶ್ರುತವಾದ ಸತ್ ಶಬ್ದವನ್ನೂ 'ಈಶಾನೂ ಭೂತಭವ್ಯಸ್ಯ' ಎಂಬ ಕಾಠಕೋಕ್ತವಾದ ಈಶಾನ

ಶಬ್ದವನ್ನೂ ಮಹದ್ಭಯಂ ವಜ್ರಮುದ್ಯತಂ ಎಂಬ ಕಾಠಕೋಕ್ತವಾದ ವಜ್ರ ಶಬ್ದವನ್ನೂ ಯೋSಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತಃ ಜ್ಯೋತಿಃ ಎಂಬಲ್ಲಿರುವ ಜ್ಯೋತಿಶ್ಶಬ್ದವನ್ನೂ 'ಆಕಾಶೋ ವೈ ನಾಮ ನಾಮರೂಪಯೋ ರ್ನಿರ್ವಹಿತಾ' ಎಂಬ ಛಾಂದೋಗ್ಯದಲ್ಲಿರುವ ಆಕಾಶ ಶಬ್ದವನ್ನೂ ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ಎಂಬ ಬೃಹದಾರಣ್ಯಕದಲ್ಲಿರುವ ಬ್ರಾಹ್ಮಣ ಶಬ್ದವನ್ನೂ ಸಮನ್ವಯಗೊಳಿಸಲಾಗಿದೆ.

ಮತ್ತು ಪ್ರಾಸಂಗಿಕವಾಗಿ - ದೇವತೆಗಳಿಗೂ ಮೋಕ್ಷಾರ್ಥಿತ್ವ ಇರುವ ಪ್ರಯುಕ್ತ ಅವರೂ ವೇದ ವಿದ್ಯಾಧಿಕಾರಿಗಳಾಗಿದ್ದಾರೆ. ಆದರೆ ಶೂದ್ರರಿಗೆ ಮಾತ್ರ ಅಧಿಕಾರವಿಲ್ಲ. ವೇದದಲ್ಲಿ ಶೂದ್ರ ಎಂದು ಸಂಭೋದಿಸಿ ವೇದ ಉಪದೇಶಿಸಿದ್ದು ಕಂಡು ಬರುತ್ತದೆ. ಆದರೆ ಅಲ್ಲಿ ಶೂದ್ರ ಪದಕ್ಕೆ ಶೋಕದಿಂದ ಧಾವಿಸಿ ಬಂದವನೇ ಎಂದು ಅರ್ಥ. ಪೌತ್ರಾಯಣ ಎಂಬ ಕ್ಷತ್ರಿಯನನ್ನೇ ಆ ಪದದಿಂದ ಸಂಬೋಧಿಸಲಾಗಿದೆ. ಆದ್ದರಿಂದ ಶೂದ್ರವರ್ಣದವರಿಗೆ ವೇದಾಧಿಕಾರವಿಲ್ಲ ಎಂಬುದಾಗಿ ನಿರ್ಣಯಿಸಲಾಗಿದೆ.

**ನಾಲ್ಕನೇಪಾದದಲ್ಲಿ** ನಿರೂಪಿತವಾದ ಪ್ರಮೇಯ- ವಿಷ್ಣುವು ಸೂಕ್ಷ್ಮತ್ವ ರೂಪ ಅವ್ಯಕ್ತತ್ವ ಉಳ್ಳವನಾ ದ್ದರಿಂದ ಅವ್ಯಕ್ತ ಶಬ್ದವಾಚ್ಯನಾಗಿದ್ದಾನೆ. ಅವ್ಯಕ್ತ ತತ್ತ್ವವು ಪುರುಷನಿಗಿಂತ ಅವರ ಎಂದು ಹೇಳುವ ವಾಕ್ಯದಲ್ಲಿಯೂ ಪ್ರತಿಪಾದ್ಯನಾಗಿದ್ದಾನೆ. ಪ್ರಧಾನ ರೂಪವಾದ ಅವ್ಯಕ್ತ ತತ್ತ್ವದಲ್ಲಿರುವ ಅವರತ್ವಕ್ಕೆ ಅವನು ನಿಯಾಮಕ ಎಂದರ್ಥ. ಸ್ವಾತಂತ್ರ್ಯ ಮತ್ತು ತದ್ಗತತ್ವ ಇವೆರಡು ಶಬ್ದಕ್ಕೆ ಪ್ರವೃತ್ತಿ ನಿಮಿತ್ತ. ಇವುಗಳಲ್ಲಿ ಸ್ವಾತಂತ್ರ್ಯವೇ ಮುಖ್ಯ. ಆದ್ದರಿಂದಲೇ ಬೇರೆಯವರಲ್ಲಿರುವ ದುಃಖಾದಿಗಳಿಗೆ ಸ್ವತಂತ್ರನಾದ್ದರಿಂದ ಭಗವಂತನು ದುಃಖಿ ಬದ್ಧ ಅವರ ಇತ್ಯಾದಿ ಶಬ್ದವಾಚ್ಯನಾಗಿದ್ದಾನೆ. ಭೃತ್ಯನಲ್ಲಿರುವ ಜಯವು ರಾಜಾಧೀನ ಆದ್ದರಿಂದ ರಾಜನನ್ನು ಜಯೀ ಎನ್ನುತ್ತಾರೆ. ಭೃತ್ಯನಲ್ಲಿರುವ ಬಂಧನಾದಿಗಳೂ ರಾಜನ ಅಧೀನವೇ. ಆದರೆ ರಾಜನನ್ನು ಬದ್ಧ ಎನ್ನುವುದಿಲ್ಲ. ರಾಜನಲ್ಲೂ ಬಂಧನವು ಸಂಭಾವಿತವಾದ್ದರಿಂದ ಬಂಧನವು ರಾಜಗತ ಎಂಬ ಅಮಂಗಲಾರ್ಥಕ್ಕೂ ಅವಕಾಶ ಉಂಟು. ಭಗವಂತನಲ್ಲಾದರೆ ಅಮಂಗಲವು ಅಸಂಭಾವಿತವಾದ್ದರಿಂದ ಬಂಧನಾದಿಗಳು ಈಶಾಧೀನ ಎಂಬ ಅರ್ಥ ಮಾತ್ರ ಪ್ರತಿಭಾನವಾಗುವುದರಿಂದ ವೇದಗಳಲ್ಲಿ ಬದ್ಧ ಅಸತ್ ಇತ್ಯಾದಿ ಶಬ್ದಗಳ ಪ್ರಯೋಗ ಬಂದಿದೆ. ಜ್ಯೋತಿ ಇತ್ಯಾದಿ ಕರ್ಮವಾಚಕ ಶಬ್ದಗಳಿಂದಲೂ ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಮುಖ್ಯ ವೃತ್ತಿಯಿಂದ ಕರ್ಮಗಳೂ

ವಾಚ್ಯವಾದ್ದರಿಂದ ಕರ್ಮಾದಿ ಲೋಪಪ್ರಸಂಗವೂ ಇಲ್ಲ. ಭಗವಂತನು ಬಹು ರೂಪ ಉಳ್ಳವನಾದ್ದರಿಂದ ಪಂಚಜನ ಇತ್ಯಾದಿ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಅದೇ ಕಾರಣದಿಂದಲೇ ಆಧಾರಾಧೇಯವಾಚಕ ಶಬ್ದಗಳಿಂದಲೂ ವಾಚ್ಯ. ಆತ್ಮನಃ ಆಕಾಶಃ ಸಂಭೂತಃ ಆಕಾಶಾದ್ವಾಯುಃ ಎಂಬಲ್ಲಿರುವ ಆಕಾಶ ಶಬ್ದವಾಚ್ಯನೂ ವಿಷ್ಣುವೇ. ಆಕಾಶವು ಉತ್ಪನ್ನವಾಗುವಾಗ ಅಲ್ಲಿರುವ ಭಗವದ್ರೂಪವೂ ಪ್ರಾದುರ್ಭಾವ ಹೊಂದುತ್ತದೆ. ಅದೇ ರೂಪವೇ ವಾಯುವಿನಉತ್ಪತ್ತಿಗೆ ಕಾರಣವಾಗಿದೆ ಎಂದೂ ಹೇಳಿ ಕಾರ್ಯತ್ವೇಸತಿ ಕಾರಣತ್ವ ರೂಪವಾದ ಅವಾಂತರ ಕಾರಣತ್ವವನ್ನೂ ಕೂಡಿಸಬಹುದು. ವ್ಯವಧಾನವಿಲ್ಲದೇ ಉತ್ಪಾದಕತ್ವರೂಪವಾದ ಸ್ತ್ರೀತ್ವವೂ ಭಗವಂತನಿಗಿರುವುದರಿಂದ ಸ್ತ್ರೀಲಿಂಗ ಶಬ್ದವಾಚ್ಯನೂ ಆಗಿದ್ದಾನೆ. ಒಟ್ಟಿನಲ್ಲಿ ಸಮನ್ವಯವು ಎರಡು ವಿಧ. ಪದಸಮನ್ವಯ ಮತ್ತು ವಾಕ್ಯ ಸಮನ್ವಯ. ಪ್ರತಿ ಪದವನ್ನು ಬಿಡಿಸಿ ಅವಯವ ವ್ಯುತ್ಪತ್ತಿಯಿಂದ ಸಮನ್ವಯ ಮಾಡುವುದು ಪದಸಮನ್ವಯ . ಉದಾ 'ಜಾತಂ ಓತಂ ಯಸ್ಮಿನ್ ಜ್ಯೋತಿಃ' ಇತ್ಯಾದಿಯಾಗಿ. ಆದರೆ ಇದು ಮಂದಾಧಿಕಾರಿಗಳಿಗೆ ದುರ್ಜ್ಞೇಯ. ಅದಕ್ಕಾಗಿ ಕರ್ಮ, ದೇವತಾ ಪರವಾಕ್ಯಗಳಿಗೂ ಅಂತಿಮವಾಗಿ ಬ್ರಹ್ಮನಲ್ಲಿಯೇ ತಾತ್ಪರ್ಯವನ್ನು ಹೇಳುವುದು ವಾಕ್ಯ ಸಮನ್ವಯ.

**ದ್ವಿತೀಯಾಧ್ಯಾಯ**

ಪ್ರಥಮಪಾದದಲ್ಲಿ ನಿರೂಪಿತವಾದ ಪ್ರಮೇಯ-- ಶಿವನೇ ಮೊದಲಾದ ವರಿಗೆ ಜಗತ್ಕಾರಣತ್ವವನ್ನು ಹೇಳುವ ಶಿವಾದಿ ಪ್ರಣೀತ ಶೈವಾದ್ಯಾಗಮಗಳು ವಿಷ್ಣುವಿಗೆ ಹೇಳಲ್ಪಟ್ಟ ಜಗತ್ಕಾರಣತ್ವವನ್ನು ವಿರೋಧಿಸಲಾರವು. ಏಕೆಂದರೆ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಪಂಚರಾತ್ರ ಸ್ಮೃತಿಯು ಶ್ರುತಿ ಸಂವಾದಿಯಾದ್ದರಿಂದ ಪ್ರಬಲವಾಗಿದೆ. ಇಂತಹ ಸ್ಮೃತಿ ವಿರುದ್ಧವಾದ ಪ್ರಯುಕ್ತ ಆ ಶೈವಾದ್ಯಾಗಮಗಳೇ ಅಪ್ರಮಾಣವಾಗಿವೆ. ಪಂಚರಾತ್ರಕ್ಕೆ ಸಂವಾದಿಯಾದ ಶ್ರುತಿಯನ್ನು ಅಪ್ರಮಾಣ ಎಂದು ಹೇಳಲಾಗದು. ಅದು ನಿತ್ಯವಾದ್ದರಿಂದ ಉತ್ತಮ ಪ್ರಮಾಣವಾಗಿದೆ. ಅದರಲ್ಲಿ ಕಂಡು ಬರುವ ಫಲವಿಸಂವಾದವು ಕರ್ತೃವೈಗುಣ್ಯ ನಿಮಿತ್ತಕವೆಂದು ಭಾವಿಸಬೇಕು. ಮೃತ್ ಅಬ್ರವೀತ್ ಇತ್ಯಾದಿ ವೇದವಾಕ್ಯಗಳು ಅಭಿಮಾನಿ ದೇವತಾ ಪರವಾದ್ದರಿಂದ ಯುಕ್ತಿ ವಿರುದ್ಧವೆನಿಸುವುದಿಲ್ಲ. 'ಅಸತಃ ಸತ್ ಅಜಾಯತ' ಎಂಬಲ್ಲಿರುವ ಅಸತ್ ಶಬ್ದವು 'ಜೀವಾತ್ ಭವಂತಿ ಭೂತಾನಿ' ಎಂಬಲ್ಲಿರುವ ಜೀವ ಶಬ್ದವೂ 'ಪ್ರಧಾನಾದಿದಮುತ್ಪನ್ನಂ' ಎಂಬಲ್ಲಿರುವ ಪ್ರಧಾನ ಶಬ್ದವೂ ವಿಷ್ಣು ವಾಚಕವೇಎಂದು ಹೇಳಿರುವುದರಿಂದ ಆ ಶ್ರುತಿಗಳ ವಿರೋಧವೂ

ಇಲ್ಲ. ಬ್ರಹ್ಮನು ಗುಣಪೂರ್ಣನಾದ್ದರಿಂದ ಜೀವರಿಗಿಂತ ಅತ್ಯಂತವಿಲಕ್ಷಣನೇ ಆಗಿದ್ದಾನೆ. ಐಕ್ಯ ಪ್ರತಿಪಾದಕವೆಂಬಂತೆ ಕಾಣುವ ವಾಕ್ಯಗಳಿಗೆ ಸ್ಥಾನೈಕ್ಯರೂಪವಾದ ಅರ್ಥವನ್ನೇ ಹೇಳಬೇಕು. ಆದ್ದರಿಂದ ಜೀವನಿಗೆ ಜಗತ್ಕರ್ತೃತ್ವ ಕೂಡದಿದ್ದರೂ ಅವನಿಗಿಂತ ವಿಲಕ್ಷಣನಾದ ಬ್ರಹ್ಮನಿಗೆ ಯುಕ್ತವೇ ಆಗಿದೆ. ಲೋಕದಲ್ಲಿ ಘಟಾದಿ ಸೃಷ್ಟಿಯು ಕುಲಾಲ ಕೃತವಲ್ಲದ ಮಣ್ಣು ಮೊದಲಾದ ಉಪಾದಾನ ಸಾಪೇಕ್ಷವಾಗಿದ್ದರೂ ಭಗವಂತನು ಮಾಡುವ ಸೃಷ್ಟಿಯು ಮಾತ್ರ ತನ್ನಿಂದಲೇ ನಿರ್ಮಿತವಾದ ತನಗೇ ಅಧೀನವಾಗಿರುವ ಉಪಾದಾನ ಸಾಪೇಕ್ಷವಾಗಿದೆ. ನಾನಾ ಶಿಲ್ಪ ಕಲಾ ನಿಪುಣನಾದ ವ್ಯಕ್ತಿಯಂತೆ ಈ ಭಗವಂತನು ಸರ್ವಶಿಲ್ಪಿಯಾಗಿರುವುದರಿಂದ ಇವನ ಸ್ವಾತಂತ್ರ್ಯಾದಿ ಗುಣಪೂರ್ಣತ್ವಕ್ಕೆ ಚ್ಯುತಿಯಿಲ್ಲ. ಜೀವರು ಕಾರ್ಯವನ್ನು ಆರಂಭಿಸುವುದೂ ಅನುಭವ ಸಿದ್ಧವಾಗಿದೆ. ಜೀವಾತ್ ಭವಂತಿ ಭೂತಾನಿ ಎಂಬ ಶ್ರುತಿಯೂ ಜೀವನಿಗೇ ಕರ್ತೃತ್ವವನ್ನು ಹೇಳುತ್ತದೆ ಎಂಬ ಕಾರಣದಿಂದ ಜೀವನಿಗೆ ಜಗತ್ ಕರ್ತೃತ್ವವನ್ನು ಹೇಳುತ್ತೇವೆನ್ನುವುದೂ ಸರಿಯಲ್ಲ. ಏಕೆಂದರೆ ಜೀವನು ಕರ್ತನಾದ ಪಕ್ಷದಲ್ಲಿ ತನಗೆ ಅಹಿತ ಮಾಡಿಕೊಳ್ಳುವುದೂ ಹಿತವನ್ನು ಮಾಡಿಕೊಳ್ಳದಿರುವುದೂ ಅನುಪಪನ್ನವಾಗುವುದು. ಜೀವನಿಂದ ಅನುಭೂತವಾದ ಕರ್ತೃತ್ವವಾದರೂ ಪರತಂತ್ರವೇ ಹೊರತು ಸ್ವತಂತ್ರಕರ್ತೃತ್ವವಲ್ಲ. ಈಶ್ವರನಾದರೂ ವೇದೈಕ ವೇದ್ಯನಾದ್ದರಿಂದ ಅವನಲ್ಲಿ ವೇದ ಬೋಧಿತವಾದ ಕರ್ತೃತ್ವವನ್ನು ಯಾವ ತರ್ಕವೂ ಬಾಧಿಸಲಾರದು. ವೇದ ಬೋಧಿತವಾದದ್ದೆಲ್ಲವು ವಿಚಿತ್ರ ಶಕ್ತಿಯಿಂದ ಉಪಪನ್ನ ಎಂದೇ ಭಾವಿಸಬೇಕು. ಪರಿಪೂರ್ಣನಾದ ಅವನಿಗೆ ಸೃಷ್ಟ್ಯಾದಿ ವ್ಯಾಪಾರದಿಂದ ಯಾವ ಪ್ರಯೋಜನವಿಲ್ಲದಿದ್ದರೂ ಅದು ಅವನ ಸ್ವಭಾವವಾದ್ದರಿಂದ ಯುಕ್ತವೇ ಆಗಿದೆ. ವೇದವೇ ಹೇಳುವಂತೆ ಜೀವರ ಅನಾದಿ ಯೋಗ್ಯತೆಗನುಗುಣವಾಗಿ ಕರ್ಮ ಮಾಡಿಸಿ ಫಲ ಕೊಡುವುದರಿಂದ ವೈಷಮ್ಯಾದಿ ದೋಷವೂ ಇಲ್ಲ. ಇತರ ಚೇತನರು ಗುಣ ಪೂರ್ಣರಾಗದಿದ್ದರೂ ಇವನು ಮಾತ್ರ ಸ್ವತಂತ್ರ ಚೇತನನಾದ್ದರಿಂದ ಗುಣಪೂರ್ಣನಾಗಿದ್ದಾನೆ.

**ದ್ವಿತೀಯಪಾದದಲ್ಲಿ**ನಿರೂಪಿತವಾದ ಪ್ರಮೇಯ--ನಿರೀಶ್ವರ ಸಾಂಖ್ಯರು ಜಡವಾದ ಪ್ರಕೃತಿ ತತ್ವವನ್ನು ಜಗತ್ಕರ್ತೃ ಎನ್ನುತ್ತಾರೆ. ಜಡಕ್ಕೆ ಸ್ವತಃ ಪ್ರವೃತ್ತಿಯೇ ಕಂಡಿಲ್ಲವಾದ್ದರಿಂದ ಅದು ಸರಿಯಲ್ಲ. ಸೇಶ್ವರ ಸಾಂಖ್ಯರು ಈಶ್ವರನನ್ನು ಒಪ್ಪಿದರೂ ಅವನು ಪ್ರಕೃತಿಗೆ ಸಹಾಯಕ ಮಾತ್ರ ಎಂದು ಹೇಳುತ್ತಾರೆ. ಇದೂ ಸರಿಯಲ್ಲ. ಆ ಪ್ರಕೃತಿಯ ಅಸ್ತಿತ್ವವೇ ಭಗವದಧೀನವೆಂದು ಶ್ರುತಿ ಹೇಳುತ್ತದೆ.

ಹೀಗಿರುವಾಗ ಪ್ರಕೃತಿಯು ಪ್ರಧಾನವಾಗಿ ಈಶ್ವರನು ಗೌಣನಾಗುವುದು ಹೇಗೆ? ಪ್ರತ್ಯಕ್ಷವನ್ನು ಮಾತ್ರ ಪ್ರಮಾಣ ಎಂದು ಹೇಳುವ ಚಾರ್ವಾಕ ಶಾಸ್ತ್ರಕ್ಕೆ ವಿಷಯಾದಿಗಳೇ ಇಲ್ಲವಾದ್ದರಿಂದ ಅದೂ ಅಪ್ರಮಾಣ. 'ನ 'ಋತೇ ತ್ವತ್ ಕ್ರಿಯತೇ' ಎಂಬ ಶ್ರುತಿಯಿಂದ ಎಲ್ಲದಕ್ಕೂ ಈಶಾಧೀನತ್ವವು ಸಿದ್ಧವಾದ್ದರಿಂದ ಜೀವ ಸಂಬಂಧದಿಂದ ಪ್ರಕೃತಿಯು ಜಗತ್ಕರ್ತೃ ಎಂದು ಹೇಳುವ ಸಾಂಖ್ಯೈಕದೇಶಿಗಳ ಮತವೂ ಅಯುಕ್ತವಾಗಿದೆ. ಪ್ರಕೃತಿಯ ಸಹಾಯ ಉಳ್ಳ ಜೀವನೇ ಕರ್ತೃ ಎಂಬ ಸಾಂಖ್ಯೈಕದೇಶಿ ಮತವೂ ಅಯುಕ್ತ ವಾಗಿದೆ. ಜೀವನು ಪ್ರಕೃತಿಯ ಸಂಬಂಧವನ್ನು ಪಡೆಯಲೂ ಅಶಕ್ತನಾಗಿದ್ದಾನೆ. ಈಶ್ವರನಿಲ್ಲದೇ ಆ ಸಂಬಂಧವೇ ಆಗಲಾರದು. ನ್ಯಾಯ ವೈಶೇಷಿಕರ ಪ್ರಕ್ರಿಯೆಗಳೆಲ್ಲವೂ ಯುಕ್ತಿ ವಿರುದ್ಧವಾದ್ದರಿಂದ ಆ ದರ್ಶನವೂ ಅಪ್ರಾಮಾಣಿಕವಾಗಿದೆ. ಆದ್ದರಿಂದ ಅವರು ಹೇಳುವ ಪರಮಾಣು ಕಾರಣತ್ವವೂ ಅಯುಕ್ತ. ಪರಮಾಣು ಪುಂಜವೇ ಘಟಾದಿ ರೂಪವಾದ ಕಾರ್ಯ ಎಂದು ಹೇಳುವ ಬೌದ್ಧೈಕದೇಶಿಗಳ ಮತವೂ ಕೂಡ ಪರಮಾಣುಗಳ ಪುಂಜಕ್ಕೆ ಕಾರಣ ವೇನೆಂದು ಹೇಳಲು ಅಸಮರ್ಥವಾದ್ದರಿಂದ ಅಯುಕ್ತವಾಗಿದೆ. ಶೂನ್ಯದಿಂದ ಸೃಷ್ಟಿಯು ಎಲ್ಲಿಯೂ ಕಂಡಿಲ್ಲವಾದ್ದರಿಂದ ಶೂನ್ಯ ಕಾರಣತ್ವವನ್ನು ಪ್ರತಿಪಾದಿಸುವ ಮಾಧ್ಯಮಿಕ ಮತವೂ ಅಸಮ್ಮತ. ಜಗತ್ತು ವಿಜ್ಞಾನರೂಪ ಎನ್ನುವ ಯೋಗಾಚಾರ ಮತವೂ ಪ್ರಮಾಣ ರಹಿತವಾದ್ದರಿಂದ ಅಗ್ರಾಹ್ಯವಾಗಿದೆ. ಪ್ರಪಂಚದಲ್ಲಿ ಅನಿಯತವಾಗಿ ಸತ್ತ್ವ, ಅಸತ್ತ್ವ, ಸದಸತ್ತ್ವ, ಸದಸದ್ವಿಲಕ್ಷಣತ್ವ ಇತ್ಯಾದಿ ವಿರುದ್ಧ ಅನೇಕ ಧರ್ಮಗಳನ್ನು ಒಂದೇ ಕಡೆಯಲ್ಲಿ ಒಟ್ಟಿಗೇ ಒಪ್ಪುವ ಜೈನಮತವೂ ವ್ಯಾಹತವಾದುದು. ಶ್ರುತಿಯಿಂದ ಪಾರತಂತ್ರ್ಯಾದಿ ದೋಷಯುಕ್ತನೆಂದು ಸಿದ್ಧನಾದ ಪಶುಪತಿಗೆ ಜಗತ್ಕರ್ತೃತ್ವವನ್ನು ಹೇಳುವ ಮತವೂ ಅಸಮೀಚೀನ. ಕೇವಲ ಸ್ತ್ರೀಯಿಂದ ಉತ್ಪತ್ತಿಯು ಅಸಂಭಾವಿತವಾದ್ದರಿಂದ ಶಕ್ತಿಗೆ ಜಗತ್ಕರ್ತೃತ್ವವನ್ನು ಪ್ರತಿಪಾದಿಸುವ ಶಾಕ್ತೇಯ ಮತವೂ ಯುಕ್ತಿ ವಿರುದ್ಧ. ಆದ್ದರಿಂದ ವೈದಿಕ ವಚನಕ್ಕೆ ಇವುಗಳ ವಿರೋಧವಿದ್ದರೂ ಅದು ಅಪ್ರಯೋಜಕ. ವೈದಿಕ ವಚನವನ್ನು ಅಪ್ರಮಾಣವೆಂದು ಶಂಕಿಸಬಾರದು.

**ಮೂರನೇಪಾದದಲ್ಲಿ** ನಿರೂಪಿತವಾದ ಪ್ರಮೇಯ--'ಸ ಇದಂ ಸರ್ವಮಸೃಜತ' (ಭಗವಂತನು ಎಲ್ಲವನ್ನೂ) ಸೃಷ್ಟಿಸಿದನು ಎಂಬಿವೇ ಮೊದಲಾದ ಪ್ರಮಾಣಗಳಿಂದ ಅವ್ಯಾಕೃತಾಕಾಶ, ಭೂತಾಕಾಶ, ವಾಯು, ಅಗ್ನಿ, ಇತ್ಯಾದಿ ಎಲ್ಲ ಪದಾರ್ಥಗಳೂ ಅವುಗಳ ಅಭಿಮಾನಿ ದೇವತೆಗಳೂ ಮುಖ್ಯ ಪ್ರಾಣನೂ

ಭಗವಂತನಿಂದಲೇ ಪರಾಧೀನ ವಿಶೇಷ ಅವಾಪ್ತಿ ರೂಪವಾದ ಉತ್ಪತ್ತಿ ಉಳ್ಳವರಾಗಿದ್ದಾರೆ. ವಿಷ್ಣುವು ಮಾತ್ರ ಸ್ವತಂತ್ರನಾದ್ದರಿಂದ ಅಂತಹ ಉತ್ಪತ್ತಿ ಉಳ್ಳವನಲ್ಲ. 'ವಾಯೋರಗ್ನಿಃ' (ವಾಯುವಿನಿಂದ ಅಗ್ನಿಯು ಹುಟ್ಟಿತು) ಇತ್ಯಾದಿ ಶ್ರುತಿಗಳು ವಾಯು ಮೊದಲಾದವುಗಳಿಗೆ ಕೇವಲ ದ್ವಾರತ್ವವನ್ನು ಹೇಳುತ್ತವೆ. ಆದ್ದರಿಂದ ವಿಷ್ಣುವೇ ಎಲ್ಲ ಪ್ರಪಂಚಕ್ಕೂ ಕಾರಣ ಎನ್ನುವುದು ವಿರುದ್ಧವಲ್ಲ. 'ಅದ್ಭ್ಯಃ ಪೃಥಿವೀ' (ನೀರಿನಿಂದ ಪೃಥಿವಿಯು ಹುಟ್ಟಿತು) ಎಂಬ ಶ್ರುತಿಯು ನೀರನ್ನು ಪೃಥಿವಿಗೆ ದ್ವಾರ ಎನ್ನುತ್ತದೆ. ತಾ ಅನ್ನಮಸೃಜಂತ ಎಂಬ ಶ್ರುತಿಯು ನೀರನ್ನು ಅನ್ನಕ್ಕೆ ದ್ವಾರ ಎನ್ನುತ್ತದೆ. ಆದರೂ ವಿರೋಧವಿಲ್ಲ ಏಕೆಂದರೆ ಅನ್ನ ಪದಕ್ಕೆ ಪೃಥಿವೀ ಎಂದೇ ಅರ್ಥ.

ಸಂಹಾರ ಕರ್ತನೂ ವಿಷ್ಣುವೇ ಆಗಿದ್ದಾನೆ. ರುದ್ರನಿಗೆ ಸಂಹಾರಕತ್ವವನ್ನು ಹೇಳುವ ಶ್ರುತಿಯು ದ್ವಾರತ್ವವನ್ನು ಹೇಳುತ್ತದೆಂದು ಭಾವಿಸಬೇಕು. 'ಪ್ರತಿರೂಪೋ ಲಯೇ ಕ್ರಮಃ' ಎಂಬ ಶ್ರುತ್ಯನುಸಾರವಾಗಿ ಆಕಾಶಾದಿಗಳು ಸೃಷ್ಟಿ ಕ್ರಮಕ್ಕಿಂತ ವಿಪರೀತ ಕ್ರಮದಿಂದ ಲಯ ಹೊಂದುತ್ತವೆ. ನಿತ್ಯೋ ನಿತ್ಯಾನಾಂ ಎಂದು ನಿತ್ಯತ್ವವು ಶ್ರುತವಾದುದರಿಂದ ವಿಷ್ಣುವಿಗೆ ಮಾತ್ರ ಲಯವಿಲ್ಲ.' ಸರ್ವ ಏತೇ ಚಿದಾತ್ಮನೋ ವ್ಯುಚ್ಚರಂತಿ ' (ಎಲ್ಲ ಜೀವರೂ ಭಗವಂತನಿಂದ ಹುಟ್ಟುತ್ತಾರೆ ) ಎಂದು ಶ್ರುತಿ ಇರುವುದರಿಂದ ಜೀವರು ಭಗವಂತನಿಂದ ದೇಹ ಸಂಬಂಧ ರೂಪ ಜನನ ಉಳ್ಳವರಾಗಿದ್ದಾರೆ. ಉತ್ಕ್ರಮಣ ಮತ್ತು ಗಮನಾಗಮನ ಉಳ್ಳವನಾದ್ದರಿಂದ ಹಾಗೂ 'ಅಣುರ್ಹ್ಯೇಷ ಆತ್ಮಾ ' ಎಂದು ಶ್ರುತಿಯೂ ಇರುವುದರಿಂದ ಜೀವನು ಅಣುವಾಗಿದ್ದಾನೆ. ಯೋಗಿ ಜೀವರು ಮಾತ್ರ ಅಣುವಾಗಿದ್ದರೂ ಯೋಗ ಶಕ್ತಿಯಿಂದ ಬಹುರೂಪರಾಗಿದ್ದಾರೆ. ಸುರಜೀವರು ದೇಹದಲ್ಲಿ ಒಂದು ಕಡೆ ಇದ್ದರೂ ಗಂಧದ ಬಿಂದುವಿನಂತೆ ಅಂಶದಿಂದ ವ್ಯಾಪ್ತರು. ಸುರರಲ್ಲದ ಜೀವರು ದೇಹದಲ್ಲಿ ಚಿದ್ಗುಣದಿಂದ ವ್ಯಾಪ್ತರು. ಜೀವರು ಸ್ವರೂಪತಃ ನಿತ್ಯರೂ ಪರಮಾತ್ಮನಿಗೆ ಭಿನ್ನಾಂಶರೂ, ಈಶಾಧೀನ ಕರ್ತೃತ್ವ ಉಳ್ಳವರೂ, ಭಗವಂತನಿಗೆ ಪ್ರತಿಬಿಂಬರೂ ಆಗಿದ್ದಾರೆ. ಈ ಪ್ರಮೇಯಕ್ಕೆ ಯಾವ ಶ್ರುತಿ ವಿರೋಧವೂ ಇಲ್ಲ.

ನಾಲ್ಕನೇಪಾದದಲ್ಲಿ - ಶ್ರುತಿಗಳಿಗೆ ನ್ಯಾಯೋಪೇತ ಶ್ರುತಿವಿರೋಧವಿಲ್ಲ ಎಂಬುದನ್ನು ತೋರಿಸಲಾಗಿದೆ. 'ಇಂದ್ರಿಯಗಳಿಗೆ ಉತ್ಪತ್ತಿ ಇದೆ. ಅನಾದಿತ್ವವನ್ನು ಹೇಳತಕ್ಕ ಶ್ರುತಿಗೆ ಇಂದ್ರಿಯಗಳು ಸೂಕ್ಷ್ಮ ರೂಪದಿಂದ ಅನಾದಿ' ಎಂದುಅರ್ಥವನ್ನು ಹೇಳಬೇಕು. ಮನಸ್ಸಿಗೂ ಉತ್ಪತ್ತಿಯಿದೆ. ಆದರೂ

ಪ್ರತ್ಯೇಕವಾಗಿ ಅದಕ್ಕೆ ನಿತ್ಯತ್ವವನ್ನು ಹೇಳಿದ್ದು ಸೃಷ್ಟಿಕಾಲದಲ್ಲಿ ಅದು ಇತರ ಇಂದ್ರಿಯಗಳಿಗಿಂತ ಅಲ್ಪವಾದ ಉಪಚಯವನ್ನು ಹೊಂದುತ್ತದೆ ಎಂಬ ಅಭಿಪ್ರಾಯದಿಂದಲೇ ಹೊರತು ಉತ್ಪತ್ತಿಯೇ ಇಲ್ಲ ಎಂಬ ಅಭಿಪ್ರಾಯದಿಂದಲ್ಲ. ವಾಗಿಂದ್ರಿಯಕ್ಕೂ ಉತ್ಪತ್ತಿ ಇದೆ. ವಾಗ್ವಾವ ನಿತ್ಯಾ ಎಂಬಲ್ಲಿ ಹೇಳಲ್ಪಟ್ಟ ನಿತ್ಯತ್ವವು ಔಪಚಾರಿಕ. ನಿತ್ಯವಾದ ವೇದ ಸನ್ನಿಧಾನಕ್ಕೆ ವಾಗಿಂದ್ರಿಯ ಯೋಗ್ಯ ಎಂದು ಅರ್ಥ.' ದ್ವಾದಶ ವಾ ಏತೇ ಪ್ರಾಣಾಃ ಎಂಬ ಶ್ರುತಿಯ ಪ್ರಕಾರ ಇಂದ್ರಿಯಗಳು ಹನ್ನೆರಡು. ಆದರೂ 'ಸಪ್ತ ಪ್ರಾಣಾ' ಎಂಬಲ್ಲಿ ಏಳು ಎಂದು ಹೇಳಿದ್ದು ಜ್ಞಾನೇಂದ್ರಿಯಗಳ ವಿವಕ್ಷೆಯಿಂದ. ಶ್ರೋತ್ರ ಚಕ್ಷು ಸ್ಪರ್ಶನ ರಸನ ಘ್ರಾಣ ಮನ ಬುದ್ಧಿ ಇವು ಏಳು ಜ್ಞಾನೇಂದ್ರಿಯಗಳು. ಐದು ಕರ್ಮೇಂದ್ರಿಯಗಳು. ಒಟ್ಟು ಹನ್ನೆರಡು. ಆದ್ದರಿಂದ ಪರಸ್ಪರ ವಿರೋಧವಿಲ್ಲ. ಇಂದ್ರಿಯಗಳು ಸ್ವರೂಪದಿಂದ ಅಣುಪರಿಮಾಣ ಉಳ್ಳವುಗಳೇ ಆಗಿವೆ. ಆದರೂ ಚಕ್ಷುರಿಂದ್ರಯಕ್ಕೆ 'ದಿವೀವ ಚಕ್ಷುರಾತತಂ'ಎಂದು ವ್ಯಾಪ್ತತ್ವವನ್ನು ಹೇಳಿದ್ದು ಪ್ರಕಾಶದ ವಿವಕ್ಷೆಯಿಂದ ಎಂದು ಅವಿರೋಧವನ್ನು ತಿಳಿಯಬೇಕು. ಮುಖ್ಯ ಪ್ರಾಣನಿಗೂ ಉತ್ಪತ್ತಿ ಇದೆ. 'ನೈಷ ಪ್ರಾಣ ಉದೇತಿ 'ಎಂಬ ಅನಾದಿತ್ವವನ್ನು ಹೇಳುವ ಶ್ರುತಿಯು ಸೂಕ್ಷ್ಮ ರೂಪ ವಿಷಯಕ ಎಂದು ಭಾವಿಸಬೇಕು. ಮುಖ್ಯ ಪ್ರಾಣನೂ ಸ್ವತಂತ್ರನಲ್ಲ. ಭಗವದಧೀನನೇ ಆಗಿದ್ದಾನೆ. 'ನ ಪ್ರಾಣಃ ಕಿಂಚಿದಾಶ್ರಿತಃ' ಎಂಬ ಶ್ರುತಿಗೆ ಜೀವಾಶ್ರಿತತ್ವವಿಲ್ಲ ಎಂದು ಅಭಿಪ್ರಾಯವನ್ನಿಟ್ಟುಕೊಳ್ಳಬೇಕು. ದೇಹದಲ್ಲಿ ಪ್ರಾಣಾಪಾನಾದಿ ಹೆಸರುಳ್ಳ ಐದು ಜನ ದಾಸ ಪ್ರಾಣರೂ ಇದ್ದಾರೆ. ಮತ್ತು ಅದೇ ಹೆಸರುಳ್ಳ ಮುಖ್ಯ ಪ್ರಾಣನ ಐದು ರೂಪಗಳೂ ಇವೆ. ಎಂಬುದು ಪ್ರಮಾಣಸಿದ್ಧ. ಆದ್ದರಿಂದ 'ಸರ್ವೇ ವಾ ಏತೇ ಮುಖ್ಯದಾಸಾಃ' ಎಂಬ ಶ್ರುತಿಗೂ ಮತ್ತು 'ಮುಖ್ಯಸ್ಯೈವ ರೂಪಾಣಿ' ಎಂಬ ಶ್ರುತಿಗೂ ವಿರೋಧವಿಲ್ಲ. ಮುಖ್ಯಪ್ರಾಣನು ಶರೀರದೊಳಗೆ ಪ್ರಾಣರೂಪದಿಂದ ಅಣುವಾಗಿಯೂ ಹೊರಗೆ ವಾಯುರೂಪದಿಂದ ವ್ಯಾಪ್ತನಾಗಿಯೂ ಇರುವುದರಿಂದ ಅಣುತ್ವವನ್ನೂ ವ್ಯಾಪ್ತತ್ವವನ್ನೂ ಹೇಳುವ ಶ್ರುತಿಗಳು ವಿರುದ್ಧವಲ್ಲ. ಇಂದ್ರಿಯಗಳಿಗೆ ಮೂಲ ಭೂತವಾದ ತೇಜಸ್ಸೇ ಮೊದಲಾದ ಭೂತಗಳು ಭಗವದಧೀನವಾದ್ದರಿಂದ ಇಂದ್ರಿಯಗಳೆಲ್ಲ ಭಗವದಧೀನವೇ. ಆದರೂ ಚಿರಕಾಲ ಜೀವ ಸಂಬಂಧದಿಂದಾಗಿ ಜೀವನ ಕರಣಗಳು ಎಂದು ಔಪಚಾರಿಕವಾಗಿ ಹೇಳಲ್ಪಡುತ್ತವೆ. 'ದ್ವಾದಶ್ಯೈವೇಂದ್ರಿಯಾಣ್ಯಾಹುಃ ಮುಖ್ಯಪ್ರಾಣಸ್ತ್ವನಿಂದ್ರಿಯಮ್ 'ಎಂಬ ವಿಶೇಷ ಶ್ರುತಿ ಇರುವುದರಿಂದ 'ಪ್ರಾಣಾ ವಾ ಇಂದ್ರಿಯಾಣಿ'

ಎಂಬುದಕ್ಕೆ ಮುಖ್ಯಪ್ರಾಣಾತಿರಿಕ್ತ ಪ್ರಾಣಗಳು ಇಂದ್ರಿಯಗಳು ಎಂದು ಅ ರ್ಥೈಸಬೇಕು. ನಾಮ ರೂಪಾತ್ಮಕ ಪ್ರಪಂಚಕ್ಕೆ ಪರಮಾತ್ಮನು ಮುಖ್ಯಕಾರಣ. ಚತುರ್ಮುಖನು ಅವಾಂತರ ಕಾರಣ ಎಂದು ವಿಶೇಷ ಪ್ರಮಾಣವಿರುವುದರಿಂದ ಇಬ್ಬರಿಗೂ ಕಾರಣತ್ವವನ್ನು ಹೇಳುವ ಶ್ರುತಿಗಳು ವಿರುದ್ಧವಲ್ಲ. ಶರೀರವು ಜಲದಿಂದ ಹುಟ್ಟಿದೆ ಎಂದು ಹೇಳುವ ಶ್ರುತಿಗೂ ಪೃಥಿವಿಯಲ್ಲಿ ಲಯವಾಗುತ್ತದೆ ಎಂದು ಹೇಳುವ ಶ್ರುತಿಗೂ ಇದು ಅಗ್ನಿಗೆ ಸಂಬಂಧಿಸಿದ್ದು ಎಂದು ಹೇಳುವ ಶ್ರುತಿಗೂ ಪರಸ್ಪರ ವಿರೋಧವಿಲ್ಲ. ಶರೀರವು ಮೂರೂ ಭೂತಗಳಿಂದ ಕೂಡಿದೆ. ಆದರೆ ಯಾವ ಭೂತವು ಪ್ರಚುರವಾಗಿರುತ್ತದೋ ಅದನ್ನಿಟ್ಟುಕೊಂಡು ವ್ಯಪದೇಶ ಮಾಡುತ್ತಾರೆ. ಈ ಪ್ರಕಾರ ವೇದದಲ್ಲಿ ಯಾವ ವಿರೋಧವೂ ಇಲ್ಲವಾದ್ದರಿಂದ ವೇದೋಕ್ತವಾದ ಭಗವದ್ಗುಣಗಳೂ ಅವಿರುದ್ಧವಾಗಿವೆ..

**ತೃತೀಯಾಧ್ಯಾಯ**

ಪ್ರಥಮಪಾದದಲ್ಲಿ-ನಿರೂಪಿತವಾದ ಪ್ರಮೇಯ--ಭೂತಬಂಧಸ್ತು ಸಂಸಾರಃ ಮುಕ್ತಿಸ್ತೇಭ್ಯೋ ವಿಮೋಚನಂ' ಎಂದು ಹೇಳಿದಂತೆ ಪಂಚಭೂತಗಳ ಸಂಬಂಧವೇ ಸಂಸಾರ. ಅವುಗಳ ವಿಯೋಗವೇ ಮುಕ್ತಿ .ಮನುಷ್ಯನಿಗೆ ಸ್ವಾಭಾವಿಕವಾಗಿ ದೇಹವಿಯೋಗ ರೂಪ ಮರಣವಾದರೂ ಭೂತವಿಯೋಗವಾಗುವುದಿಲ್ಲ. ಭೂತಗಳಿಂದ ಕೂಡಿಕೊಂಡೇ ಜೀವ ಹೋಗುತ್ತಾನೆ. ಆದ್ದರಿಂದ ಅವುಗಳ ವಿಯೋಗಕ್ಕೆ ವಿಷಯ ವೈರಾಗ್ಯವು ಅಗತ್ಯ 'ಅಪಾಮ ಸೋಮಂ ಅಮೃತಾ ಅಭೂಮ' ಇತ್ಯಾದಿ ಶ್ರುತಿಯಲ್ಲಿ ಯಾಗಾದಿ ಕರ್ಮದಿಂದ ಅಮೃತತ್ವ ಹೇಳಲ್ಪಟ್ಟಿದ್ದರೂ ಅದು ಸ್ವರ್ಗದಲ್ಲಿ ಚಿರಕಾಲಸ್ಥಾಯಿತ್ವ ರೂಪವಾದ ಗೌಣ ಅಮೃತತ್ವ ಹೊರತು ಮುಖ್ಯ ಅಲ್ಲ. ಮುಖ್ಯ ಅಮೃತತ್ವವಾದರೂ ವೈರಾಗ್ಯದಿಂದಲೇ ಸಾಧ್ಯ. ಯದ್ಯಪಿ ಸ್ವರ್ಗವು ಭೋಗಕ್ಕಾಗಿ ಇರುವುದು. ಆದರೆ ಅಲ್ಲಿ ಭೋಗದಿಂದ ಸಂಪೂರ್ಣವಾಗಿ ಕರ್ಮ ಕ್ಷಯವಾಗುವುದಿಲ್ಲ. ಕರ್ಮಶೇಷದಿಂದ ಭೂಮಿಗೆ ಬರುತ್ತಾನೆ. ಆವಾಗ ಪುನಃ ಕರ್ಮ ಸಂಗ್ರಹವಾಗುವುದಿಲ್ಲ. ಪೂರ್ಣವಾಗಿ ಕರ್ಮಕ್ಷಯವು ಆಗುವುದೇ ಇಲ್ಲ. ಅದಕ್ಕಾಗಿ ವಿಷಯ ವೈರಾಗ್ಯ ಆವಶ್ಯಕ.ಮತ್ತು ಜೀವನು ಸ್ವರ್ಗದಿಂದ ಮರಳಿ ಬರುವಾಗ ಹೋದ ಮಾರ್ಗದಿಂದಲೇ ಬರುವುದಿಲ್ಲ. ಮಾರ್ಗವು ಸ್ವಲ್ಪ ವ್ಯತ್ಯಾಸವಾಗುತ್ತದೆ. ಅದು ಪೂರ್ವಾನುಭೂತ ಮಾರ್ಗವಾಗಿರುವುದಿಲ್ಲವಾದ್ದ ರಿಂದಲೂ ಕ್ಲೇಶಕ್ಕೆ ಆಸ್ಪದವಾಗುತ್ತದೆ. ಮತ್ತು ಮರಳುವಾಗ ಧೂಮಾದಿ ದೇವತೆಗಳ ಲೋಕಕ್ಕೆ ಬಂದರೂ ಅಲ್ಲಿ ಸುಖ ಪಡುತ್ತಾ ಹೆಚ್ಚು ಕಾಲ ಇರುವಂತಿಲ್ಲ

ಒಂದು ಸಂವತ್ಸರದೊಳಗೇ ಪುನರ್ಜನ್ಮ ಪಡೆಯಬೇಕು. ಆವಾಗಲೂ ಪ್ರಾಯಃ ಎಲ್ಲ ಜೀವರಿಗೆ ಪಿತೃಪ್ರವೇಶ, ಅನಂತರದಲ್ಲಿ ಯೋನಿ ದ್ವಾರಾ ಸ್ತ್ರೀ ಗರ್ಭ ಪ್ರವೇಶ ಇತ್ಯಾದಿ ಕ್ಲೇಶಗಳು ಅನಿವಾರ್ಯ. ಜೀವನಿಗೆ ಸಾಧನದಲ್ಲಿ ಸ್ವಾತಂತ್ರ್ಯವಿದ್ದಂತೆ ಫಲದಲ್ಲಿಯೂ ಇರುತ್ತದೆಯಾದ್ದರಿಂದ ಕಾಮ್ಯ ಕರ್ಮಿಯೂ ಕೂಡ ಕ್ಲೇಶವಿಲ್ಲದೆ ಮುಕ್ತಿ ಫಲವನ್ನೇ ಪಡೆಯಬಹುದು ಎಂದು ಶಂಕಿಸಬಾರದು. ಏಕೆಂದರೆ ಜೀವರಿಗೆ ವೇದದಲ್ಲಿರುವ ವಿಧಿ ವಾಕ್ಯಗಳ ಸಾರ್ಥಕತೆಗಾಗಿ ಪರಾಧೀನವಾದ ಕರ್ತೃತ್ವವನ್ನು ಶಾಸ್ತ್ರಗಳು ಹೇಳಿವೆಯೇ ಹೊರತು ಫಲದ ವಿಷಯದಲ್ಲಿ ಸ್ವಾತಂತ್ರ್ಯವನ್ನು ಎಲ್ಲಿಯೂ ಹೇಳಿಲ್ಲ. ಈ ಪ್ರಕಾರ ಕಾಮ್ಯಕರ್ಮಫಲವು ಕ್ಲೇಶ ಯುಕ್ತವಾದ್ದರಿಂದ ಅದರಲ್ಲಿ ವೈರಾಗ್ಯ ತಾಳಬೇಕು. ಪಾಪಕರ್ಮವು ನರಕಕ್ಕೂ ಮಿಥ್ಯಾಜ್ಞಾನವು ತಮಸ್ಸಿಗೂ ಸಾಧನವಾದ್ದರಿಂದ ಅದರಲ್ಲಿಯೂ ವೈರಾಗ್ಯವನ್ನು ಪಡೆದು ಜ್ಞಾನಮಾರ್ಗವನ್ನೇ ಆಶ್ರಯಿಸಬೇಕು.

**ದ್ವಿತೀಯಪಾದದಲ್ಲಿ** ನಿರೂಪಿತವಾದ ಪ್ರಮೇಯ-- ಪರಮಾತ್ಮನಲ್ಲಿ ಜೀವರಿಗೆ ಭಕ್ತಿಯುಂಟಾಗಲು ಅವನ ಅದ್ಭುತವಾದ ಮಹಿಮೆಯನ್ನು ಈ ಪಾದದಲ್ಲಿ ವರ್ಣಿಸಲಾಗಿದೆ. ಜೀವರು ಮಲಗಿದಾಗ ಭಗವಂತನು ತನ್ನ ಅಚಿಂತ್ಯ ಶಕ್ತಿಯಿಂದ ಜೀವರ ಅನಾದಿ ಸಂಸ್ಕಾರಗಳಿಂದ ಸ್ವಾಪ್ನ ಪದಾರ್ಥಗಳನ್ನು ಆನೆ ಕುದುರೆ ಇತ್ಯಾದಿಗಳನ್ನು ಸೃಷ್ಟಿ ಮಾಡಿ ಅವರವರಿಗೆ ತೋರಿಸುತ್ತಾನೆ ಸ್ವಲ್ಪ ಕಾಲಾನಂತರದಲ್ಲಿ ತಿರೋಧಾನಗೊಳಿಸುತ್ತಾನೆ. ಜಾಗ್ರದವಸ್ಥೆಗೂ ಅವನೇ ಪ್ರೇರಕ. ಒಂದು ರೂಪದಿಂದ ಜೀವರ ನಾಡೀಸ್ಥನಾಗಿ ಸುಪ್ತಿ(ಗಾಢನಿದ್ರಾ) ಕಾಲದಲ್ಲಿ ಜೀವರಿಂದ ಪ್ರಾಪ್ಯನಾಗಿ ಸುಪ್ತಿ ಪ್ರೇರಕನೂ ಆಗಿದ್ದಾನೆ. ಜೀವರು ನಿದ್ರೆಯಿಂದ ಎಚ್ಚತ್ತುಕೊಳ್ಳುವುದೂ ಅವನಿಂದಲೇ ಭೇರೀತಾಡಿನಾದಿಗಳು ನಿಮಿತ್ತ ಮಾತ್ರ. ಮೋಹ (ಮೂರ್ಛಾ) ಎಂಬ ಮತ್ತೊಂದು ಅವಸ್ಥೆ ಇದೆ. ಅದಕ್ಕೂ ಅವನೇ ಪ್ರೇರಕ. ಒಟ್ಟಿನಲ್ಲಿ ಸರ್ವಕಾಲದಲ್ಲಿ ಸರ್ವಜೀವರಿಗೆ ಸರ್ವಾವಸ್ಥಾ ಪ್ರೇರಕ. ಕಣ್ಣು ಕಂಠ ಮೊದಲಾದ ಭಿನ್ನ ಭಿನ್ನ ಸ್ಥಾನಗಳಲ್ಲಿದ್ದು ಜೀವರ ಅವಸ್ಥಾ ಪ್ರೇರಕವಾದ ಆ ರೂಪಗಳೆಲ್ಲವೂ ಒಂದೇ ಆಗಿವೆ. ಅಧಿಷ್ಠಾನ ಭೇದದಿಂದ ಅವುಗಳಲ್ಲಿ ಭೇದ ಇಲ್ಲ. ಇದೂ ಅವನ ಮಹಿಮೆಯೇ ಆಗಿದೆ. ಅಪ್ರಾಕೃತವಾದ ಜ್ಞಾನಾನಂದಮಯವಾದ ಆಕಾರ ಉಳ್ಳವನೇ ಹೊರತು ದುಃಖಾಸ್ಪದವಾದ ಭೌತಿಕ ದೇಹ ಉಳ್ಳವನಲ್ಲ. ಜೀವರೆಲ್ಲರೂ ಅವನಿಗೆ ಪ್ರತಿಬಿಂಬರು. ನೆರಳಿನಂತೆ ಅಧೀನರು. ಆ ಪರಮಾತ್ಮನಲ್ಲಿ ಮಾಡುವ ಭಕ್ತಿಗನುಗುಣವಾಗಿ ಮೋಕ್ಷ ರೂಪಫಲವನ್ನು ಹೊಂದುವರು. ಭಗವಂತನು ಸೃಷ್ಟಿ

ಸಂಹಾರ ಕರ್ತನಾದಂತೆ ಪಾಲನ ಕರ್ತನೂ ಆಗಿದ್ದಾನೆ. ಅವ್ಯಕ್ತನಾದರೂ ಅವನನ್ನು ಪ್ರಸನ್ನಗೊಳಿಸಿದ ಜೀವರಿಗೆ ಪ್ರಕಟನಾಗುವನು. ಇದು ಅವನ ಅಚಿಂತ್ಯ ಶಕ್ತಿಯ ದ್ಯೋತಕ. ಅವನು ಆನಂದಾದಿಗುಣ ಸ್ವರೂಪನೂ ಗುಣ ಉಳ್ಳವನೂ ಆಗಿದ್ದಾನೆ. ಆ ಆನಂದಾದಿ ಗುಣಗಳು ಲೌಕಿಕಾನಂದಾದಿಗಳಿಗಿಂತ ಅತ್ಯಂತ ವಿಲಕ್ಷಣ. ಧ್ಯಾನ ಕಾಲದಲ್ಲಿ ಗೋಚರವಾಗುವುದು ವಾಸನಾಮಯ ಪ್ರತೀಕವೇ ಹೊರತು ಬ್ರಹ್ಮನಲ್ಲ. ಆದರೂ ಆ ಪ್ರತೀಕದಲ್ಲಿ ಸನ್ನಿಹಿತನಾಗಿದ್ದು ಫಲ ಪ್ರದನಾಗುವನು.

ತೃತೀಯಪಾದದಲ್ಲಿ ನಿರೂಪಿತವಾದ ಪ್ರಮೇಯ-- ಚತುರ್ಮುಖ ಬ್ರಹ್ಮದೇವರು ಸರ್ವವೇದ ಗಳಿಂದಲೂ ಸರ್ವಗುಣ ಗಳನ್ನೂ ಉಪಸಂಹಾರ ಮಾಡಿ ಅಂದರೆ ಏಕ ಬುದ್ಧಿಯಲ್ಲಿ ಕ್ರೋಡೀಕರಿಸಿ ಉಪಾಸನೆ ಮಾಡುವವರು. ಇಲ್ಲದಿದ್ದರೆ ಗುಣೋಕ್ತಿಯೇ ವ್ಯರ್ಥವಾಗುತ್ತದೆ. ಮನುಷ್ಯೋತ್ತಮರಿಗಿಂತ ವ್ಯತಿರಿಕ್ತರಾದ ದೇವತೆಗಳು ತಮ್ಮ ತಮ್ಮ ಶಕ್ತ್ಯನುಸಾರವಾಗಿ ಬಹು ಗುಣೋಪಾಸಕರು. ಮನುಷ್ಯೋತ್ತಮರು ಸತ್-(ನಿರ್ದುಷ್ಟ.) ಚಿತ್ - (ಜ್ಞಾನರೂಪ,) ಆನಂದ - (ಆನಂದರೂಪ.) ಆತ್ಮಾ - (ಸ್ವಾಮಿ) ಎಂದು ಚತುರ್ಗುಣೋಪಾಸಕರು. ಇಷ್ಟರಿಂದಲೇ ಅವರು ತಮ್ಮ ಅಭೀಷ್ಟವನ್ನು ಹೊಂದುವರು. ಅವರಿಗಿಂತ ಕೆಳಗಿನವರಿಗೆ ಆತ್ಮತ್ವರೂಪ ಏಕ ಗುಣೋಪಾಸನೆ. 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿಯಾಗಿ ಹೇಳಲ್ಪಟ್ಟ ಪ್ರಿಯ ಶಿರಸ್ತ್ವಾದಿಗಳು ಮನುಷ್ಯರ ಉಪಾಸನೆಗೆ ಯೋಗ್ಯವಲ್ಲ. ಆತ್ಮ ಶಬ್ದವು ಸರ್ವಗುಣವಾಚಕವಾಗಿದ್ದರೂ ಎಲ್ಲರಿಗೂ ಅಷ್ಟು ಅರ್ಥಗಳು ಗೋಚರವಾಗುವುದಿಲ್ಲ. ಆದ್ದರಿಂದ ಆತ್ಮಾ ಎಂದು ಉಪಾಸನೆ ಮಾಡುವಾಗ ಯೋಗ್ಯತಾನುಸಾರ ಗೋಚರವಾದ ಅರ್ಥಗಳನ್ನು ತಿಳಿದು ಉಪಾಸನೆ ಮಾಡಬೇಕು. ಭಗವಂತನಲ್ಲಿ ಲೋಕ ಸದೃಶ ಗುಣಗಳನ್ನು ಉಪಾಸನೆ ಮಾಡಕೂಡದು ಗುರುಮುಖೇನ ಅವನ ಅಲೌಕಿಕ ಗುಣಗಳ ಉಪದೇಶ ಪಡೆದು ಅಂಥ ಗುಣಗಳನ್ನೇ ಉಪಾಸನೆ ಮಾಡಬೇಕು. ಬ್ರಹ್ಮ ದೇವರು ಅಧಿಕಾರಿಗಳಾದ್ದರಿಂದ ಕದಾಚಿತ್ ಅಭಿವ್ಯಕ್ತವಾದ ತ್ರಿವಿಕ್ರಮತ್ವಾದಿಗಳನ್ನೂ ಉಪಾಸನೆ ಮಾಡುವರು. ಸರಸ್ವತೀ ದೇವಿಯು ನಿತ್ಯ ವಿಕ್ರಾಂತಿ ಮೊದಲಾದ ಕ್ರಿಯೆಗಳಲ್ಲಿ ಅಂತರ್ಭಾವಗೊಳಿಸಿ ಉಪಸನೆ ಮಾಡಲು ಅಧಿಕಾರಿಗಳು ಹೊರತು ಪ್ರತ್ಯೇಕವಾಗಿ ತ್ರಿವಿಕ್ರಮತ್ವಾದಿಗಳನ್ನುಪಾಸನೆ ಮಾಡಲು ಅಧಿಕಾರಿಗಳಲ್ಲ. ಆದ್ದರಿಂದಲೇ ಅವರ ಆನಂದದಲ್ಲಿ ಫಲಧಲ್ಲಿ ತಾರತಮ್ಯವಿದೆ. ಮುಕ್ತಿಯಲ್ಲಯೂ

ಸ್ವೇಚ್ಛೆಯಿಂದ ವಿಧಿ ಬಂಧವಿಲ್ಲದೇ ಜೀವರು ಭಗವಂತನನ್ನು ಉಪಾಸನೆ ಮಾಡುತ್ತಾರೆ.

ಬದ್ಧರಾದ ಸಂಸಾರಿ ಜೀವರಿಗೆ ಕರ್ಮನಿಯಮವಿದ್ದಂತೆ ಮುಕ್ತರಿಗಿಲ್ಲ. ಅವರು ಸ್ವೇಚ್ಛೆಯಿಂದ ಮಾಡಲೂಬಹುದು. ಬಿಡಲೂಬಹುದು. ಜೀವರಾಶಿಯಲ್ಲಿ ಉಪಾಸನೆಯ ವಿಷಯದಲ್ಲಿ ಅನಧಿಕಾರಿ ಅಧಿಕಾರಿ ಎಂಬ ವ್ಯವಸ್ಥೆ ಇದ್ದಂತೆ ಅಪರೋಕ್ಷಜ್ಞಾನಿಗಳಿಗೆ ಮೋಕ್ಷದ ವಿಷಯದಲ್ಲಿ ಈ ಭೇದವಿರುವುದಿಲ್ಲ. ಅಪರೋಕ್ಷಿಗಳೆಲ್ಲರಿಗೂ ಮೋಕ್ಷ ಇದ್ದೇ ಇರುತ್ತದೆ. ಶ್ರುತಿಯಲ್ಲಿ ಮೋಕ್ಷ ತಾರತಮ್ಯವನ್ನು ಹೇಳಿದ್ದರಿಂದ ಉಪಾಸನಾ ತಾರತಮ್ಯವೂ ಸಿದ್ಧವಾಗಿದೆ. ಜೀವರ ಅನಾದಿಯೋಗ್ಯತಾ ತಾರತಮ್ಯವನ್ನು ಅವಲಂಬಿಸಿ ಉಪಾಸನೆಯಲ್ಲಿ ತಾರತಮ್ಯವಿದೆ. ಉಪಾಸನಾಧಿಕಾರಿಗಳಲ್ಲಿ (ಪ್ರಾಣ) ಬ್ರಹ್ಮ ದೇವರೇ ಶ್ರೇಷ್ಠರು. ಲಕ್ಷ್ಮೀ ದೇವಿಯರು ಮಾಡುವ ಉಪಾಸನೆಯು ಭಕ್ತ್ಯತಿಶಯ ಪ್ರಯುಕ್ತವೇ ಹೊರತು ಅಧಿಕಾರಿತ್ವ ಪ್ರಯುಕ್ತವಲ್ಲ. ಬ್ರಹ್ಮ ದರ್ಶನವನ್ನು ಪಡೆಯಲು ತತ್ತ್ವಜ್ಞಾನರೂಪವಾದ ಶ್ರವಣ, ವಿಚಾರ ರೂಪವಾದ ಮನನ ಗುಣೋಪಸಂಹಾರ ರೂಪವಾದ ಧ್ಯಾನ ಇವು ಮೂರೂ ಅಗತ್ಯವಾಗಿವೆ. ಯಾವುದನ್ನೂ ಬಿಡುವಂತಿಲ್ಲ. ಶ್ರವಣ ಪದದಿಂದ ಪ್ರಸಾದ ಪೂರ್ವಕ ಗುರೂಪದೇಶ ಯುಕ್ತವಾದ ಶ್ರವಣವನ್ನೇ ಇಟ್ಟುಕೊಳ್ಳಬೇಕು. ಅದರಲ್ಲಿ ಗುರುಪ್ರಸಾದವು ಇತಿಕರ್ತವ್ಯತಾರೂಪವಾದ್ದರಿಂದ ಪ್ರಬಲವಾಗಿದೆ. ಒಬ್ಬ ಗುರುವನ್ನಾಶ್ರಯಿಸಿದ ಶಿಷ್ಯನು ಮತ್ತೊಬ್ಬ ಗುರುವನ್ನಾಶ್ರಯಿಸಬೇಕಾದರೆ ಅವರು ಉತ್ತಮರಾಗಿದ್ದರೆ ಪೂರ್ವಗುರುಗಳ ಅನುಜ್ಞೆ ಇಲ್ಲದೆಯೇ ಆಶ್ರಯಿಸಬಹುದು. ಅವರು ಪೂರ್ವಗುರುಗಳಿಗೆ ಸಮಾನರಾಗಿದ್ದರೆ ಪೂರ್ವಗುರುಗಳ ಅನುಜ್ಞೆಯನ್ನು ಪಡೆಯಬೇಕು. ಭಗವದಪರೋಕ್ಷವನ್ನು ಪಡೆಯಲು ಶ್ರವಣಾದಿಗಳು ಮಾತ್ರವಲ್ಲದೇ ಹರಿಗುರು ಭಕ್ತ್ಯಾದಿ ಗುಣಗಳೂ ಇರಬೇಕು. ಜ್ಞಾನದಿಂದಲೇ ಮೋಕ್ಷ ಫಲ ಹೊರತು ಕರ್ಮಾದಿಗಳಿಂದ ಅಲ್ಲ. ಕರ್ಮಾದಿಗಳಿಂದ ಶ್ರುತವಾದ ಮೋಕ್ಷವು ಗೌಣ ಮೋಕ್ಷ ಹೊರತು ಮುಖ್ಯ ಮೋಕ್ಷವಲ್ಲ. ಉಪಾಸನಾ ತಾರತಮ್ಯದಿಂದ ಭಗವದಪರೋಕ್ಷದಲ್ಲಿಯೂ ಅಂತರ್ದರ್ಶನ ಬಹಿರ್ದರ್ಶನ ಇತ್ಯಾದಿ ರೂಪದಿಂದ ತಾರತಮ್ಯವಿದೆ. ಅದರಲ್ಲಿಯೂ ಅವರವರಿಗೆ ಯೋಗ್ಯವಾದ ರೂಪದ ದರ್ಶನವೇ ಸಾಧನ ಹೊರತು ಯಾವುದೋ ಒಂದು ರೂಪದ ದರ್ಶನವಲ್ಲ. ಇತರ ದೇವತೆಗಳನ್ನೂ ಭಗವದಂಗಾಶ್ರಿತರೆಂದು ಉಪಾಸಿಸಬೇಕು. ಪ್ರಧಾನವಾಗಿ ಉಪಾಸನೆ ಮಾಡತಕ್ಕದ್ದಲ್ಲ. ಭಗವಂತನ

ಯಾವ ಗುಣವನ್ನು ಉಪಾಸನೆ ಮಾಡಿದರೂ ಪರಿಪೂರ್ಣ ಎಂಬುದಾಗಿ ಮಾಡಬೇಕು. ಆದರೂ ಬ್ರಹ್ಮ ದೇವರಿಂದ ಚಿಂತಿಸಲ್ಪಡುವ ಪೂರ್ಣತ್ವಕ್ಕೂ ಇತರರು ಚಿಂತಿಸುವ ಪೂರ್ಣತ್ವಕ್ಕೂ ವ್ಯತ್ಯಾಸವಿರುತ್ತದೆ. ಬಿಂಬೋಪಾಸನೆ ಮಾಡುವವರು ದುರಿತಾದಿ ನಿವೃತ್ತಿಗೋಸ್ಕರ ನರಸಿಂಹಾದ್ಯುಪಾಸನೆಯನ್ನೂ ಮಾಡಬಹುದು. ತೀವ್ರವಾದ ಬಿಂಬೋಪಾಸನೆಯಿಂದಲೇ ದುರಿತಾದಿ ನಿವೃತ್ತಿಯನ್ನು ಮಾಡಿಕೊಳ್ಳುವವರು ಬಿಡಲೂ ಬಹುದು. ಅಂತೂ ವಿಕಲ್ಪ. ಇದರಂತೆ ಸಂಪತ್ತೇ ಮೊದಲಾದ ಕಾಮ್ಯಸಾಧನವಾದ ಶ್ರೀಕರಾದಿ ಭಗವದ್ರೂಪಗಳ ವಿಷಯದಲ್ಲೂ ವಿಕಲ್ಪ. ಫಲಕ್ಕೋಸ್ಕರವಲ್ಲದೇ ಅನುಗ್ರಹಕ್ಕೋಸ್ಕರ ಮುಮುಕ್ಷುಗಳೂ ಮಾಡಬಹುದು. ಭಗವದಾಶ್ರಿತದೇವತೆಗಳು ಅವನನ್ನು ಉಪಾಸನೆ ಮಾಡುವಾಗ ತಮ್ಮಿಂದ ಆಶ್ರಿತವಾದ ಅಂಗ ಉಳ್ಳವನು ಎಂದೇ ಮಾಡಬೇಕು.

**ಚತುರ್ಥಪಾದದಲ್ಲಿ** ನಿರೂಪಿತವಾದ ಪ್ರಮೇಯ-- ಬಿಂಬಾಪರೋಕ್ಷಕ್ಕೆ ಮೋಕ್ಷ ಒಂದೇ ಫಲ ಎಂಬ ನಿಯಮವಿಲ್ಲ. ಎಲ್ಲ ಪುರುಷಾರ್ಥಗಳನ್ನೂ ಅದು ಕೊಡಬಲ್ಲದು. ಅಪರೋಕ್ಷಕ್ಕಾದರೂ ಎಲ್ಲರೂ ಅಧಿಕಾರಿಗಳಲ್ಲ. ಹರಿಗುರು ಭಕ್ತ್ಯಾದಿ ಪೂರ್ವಕ ಅಧ್ಯಯನ ಸಂಪನ್ನರು ಮಾತ್ರ ಅಧಿಕಾರಿಗಳು. ಅವರಲ್ಲಿರುವ ಅಧಿಕಾರವೂ ಏಕ ಪ್ರಕಾರವಾದುದಲ್ಲ. ತಾರತಮ್ಯೋಪೇತವಾಗಿರುತ್ತದೆ. ದೇವತೆಗಳಿಗಾಗಲೀ ಮನುಷ್ಯರಿಗಾಗಲೀ ಅಪರೋಕ್ಷಾನಂತರದಲ್ಲಿ ಪಾಪ ಸಂಭವಿಸಿದರೆ ಅದು ಅಲ್ಪವಾದ ಪಕ್ಷದಲ್ಲಿ ಯಾವ ದೋಷವೂ ಇಲ್ಲ. ಮಹಾಪಾಪವಾದ ಪಕ್ಷದಲ್ಲಿ ಮನುಷ್ಯರಿಗೆ ಮೋಕ್ಷದಲ್ಲಿ ಕ್ಲೃಪ್ತವಾದ ಆನಂದಕ್ಕೆ ಹ್ರಾಸವಾಗುತ್ತದೆ. ಮೋಕ್ಷಕ್ಕಂತೂ ಹಾನಿ ಇಲ್ಲ. ದೇವತೆಗಳಿಗಾದರೆ ಅಧಿಕ ಸಾಧನದಿಂದ ಹೆಚ್ಚಾಗಿ ಪಡೆಯಬಹುದಾದ ಆನಂದಕ್ಕೆ ಮಾತ್ರ ಹ್ರಾಸ. ಇಹಲೋಕದಲ್ಲಿ ಅಶುಚಿತ್ವ ಅಸಂಭಾಷ್ಯತ್ವಾದಿಗಳಂತೂ ಇಲ್ಲವೇ ಇಲ್ಲ.

ಮಹಾಪ್ರಯತ್ನ ಮಾಡಿದರೂ ಯೋಗ್ಯರಿಗೆ ಮಾತ್ರ ಜ್ಞಾನ ಪ್ರಾಪ್ತಿ ಹೊರತು ಅಯೋಗ್ಯರಿಗೆ ಆಗುವುದಿಲ್ಲ. ಸಾಧನ ಮಾಡತಕ್ಕವರು ಜೀವರಾದರೂ ಇಂದ್ರಿಯಾಭಿಮಾನಿ ದೇವತೆಗಳಿಗೆ ಮಾತ್ರ ಜ್ಞಾನಫಲ ಹೊರತು ಇತರ ಜೀವರಿಗಿಲ್ಲ ಎಂದು ಭಾವಿಸಬಾರದು. ಜೀವರಿಗೂ ಅಲ್ಪ ಫಲವಿದ್ದೇ ಇದೆ. ಮೋಕ್ಷಾಧಿಕಾರಿ ಮನುಷ್ಯರಲ್ಲಿ ಜ್ಞಾನ ಪ್ರಚುರರಾದ ಯತಿಗಳೇ ಶ್ರೇಷ್ಠರಾದ್ದರಿಂದ ಜ್ಞಾನವೇ ಶ್ರೇಷ್ಠವೆಂದು ತಿಳಿಯಬೇಕು. ಅಯೋಗ್ಯರಿಗೆ ಜ್ಞಾನಾವಿಷ್ಕಾರವನ್ನು ಮಾಡಕೂಡದು. ಯೋಗ್ಯರಿಗೆ ಪ್ರಾರಬ್ಧರೂಪ ಪ್ರತಿಬಂಧಕ ಇಲ್ಲದಿದ್ದರೆ ಸಾಧನ

ಪೂರ್ತಿಯಾದ ಜನ್ಮದಲ್ಲಿಯೇ ಅಪರೋಕ್ಷವಾಗುತ್ತದೆ. ಪ್ರತಿಬಂಧಕವಿದ್ದರೆ ಜನ್ಮಾಂತರದಲ್ಲಿ ಆಗುವುದು. ಇದರಂತೆ ಮೋಕ್ಷಪ್ರತಿಬಂಧಕ ಪ್ರಾರಬ್ಧವಿಲ್ಲದಿದ್ದರೆ ಯಾವ ಶರೀರದಲ್ಲಿ ಅಪರೋಕ್ಷವಾಗುತ್ತದೋ ಆ ಶರೀ ಪಾತಾನಂತರದಲ್ಲಿಯೇ ಮೋಕ್ಷ. ಪ್ರಾರಬ್ಧವಿದ್ದರೆ ದೇಹಾಂತರಾವಸಾನದಲ್ಲಿ ಮೋಕ್ಷವಾಗುತ್ತದೆ.

**ಚತುರ್ಥಾಧ್ಯಾಯ**

ಪ್ರಥಮಪಾದದಲ್ಲಿ ನಿರೂಪಿತವಾದ ಪ್ರಮೇಯ-ಜೀವರು ಅಪರೋಕ್ಷ ಜ್ಞಾನ ಬರುವವರೆಗೂ ಶ್ರವಣಾದಿಗಳನ್ನು ಆವೃತ್ತಿ ಮಾಡಬೇಕು. ಒಂದು ಸಲ ಮಾಡಿದರೆ ಸಾಲದು. ಪರಮಾತ್ಮನನ್ನು ಆತ್ಮಾ ಸ್ವಾಮಿ ಎಂದು ನಿತ್ಯವೂ ಉಪಾಸನೆ ಮಾಡಬೇಕು. ಆಧಿವ್ಯಾಧಿ ನಿಮಿತ್ತದಿಂದ ಮನಸ್ಸು ವಿಕ್ಷಿಪ್ತವಾಗಿದ್ದರೂ ಬೇರೆ ಗುಣಗಳನ್ನು ಉಪಾಸನೆ ಮಾಡಲು ಸಾಧ್ಯವಾಗದಿದ್ದರೂ ಪೂರ್ಣತ್ವವನ್ನಂತೂ ಸ್ಮರಿಸಲೇಬೇಕು. ಚತುರ್ಗುಣೋಪಾಸಕರೂ ಕೂಡ ಆತ್ಮತ್ವಾದಿಗಳಿಗೆ ವಿಶೇಷಣವನ್ನಾಗಿ ಬ್ರಹ್ಮತ್ವವನ್ನು ಉಪಾಸನೆ ಮಾಡಬೇಕು. 'ನಾಮ ಬ್ರಹ್ಮೇತ್ಯುಪಾಸೀತ 'ಇತ್ಯಾದಿ ವಾಕ್ಯಗಳಿಗೆ ನಾಮಾಭಿಮಾನಿ ಉಷಾ ದೇವಿಯಿಂದಾರಂಭಿಸಿ ಪ್ರಾಣಪರ್ಯಂತ ದೇವತೆಗಳು ಭಗವಂತನ ಪ್ರತಿಮಾ ಸ್ಥಾನೀಯರು ಅವರಲ್ಲಿ ಭಗವಂತನನ್ನು ಉಪಾಸನೆ ಮಾಡಬೇಕು ಎಂದರ್ಥ. ಆಯಾ ದೇವತೆಗಳು ತಮ್ಮ ತಮ್ಮ ಉತ್ತಮಾಶ್ರಯ ಅಂಗವುಳ್ಳವನೆಂದು ವಿಷ್ಣುವನ್ನುಪಾಸನೆ ಮಾಡಬೇಕು. ಸ್ಮರಣೋಪಾಸನೆಗೆ ಆಸನಾದಿನಿಯಮದ ಅಗತ್ಯವಿಲ್ಲದಿದ್ದರೂ ಧ್ಯಾನೋಪಾಸನೆಗೆ ಅದು ಅಗತ್ಯವಾಗಿದೆ. ಮೋಕ್ಷ ಪರ್ಯಂತವೂ ಉಪಾಸನೆಯನ್ನು ಮಾಡಬೇಕು. ಈ ಸಾಧನೆಯು ಮೋಕ್ಷಕ್ಕೆ ಅಂತರಂಗ ಸಾಧನವೆಂದು ತಿಳಿಸಲು ಇದನ್ನು ಫಲಾಧ್ಯಾಯದಲ್ಲಿ ಹೇಳಲಾಗಿದೆ.

ಕರ್ಮವು ಸಂಚಿತ, ಪ್ರಾರಬ್ಧ, ಆಗಾಮಿ, ಎಂದು ಮೂರು ವಿಧ. ಅನುಭೋಗಿಸಲು ಆರಂಭಿಸಲ್ಪಡದೇ ಇದ್ದದ್ದು ಸಂಚಿತ, ಆರಂಭಿಸಲ್ಪಟ್ಟದ್ದು ಪ್ರಾರಬ್ಧ. ಅಪರೋಕ್ಷಾನಂತರದಲ್ಲಿ ಸಂಭವಿಸಬಹುದಾದದ್ದು ಆಗಾಮಿ. ಅಪರೋಕ್ಷದಿಂದ ಸಂಚಿತ ನಾಶವಾಗುತ್ತದೆ. ಪ್ರಾರಬ್ಧನ್ನು ಅನುಭೋಗಿಸಿ ಮಾಡಿಕೊಳ್ಳಬೇಕು. ಸಂಚಿತ ಕರ್ಮನಾಶವು ಜ್ಞಾನದಿಂದಲೇ ಹೊರತು ಕರ್ಮದಿಂದ ಆಗಲಾರದು.

**ದ್ವಿತೀಯಪಾದದಲ್ಲಿ** ನಿರೂಪಿತವಾದ ಪ್ರಮೇಯ-ದೇವತೆಗಳಿಗೆ ಸ್ವೋತ್ತಮರಲ್ಲಿ ದೇಹಲಯದಿಂದ ಮುಕ್ತಿ. ಮನುಷ್ಯರಿಗೆ ಉತ್ಕ್ರಮಣದಿಂದ ಮುಕ್ತಿ. ದೇವತೆಗಳ ಲಯಕ್ರಮವು ಹೀಗಿದೆ - ಕುಬೇರ ವರುಣರಿಗೆ ಸೋಮನಲ್ಲಿ, ಸೋಮ ಮತ್ತು ವಿಷ್ವಕ್ಸೇನಾದಿಗಳಿಗೆ ಅನಿರುದ್ಧನಲ್ಲಿ, ಅನಿರುದ್ಧ ಮತ್ತು ಸನಕಾದಿಗಳಿಗೆ ಕಾಮನಲ್ಲಿ, ಕಾಮನಿಗೆ ವಾರುಣಿಯಲ್ಲಿ, ವಾರುಣಿಗೆ ಶೇಷನಲ್ಲಿ ಲಯ.

ಇತರ ದೇವತೆಗಳಿಗೆ ಅಗ್ನಿಯಲ್ಲಿ, ಅಗ್ನಿಗೆ ಸೂರ್ಯನಲ್ಲಿ, ಸೂರ್ಯ. ಆಕಾಶ ಮತ್ತು ಪೃಥಿವಿ ಇವರಿಗೆ ಗುರುವಿನಲ್ಲಿ ಲಯ. ನಿರ್‌ಋತಿಗೆ ಧರ್ಮನಲ್ಲಿ ಲಯ. ಧರ್ಮ ಸ್ವಾಯಂಭುವಾತಿರಿಕ್ತ ಮನುಗಳು ಮತ್ತು ಪ್ರಿಯವ್ರತಾದಿಗಳಿಗೆ ಮನುವಿನಲ್ಲಿ ಲಯ. ಭೃಗು ಮೊದಲಾದವರಿಗೆ ದಕ್ಷನಲ್ಲಿ ಲಯ. ಗುರು ಮನು ದಕ್ಷ ಮತ್ತು ಮರುದ್ಗಣದವರಿಗೆ ಇಂದ್ರನಲ್ಲಿ ಲಯ.

ಇಂದ್ರನಿಗೆ ಸುಪರ್ಣಿಯಲ್ಲಿ ಲಯ. ಸುಪರ್ಣಿಗೆ ಗರುಡನಲ್ಲಿ ಲಯ. ಗರುಡ ಶೇಷರಿಗೆ ವಾಣಿಯಲ್ಲಿ, ವಾಣಿಗೆ ಚತುರ್ಮುಖನಲ್ಲಿ, ಚತುರ್ಮುಖನಿಗೆ ಪರಮಾತ್ಮನಲ್ಲಿ ಲಯ. ಎಲ್ಲರಿಗೂ ಚತುರ್ಮುಖ ದ್ವಾರಾ ಪರಮಾತ್ಮನಲ್ಲಿ ಲಯ.

ನಿತ್ಯಮುಕ್ತಳಾದ ಲಕ್ಷ್ಮೀದೇವಿಗೆ ದೇಹತ್ಯಾಗರೂಪವಾದ ಲಯವಿಲ್ಲ. ಲಯವನ್ನು ಹೇಳುವ ಶ್ರುತಿಯು ಭಗವಂತನ ಅತಿ ಸಾಮೀಪ್ಯವನ್ನು ಮಾತ್ರ ಹೇಳುತ್ತದೆ. ಮುಕ್ತರೆಲ್ಲರೂ ಮುಕ್ತಿಯಲ್ಲಿ ಭಗವದಿಚ್ಛೆಯಿಂದಲೇ ಸತ್ಯಕಾಮತ್ವಾದಿಗಳನ್ನು ಪಡೆದಿರುತ್ತಾರೆ.

ಮನುಷ್ಯರಲ್ಲಿ ಅಜ್ಞಾನಿಗಳ ಮರಣಕ್ಕಿಂತ ಜ್ಞಾನಿಗಳ ಮರಣದಲ್ಲಿ ವಿಶೇಷವಿರುತ್ತದೆ. ಬ್ರಹ್ಮನಾಡಿಯಲ್ಲಿರುವ ಭಗವಂತನಿಂದ ಪ್ರಕಾಶಿಸಲ್ಪಟ್ಟ ಆ ನಾಡಿಯ ಮೂಲಕ ಉತ್ಕ್ರಾಂತಿ ಹೊಂದಿದವನು ಕೂಡಲೇ ವಿಷ್ಣು ಲೋಕಕ್ಕೆ ಹೋಗುತ್ತಾರೆ. ಬೇರೆ ಸುಷುಮ್ನಾನಾಡಿಯ ಮೂಲಕ ಉತ್ಕ್ರಾಂತರಾದವರು ಜನಲೋಕಾದಿಗಳಲ್ಲಿ ಚಿರಕಾಲ ರಮಿಸಿ ಅನಂತರ ವಿಷ್ಣು ಲೋಕಕ್ಕೆ ಹೋಗುತ್ತಾರೆ. ಮುಮುಕ್ಷುಗಳಿಗೆ ಮೋಕ್ಷವನ್ನು ಪಡೆಯಲು ಬ್ರಹ್ಮ ಜ್ಞಾನ ಮತ್ತು ಮಾರ್ಗ ಸ್ಮರಣೆ ಆವಶ್ಯಕವಾಗಿದೆ.

ತೃತೀಯಪಾದದಲ್ಲಿ ನಿರೂಪಿತವಾದ ಪ್ರಮೇಯ- ಬ್ರಹ್ಮನಾಡಿಯಿಂಧ ಉತ್ಕ್ರಮಣವನ್ನು ಹೊಂದಿದ ಜೀವರು ಅರ್ಚಿ ಎಂಬ ಅಗ್ನಿ ಪುತ್ರನ ಲೋಕವನ್ನು ಪಡೆಯುತ್ತಾರೆ. ಅಲ್ಲಿಂದ ಆತಿವಾಹಿಕ ಎಂಬ ವಾಯುಲೋಕಕ್ಕೆ ಹೋಗುತ್ತಾರೆ ಅನಂತರ ಅಹರ್ಲೋಕಕ್ಕೆ ಹೋಗಿ ಅಲ್ಲಿಂದ ಶುಕ್ಲಪಕ್ಷಾಭಿಮಾನಿಯ ಲೋಕ, ಉತ್ತರಾಯಣಾಭಿಮಾನಿ ಲೋಕ ಸಂವತ್ಸರಾಭಿಮಾನಿ ಲೋಕ, ತಟಿದಭಿಮಾನಿ

ಲೋಕ, ವರುಣ ಲೋಕ, ಪ್ರಜಾಪತಿ ಲೋಕ, ಸೂರ್ಯ, ಸೋಮ ವೈಶ್ವಾನರ ಇಂದ್ರ ಧ್ರುವ, ಭಾರತೀ ಲೋಕಗಳು ಇವುಗಳ ಮೂಲಕ ವಾಯುದೇವರನ್ನು ಪಡೆದು ಅವರ ಮೂಲಕ ಅಪ್ರತೀಕಾಲಂಬನರು (ವ್ಯಾಪ್ತದರ್ಶಿಗಳು) ಪರಬ್ರಹ್ಮನನ್ನು ಪ್ರತೀಕಾಲಂಬನರು ಚತುರ್ಮುಖನನ್ನು ಪಡೆಯುತ್ತಾರೆ. ಅನಂತರ ಪ್ರಲಯ ಕಾಲದಲ್ಲಿ ಚತರ್ಮುಖನೊಂದಿಗೆ ಪರಮಾತ್ಮನನ್ನು ಹೋಗಿ ಸೇರುತ್ತಾರೆ.

**ಚತುರ್ಥಪಾದದಲ್ಲಿ** ನಿರೂಪಿತವಾದ ಪ್ರಮೇಯ-ಪರಂಜ್ಯೋತಿಃ ಶಬ್ದ ವಾಚ್ಯನಾದ ಪರ ಬ್ರಹ್ಮನನ್ನು ಪಡೆದ ಮುಕ್ತರು ಚಿದಾನಂದಾತ್ಮಕ ಶರೀರ ಉಳ್ಳವರಾಗಿ ತಮ್ಮ ಸಂಕಲ್ಪಾನುಸಾರ ಆನಂದವನ್ನು ಅನುಭವಿಸುತ್ತಾರೆ. ಸಾಯುಜ್ಯ ಮೋಕ್ಷವನ್ನು ಪಡೆದ ಕೆಲವರು ಪರಮಾತ್ಮನ ದೇಹದಿಂದ ಭಗವದ್ಭುಕ್ತ ಭೋಗಗಳಲ್ಲಿ ಲೇಶವನ್ನು ಅನುಭವಿಸುತ್ತಾರೆ. ಸ್ವರೂಪ ದೇಹದಿಂದಲೂ ಅನುಭವಿಸುತ್ತಾರೆ. ಮೋಕ್ಷವು ಸಾರ್ಷ್ಟಿ. ಸಾಯುಜ್ಯ ಸಾಲೋಕ್ಯ ಸಾಮೀಪ್ಯ, ಸಾರೂಪ್ಯವೆಂಬುದಾಗಿದೆ. ಚತುರ್ಮುಖ ಬ್ರಹ್ಮ ದೇವರು ಪಡೆಯುವ ಮೋಕ್ಷವು ಸಾರ್ಷ್ಟಿ (ಸಹಭೋಗ) ಎನಿಸುತ್ತದೆ. ಅವರಿಗಿಂತ ಕೆಳಗಿನ ಅಧಿಕಾರಿಗಳಾದ ದೇವತೆಗಳು ಪಡೆಯುವ ಮೋಕ್ಷವೇ ಸಾಯುಜ್ಯ. ಅನಂತಾಸನ ಶ್ವೇತದ್ವೀಪ ವೈಕುಂಠದಲ್ಲಿ ವಾಸ ಮಾಡುವುದು ಸಾಲೋಕ್ಯ. ಇದು ಸಾಯುಜ್ಯ ಮುಕ್ತಿಗೆ ಅರ್ಹರಾದವರಿಗಿಂತ ಕೆಳಗಿನ ಅಧಿಕಾರಿಗಳಿಗೆ. ಅದಕ್ಕಿಂತ ಕೆಳಮಟ್ಟದ ಮೋಕ್ಷ ಸಾಮೀಪ್ಯ. ಇದು ಆ ಮೂರು ಲೋಕಗಳ ಸಮೀಪದಲ್ಲಿ ವಾಸಿಸುವವರಿಗೆ. ಅವರಿಗಿಂತ ಕೆಳಗಿನ ಅಧಿಕಾರಿಗಳಿಗೆ. ಸಾರೂಪ್ಯ. ಚತುರ್ಭುಜತ್ವಾದಿ ಕೆಲವು ಅಂಶಗಳಿಂದ ಸಮಾನವಾದ ರೂಪವನ್ನು ಪಡೆಯುವಿಕೆ ಎಂದರ್ಥ. ಜಗತ್ ಸೃಷ್ಟ್ಯಾದಿ ವಿಷಯ ಬಿಟ್ಟು ಬೇರೆ ವಿಷಯದಲ್ಲಿ ಯಥೇಷ್ಟ ಶಕ್ತಿಯುಳ್ಳವರೂ, ಉತ್ತಮರನ್ನು ಹೊರತು ಪಡಿಸಿ ಬೇರೆಯವರಿಂದ ಅನಿಯಮ್ಯರೂ ವೃದ್ಧಿ ಹ್ರಾಸರಹಿತರೂ ದುಃಖಾದಿ ರಹಿತರೂ ಆಗಿ ಅನವರತ ಕೇವಲ ಸುಖವನ್ನು ಅನುಭವಿಸುವರು. ಮುಕ್ತರು ಮುಕ್ತಿಯಲ್ಲಿ ಮಾಡುವ ಉಪಾಸನಾದಿಗಳೂ ಫಲ ರೂಪವೇ ಆಗಿರುತ್ತವೆ. ಹೊರತು ಸಾಧನ ರೂಪವಿಲ್ಲ. ಮುಕ್ತರಿಗೆಂದೂ ಪುನರಾವೃತ್ತಿಯು ಇರುವುದಿಲ್ಲ.

ಶ್ರೀ ಜಿ. ಗುರುವೆಂಕಟಾಚಾರ್ಯ

||ಶ್ರೀಃ||

ಶ್ರೀಮನ್ನ್ಯಾಯಸುಧಾ

# ಪರಿಮಳಸಾರಸಂಗ್ರಹ

## ಪ್ರಥಮಾಧ್ಯಾಯ

### ಪರಿಮಳದ ಮಂಗಳಶ್ಲೋಕಗಳು

**ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ।**
**ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ॥**

ಪೂರ್ಣವಾದ ಅಗಣಿತವಾದ ಗುಣಗಳೆಂಬ ಶರೀರವುಳ್ಳ ಪವಿತ್ರವಾದ ಕೀರ್ತಿಯುಳ್ಳ ಮತ್ತು ಭಕ್ತರಿಗೆ ಸ್ವರೂಪಭೂತವಾದ ಆನಂದಮಯ ದೇಹವನ್ನು ಕೊಡುವ ಲಕ್ಷ್ಮೀಪತಿಯಾದ ಭಗವಂತನಿಗೆ ನಮಸ್ಕಾರ.

**ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ ।**
**ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ ಬ್ರಹ್ಮಣೇ ನಮಃ ॥**

ಪರಿಪೂರ್ಣವಾದ, ಲೆಕ್ಕಿಸಲು ಸಾಧ್ಯವಿಲ್ಲದ ಗುಣಮಯವಾದ ಉತ್ಕೃಷ್ಟವಾದ ನಿತ್ಯವಾದ ಸುಂದರದೇಹ ಉಳ್ಳ, ಲಕ್ಷ್ಮೀಬ್ರಹ್ಮಗರುಡ ಇಂದ್ರಾದಿಗಳಿಂದ ಸ್ತುತಿಸಲ್ಪಡುವ ಕೀರ್ತಿಯುಳ್ಳ ಪರಬ್ರಹ್ಮನಿಗೆ ನಮಸ್ಕಾರಗಳು.

**ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಮ್।**
**ತಸ್ಯ ವಾಯೋಸ್ತೃತೀಯಾಂಶಮಾಶ್ರಯೇ ಶಮವಾಪ್ತಯೇ ॥**

ರುದ್ರಾದಿಸಮಸ್ತಪ್ರಪಂಚವೂ ಯಾವಾಗಲೂ ಯಾರ ವಶದಲ್ಲಿರುವುದೋ ಅಂತಹ ವಾಯುದೇವರ ತೃತೀಯಾವತಾರಭೂತರಾದ ಶ್ರೀಮದಾಚಾರ್ಯರನ್ನು ಸೌಖ್ಯವನ್ನು ಪಡೆಯಲು ಆಶ್ರಯಿಸುತ್ತೇನೆ.

**ಸತ್ಪದ್ಮಬಂಧವೋ ಯಸ್ಯ ಗಾವೋ ವಿಶ್ವತಮೋನುದಃ ।**
**ಸ ಸ್ಯಾತ್ ತತ್ವಪ್ರಕಾಶಾಯ ಜಯತೀರ್ಥರವಿರ್ಮಮ ॥**

ಯಾವ ಶ್ರೀಜಯತೀರ್ಥರ ಮಾತುಗಳು ಸಜ್ಜನರೆಂಬ ಕಮಲಗಳನ್ನು ಅರಳಿಸುವ ಬಂಧುಗಳೂ, ಪ್ರಪಂಚದ ಅಜ್ಞಾನಾಂಧಕಾರವನ್ನು ನಿವಾರಿಸುವ

ವುಗಳೂ ಆಗಿವೆಯೋ ಅಂತಹ ಶ್ರೀಮಜ್ಜಯತೀರ್ಥರೆಂಬ ಸೂರ್ಯನು ನನಗೆ ತತ್ವಗಳ ಪ್ರಕಾಶವನ್ನುಂಟುಮಾಡಲಿ.

**ಪದವಾಕ್ಯಪ್ರಮಾಣಜ್ಞೋ ದುರ್ಮತಧ್ವಾಂತಭಾಸ್ಕರಃ ।**
**ವ್ಯಾಸತೀರ್ಥಮುನೀಂದ್ರೋ ಮೇ ಭೂಯಾತ್ ಜ್ಞಾನಸಮೃದ್ಧಯೇ ॥**

ವ್ಯಾಕರಣ-ಮೀಮಾಂಸಾ-ತರ್ಕಶಾಸ್ತ್ರನಿಪುಣರೂ, ದುರ್ಮತಗಳೆಂಬ ಕತ್ತಲೆಗೆ ಸೂರ್ಯನಂತಿರುವವರೂ ಆದ ಶ್ರೀಮದ್ವ್ಯಾಸತೀರ್ಥ ಮುನಿ ವರೇಣ್ಯರು ನನಗೆ ಜ್ಞಾನಸಮೃದ್ಧಿಯನ್ನುಂಟುಮಾಡಲಿ.

**ಅಸ್ಮದ್ದೇಶಿಕಪಾದಾನಾಂ ಪ್ರಣಮ್ಯ ಚರಣಾಂಬುಜಮ್।**
**ಶ್ರೀಮನ್ನ್ಯಾಯಸುಧಾವಾಕ್ಯವ್ಯಾಖ್ಯಾಂ ಕುರ್ಮೋ ಯಥಾಮತಿ ॥**

ನಮ್ಮ ಗುರುವರ್ಯರ (ಶ್ರೀಮತ್ಸುಧೀಂದ್ರತೀರ್ಥರ) ಪಾದಾರ ವಿಂದಕ್ಕೆರಗಿ ಯಥಾಮತಿ ಶ್ರೀಮನ್ನ್ಯಾಯಸುಧಾವಾಕ್ಯಗಳ ವ್ಯಾಖ್ಯಾನವನ್ನು ಮಾಡುವೆವು.

**ನಾರಾಯಣಂ ನಿಖಿಲಪೂರ್ಣಗುಣೈಕದೇಹಮ್**
**ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ**
**ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥**

**ಶ್ರಿಯಃ ಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-**
**ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।**
**ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ**
**ನಮೋಽಶೇಷಾಮ್ನಾಯ ಸ್ಮೃತಿಹೃದಯದೀಪ್ತಾಯ ಹರಯೇ ॥**

ಶ್ರೀಮಟ್ಟೀಕಾಕೃತ್ಪಾದರು 'ಶ್ರಿಯಃ ಪತ್ಯೇ' ಇತ್ಯಾದಿ ಮಂಗಲ ಪದ್ಯದಲ್ಲಿ ಅನುವ್ಯಾಖ್ಯಾನದ 'ನಾರಾಯಣಂ ನಿಖಿಲ ಪೂರ್ಣ...' ಎಂಬ ಆದ್ಯ ಪದ್ಯವನ್ನು ವಿವರಿಸಿದ್ದಾರೆ. ಮತ್ತು ಶ್ರೀಹರಿಯ ನಮ್ಯತ್ವಕ್ಕೆ ಪ್ರಯೋಜಕವಾದ ವಿಶಿಷ್ಟತ್ವ ಇಷ್ಟತ್ವ ಅಧಿಕೃತತ್ವವನ್ನೂ ಭಗವಂತನಲ್ಲಿ ತಿಳಿಸಿ ನಮಸ್ಕರಿಸಿದ್ದಾರೆ. ಮೂಲದಲ್ಲಿ 'ಅಶೇಷವಿಶೇಷತೋಽಪಿ ವಂದ್ಯಂ' ಎಂಬಲ್ಲಿ ಲಕ್ಷ್ಮೀ ಬ್ರಹ್ಮಾದ್ಯುತ್ತಮತ್ವವನ್ನು ಶ್ರೀಹರಿಗೆ ಹೇಳಲಾಗಿದೆ. ಅದರ ವಿವರಣೆಯೇ ಶ್ರಿಯಃ ಪತ್ಯೇ ಎಂಬುದಾಗಿದೆ. ಗ್ರಂಥಾರಂಭದಲ್ಲಿ ಸಕಲರ ವಾಕ್ ಮತ್ತು ಮನಸ್ಸಿಗೆ ದೇವತೆಯಾದ ಲಕ್ಷ್ಮೀದೇವಿಯರನ್ನು ಅವಶ್ಯ

ನಮಸ್ಕರಿಸಲೇ ಬೇಕೆಂದು ಸೂಚಿಸಲು ವಿಶೇಷವಾಗಿ 'ಶ್ರಿಯಃ ಪತ್ಯೇ' ಎಂದಿದ್ದಾರೆ. 'ಶ್ರೀಪತಯೇ' ಎಂಬುದಾಗಿ ಸಮಸ್ತಪದವನ್ನು ಪ್ರಯೋಗಿಸದೆ 'ಶ್ರಿಯಃ ಪತ್ಯೇ' ಎಂದು ಬಿಡಿಸಿ ಹೇಳಿದ್ದರಿಂದ ಹರಿ ನಮನಕ್ಕಿಂತ ಲಕ್ಷ್ಮೀ ನಮನವು ಗೌಣ ಎಂದು ತಿಳಿಯುತ್ತದೆ. ಅಂದರೆ ಹರಿ ಪರಿವಾರತ್ವೇನ ಲಕ್ಷ್ಮಿಗೆ ನಮನ ಎಂದು ಅಭಿಪ್ರಾಯ.

'ನಿತ್ಯಾಗಣಿತ' ಎಂಬ ವಿಶೇಷಣದಿಂದ ಶ್ರೀಹರಿಯು ಗುಣವೆಂಬ ಪ್ರಭೆಯುಳ್ಳವನಾದ್ದರಿಂದ ದೋಷಾಂಧಕಾರರಹಿತನಾಗಿದ್ದಾನೆ ಎಂದು ಹೇಳಲ್ಪಟ್ಟಿದೆ. ಇದರಿಂದ ಅನುವ್ಯಾಖ್ಯಾನದಲ್ಲಿರುವ 'ನಿಖಿಲಪೂರ್ಣ..' ಎಂಬ ವಿಶೇಷಣವು ನಿರ್ದೋಷಂ ಎಂಬುದಕ್ಕೆ ಸಾಧಕವಾಗಿದೆ ಎಂದು ತಿಳಿಯುವುದು. 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' (ಗುಣ ಪೂರ್ಣನಾದ ಪ್ರಯುಕ್ತ ದೋಷದೂರ) ಎಂದು ಶ್ರೀಮದಾಚಾರ್ಯರು ಹೇಳಿರುವುದರಿಂದ ಸ್ವಾತಂತ್ರ್ಯಾದಿಗುಣಗಳಿದ್ದಲ್ಲಿ ಪಾರತಂತ್ರ್ಯಾದಿ ದೋಷ ಗಳಿರುವುದು ಶಕ್ಯವಿಲ್ಲ ಎಂದು ತಿಳಿಯ ಬೇಕು. ಬ್ರಹ್ಮ ಶಬ್ದಕ್ಕೆ ಗುಣಪೂರ್ಣತ್ವ ಎಂಬ ಅರ್ಥವಿರುವಂತೆ ನಿರ್ದೋಷತ್ವವೂ ಅರ್ಥ ಎಂದು ತಿಳಿಸಲು ಗುಣಪೂರ್ಣತ್ವವನ್ನೂ ನಿರ್ದೋಷತ್ವವನ್ನೂ ತಿಳಿಸುವಂತಹ 'ನಿತ್ಯಾಗಣಿತ' ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಆದ್ದರಿಂದ ಗುಣಪೂರ್ಣತ್ವ ಮತ್ತು ನಿರ್ದೋಷತ್ವವನ್ನು ತಿಳಿಸುವ ನಾರಾಯಣ ಶಬ್ದವೂ ಮತ್ತು ಬ್ರಹ್ಮ ಶಬ್ದವೂ ಸಮಾನಾರ್ಥಕವಾದ್ದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ನಾರಾಯಣನ ನಮನವೇಕೆ? ಎಂಬ ಶಂಕೆಗೂ ಸಮಾಧಾನ ಹೇಳಿದಂತಾಯಿತು.

ಅಥವಾ ಲೋಕದಲ್ಲಿ ಗುಣ ಮತ್ತು ದೋಷಗಳು ಜೊತೆಯಾಗಿಯೇ ಇರುವುದು ಕಂಡಿರುವುದರಿಂದ ಭಗವಂತನಲ್ಲಿಯೂ ಗುಣಗಳ ಜೊತೆಗೆ ದೋಷಗಳೂ ಇರಬಹುದೇನೋ? ಎಂಬ ಶಂಕೆಯನ್ನೂ ನಿವಾರಿಸಲು ಮಿತವಾದ ಗುಣಗಳು ಇದ್ದಲ್ಲಿ ಮಾತ್ರ ದೋಷಗಳು ಇರುವ ಸಾಧ್ಯತೆ ಇದೆ. ಆದರೆ ಅಗಣಿತ ಗುಣಗಳಿದ್ದಲ್ಲಿ ದೋಷ ಬರಲು ಸಾಧ್ಯವಿಲ್ಲ ಎಂದು ಸೂಚಿಸಲು 'ನಿತ್ಯಾಗಣಿತ' ಇತ್ಯಾದಿ ಹೇತುಹೇತುಮದ್ಭಾವ ಸೂಚಕ ವಿಶೇಷಣವನ್ನು ಕೊಟ್ಟಿದ್ದಾರೆ.

ನಾರಾಯಣನ ದೇಹವು ಅನಿತ್ಯಗುಣಾತ್ಮಕವಾದರೆ ದೇಹವೂ ಅನಿತ್ಯವಾಗಬೇಕಾಗುತ್ತದೆ. ಅದಕ್ಕಾಗಿ ನಿತ್ಯ ಎಂದು ವಿಶೇಷಣ ಕೊಟ್ಟಿದ್ದಾರೆ. ನಾರಾಯಣನ ದೇಹವು ನಿತ್ಯಗುಣಾತ್ಮಕ ಎಂದು ಅಭಿಪ್ರಾಯ. ಇದರಿಂದ ಮೂಲದಲ್ಲಿ 'ಸದಾ ಪ್ರಿಯತಮಂ' ಎಂಬಲ್ಲಿರುವ 'ಸದಾ' ಶಬ್ದವನ್ನು ನಿಖಿಲ ಇತ್ಯಾದಿ ವಿಶೇಷಣಕ್ಕೂ ಅನ್ವಯ ಮಾಡಿ ಸದಾನಿಖಿಲಪೂರ್ಣಗುಣೈಕದೇಹ ಎಂದು ಅರ್ಥೈಸಬೇಕೆಂದು ತಿಳಿಸದಂತಾಯಿತು.

ಮೂಲದಲ್ಲಿರುವ ನಿರ್ದೋಷಂ ಎಂಬಲ್ಲಿ ದೋಷಪದಕ್ಕೆ ಅಶೇಷ ದೋಷ ಎಂದೇ ಅರ್ಥಮಾಡಬೇಕೆಂಬುದನ್ನು ತಿಳಿಸಲು 'ಸಕಲಾವದ್ಯ ತಮಸೇ' ಎಂಬಲ್ಲಿ 'ಸಕಲ' ಶಬ್ದವನ್ನು ಸೇರಿಸಿದ್ದಾರೆ.

'ಅಸ್ಯೋದ್ಭವಾದಿದಂ' ಎಂಬಲ್ಲಿ 'ಅಸ್ಯ' ಎಂದರೆ ಜಗತ್ತನ್ನು ಮಾತ್ರ ಇಟ್ಟುಕೊಳ್ಳಬೇಕೇ ಹೊರತು ಈಶ್ವರನನ್ನಲ್ಲ ಎಂದು ಸೂಚಿಸಲು 'ಜಗಜ್ಜನ್ಮಸ್ಥೇಮ' ಇತ್ಯಾದಿಯಾಗಿ ಹೇಳಿದ್ದಾರೆ. 'ಸ್ಥೇಮ' ಎಂದರೆ ರಕ್ಷಣೆ ಎಂದರ್ಥ. ಅಖಿಲಭುವನಜನ್ಮಸ್ಥೇಮಭಂಗಾದಿಲೀಲಃ ಇತ್ಯಾದಿ ಪದ್ಯವನ್ನು ವ್ಯಾಖ್ಯಾನ ಮಾಡುತ್ತಾ ಶ್ರುತ ಪ್ರಕಾಶದಲ್ಲಿಯೂ ಸ್ಥೇಮ ಪದಕ್ಕೆ ರಕ್ಷಣೆ ಎಂದರ್ಥವನ್ನು ಹೇಳಿದ್ದಾರೆ. ಸ್ಥಿರ ಶಬ್ದದ ಮೇಲೆ ಇಮನಿಚ್ ಪ್ರತ್ಯಯವೂ, ಪ್ರಿಯಸ್ಥಿರ ಇತ್ಯಾದಿ ಸೂತ್ರದಿಂದ ಸ್ಥಿರ ಶಬ್ದಕ್ಕೆ ಸ್ಥಾ ಆದೇಶವು, ಆದ್ಗುಣಃ ಎಂಬ ಸೂತ್ರದಿಂದ ಗುಣವೂ ಬಂದು ಸ್ಥೇಮ ಎಂದು ರೂಪ ನಿಷ್ಪತ್ತಿಯಾಗಿದೆ. ಯದ್ಯಪಿ ವಾಮನ ವೃತ್ತಿ ಮುಂತಾದ ಗ್ರಂಥಗಳಲ್ಲಿ ಮುಗ್ಧ ಪ್ರೌಢ ಸ್ಥಿರ ಶಬ್ದಗಳು ಪೃಥು ಇತ್ಯಾದಿ ಗಣದಲ್ಲಿ ಸೇರಿಲ್ಲವಾದ್ದರಿಂದ 'ಪೃಥ್ವಾದಿಭ್ಯ ಇಮನಿಜ್ವಾ' ಎಂಬ ಸೂತ್ರದಿಂದ ಇಮನಿಚ್ ಪ್ರತ್ಯಯವು ಬರುವುದಿಲ್ಲವಾದ್ದರಿಂದ 'ಇಮನಿಚ್' ಪ್ರತ್ಯಯಾಂತ ಶಬ್ದ ಪ್ರಯೋಗವು ಅಸಾಧು ಎಂದು ಹೇಳಿದ್ದಾರೆ. ಆದರೂ ನೈಷಧ ಮಹಾಕಾವ್ಯದ ಹನ್ನೆರಡನೆಯ ಸರ್ಗದಲ್ಲಿರುವ 'ಯತ್ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತೇ' ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬ ಸೂತ್ರದಲ್ಲಿ ಚಕಾರದಿಂದ ಇಮನಿಚ್ ಪ್ರತ್ಯಯವನ್ನು ಸಮುಚ್ಚಯ ಮಾಡಿರುವುದರಿಂದ ಮತ್ತು ದೃಢಾದಿಗಳಲ್ಲಿ ಸ್ಥಿರ ಶಬ್ದವನ್ನು ಸೇರಿಸಿರುವುದರಿಂದಲೂ ಸ್ಥೇಮ ಶಬ್ದ ಪ್ರಯೋಗವು

ಸಾಧುವೇ ಆಗಿದೆ. ಅಥವಾ ಷ್ಠಾ ಧಾತುವಿಗೆ ಔಣಾದಿಕವಾದ ಇಮನಿಚ್ ಪ್ರತ್ಯಯ ಮಾಡಿ ಗುಣವನ್ನು ಮಾಡಿದಾಗ ಸ್ಥೇಮ ಎಂಬ ರೂಪವಾಗುತ್ತದೆ. ಸ್ಥಿತಿ ಎಂದು ಅರ್ಥ.

'ಉದ್ಭವಾದಿದಂ' ಎಂಬಲ್ಲಿ ಆದಿ ಪದದಿಂದ ಸೃಷ್ಟ್ಯಾದಿ ಅಷ್ಟವನ್ನೂ ಗ್ರಹಿಸಲು ಬರುವಾಗ ಸುಧಾದಲ್ಲಿ ಜಗಜ್ಜನ್ಮೇತ್ಯಾದಿ ವಿಶೇಷಣದಲ್ಲಿ ಸೃಷ್ಟಿಸ್ಥಿತಿ ಪ್ರಲಯಗಳನ್ನು ಮಾತ್ರ ಗ್ರಹಿಸಿದ್ದೇಕೆಂದರೆ ಸೃಷ್ಟ್ಯಾದಿ ಎಂಟು ವ್ಯಾಪಾರಗಳಲ್ಲಿ ಸಮಗ್ರ ಪ್ರಪಂಚಕ್ಕೆ ಸಂಬಂಧಿಸಿದ್ದು ಈ ಮೂರು ಮಾತ್ರ ಎಂದು ತಿಳಿಸುವುದು ಉದ್ದೇಶ. ನಿಯಮನವನ್ನೂ ಲಕ್ಷಣಯಾ ಇಟ್ಟುಕೊಳ್ಳಬೇಕು.

ಪ್ರೇಕ್ಷಾವಂತನಾದ ಶ್ರೀಹರಿಯು ಪ್ರಯೋಜನವಿಲ್ಲದೇ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡಲಾರ. ಪ್ರಯೋಜನವಿದೆಯೆಂದಾದರೆ ಅಪೂರ್ಣ ನೆಂದಾಗುವುದು. ಈ ಆಕ್ಷೇಪವನ್ನು ಪರಿಹರಿಸಲು 'ಜಗಜ್ಜನ್ಮ... ಶೀಲ ವಪುಷೇ' ಎಂದು ಸ್ವಭಾವಾರ್ಥಕವಾದ ಶೀಲಶಬ್ದವನ್ನು ಪ್ರಯೋಗಿಸಿದ್ದಾರೆ. ಫಲವಿಲ್ಲದಿದ್ದರೂ ಸೃಷ್ಟ್ಯಾದಿ ವ್ಯಾಪಾರವು ಅವನ ಸ್ವಭಾವವಾಗಿದೆ. ಇದು ಅವನ ಸ್ವಭಾವ ಎಂದು ಹೇಳಿರುವುದರಿಂದ 'ಸದಾ ಅಸ್ಯೋದ್ಭವಾದಿದಂ' ಎಂಬ ಅನ್ವಯ ಸೂಚಿತವಾಯಿತು. ಇದೇ ಜಗಜ್ಜನ್ಮ ಎಂಬ ವಿಶೇಷಣದಲ್ಲಿ 'ವಪುಷೇ' ಎಂದು ಹೇಳಿರುವುದಿಂದ ನಿಖಿಲಪೂರ್ಣ ಗುಣೈಕದೇಹಂ ಎಂಬಲ್ಲಿ ದೇಹ ಶಬ್ದವನ್ನು ಪ್ರಯೋಗಿಸಿದ್ದು ಕೇವಲ ಗುಣಾದಿಗಳನ್ನು ಉಪಪಾದಿಸಲು ಮಾತ್ರವಲ್ಲ, ಸೃಷ್ಟ್ಯಾದಿ ಕರ್ತೃತ್ವವನ್ನೂ ಉಪಪಾದಿಸಲು ಹೇಳಿದ್ದೆಂದು ತಿಳಿಯುತ್ತದೆ. ಇಲ್ಲದಿದ್ದರೆ ಶರೀರವೇ ಇಲ್ಲವಾದ್ದರಿಂದ ಕರ್ತನಾಗಲಾರ ಎಂಬ ('ಪತ್ಯುರಸಾಮಂಜಸ್ಯಾತ್' ಎಂಬ ಅಧಿಕರಣದ 'ಸಂಬಂಧಾನುಪಪತ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಿದ) ದೋಷ ಬರುತ್ತಿತ್ತು. ಮೂಲದಲ್ಲಿ ಸುವಾಕ್ಯೈಃ ಎಂಬ ಪದದಿಂದ ಸರ್ವವೇದ ವೇದಾನುಸಾರಿ ಪೌರುಷೇಯ ಅಪೌರುಷೇಯವಾಕ್ಯಗಳನ್ನು ಇಟ್ಟುಕೊಳ್ಳ ಬೇಕೆಂದು ಸೂಚಿಸಲು ಅಶೇಷಾಮ್ನಾಯಸ್ಮೃತಿ ಎಂದು ಹೇಳಿದ್ದಾರೆ.

ಶ್ರೀಹರಿಯ ಗುಣಪೂರ್ಣತ್ವಾದಿಗಳು ಎಲ್ಲಾ ಆಮ್ನಾಯ ಮತ್ತು ಸ್ಮೃತಿಗಳ ಮೇಲ್ನೋಟದ ಅರ್ಥವಾಗಿ ಕಾಣದಿದ್ದರೂ ತಾತ್ಪರ್ಯಾರ್ಥ ವಾಗಿದೆ ಎಂದು ತಿಳಿಸಲು ಹೃದಯ ಶಬ್ದವನ್ನು ಪ್ರಯೋಗಿಸಿದ್ದಾರೆ.

'ಸದಾ ಪ್ರಿಯತಮಂ' ಎಂಬುದನ್ನು ವಿವರಿಸಲಿಕ್ಕಾಗಿ ಹರಯೇ ಎಂದು ಹೇಳಿದ್ದಾರೆ. 'ಹರಿಂ ಹರಂತಮನುಯಂತಿ ದೇವಾಃ' ಎಂಬ ಪ್ರಮಾಣಾನುಸಾರವಾಗಿ ಹರಿ ಶಬ್ದಕ್ಕೆ ಅಶೇಷಕ್ಲೇಶಪರಿಹಾರಕ ಎಂದು ಅರ್ಥವಾಗುತ್ತದೆ. ಇದರಿಂದ ಇಷ್ಟತ್ವವನ್ನು ವಿವರಿಸಿದಂತಾಯಿತು. ನಿತ್ಯಾಗಣಿತ ಇತ್ಯಾದಿ ಎರಡು ವಿಶೇಷಣಗಳಿಂದ ವಿಶಿಷ್ಟತ್ವವನ್ನೂ, ಅಶೇಷಾಮ್ನಾಯ ಎಂಬುದರಿಂದ ಅಧಿಕೃತತ್ವವನ್ನೂ ಹೇಳಿದ್ದಾರೆ.

ಅಥವಾ ಅನುವ್ಯಾಖ್ಯಾನದಲ್ಲಿ 'ತಮೇವ ಶಾಸ್ತ್ರ ಪ್ರಭವಂ' ಎಂಬ ಪದ್ಯದಲ್ಲಿ ವ್ಯಾಸರಿಗೆ ನಾರಾಯಣನ ಐಕ್ಯವು ಹೇಳಲ್ಪಟ್ಟಿದೆ. ಪ್ರಾದುರ್ಭೂತೋ ಎಂಬ ಪದ್ಯದಲ್ಲಾದರೂ ವ್ಯಾಸರಿಗೆ ಹರಿಯ ಐಕ್ಯ ಹೇಳಲ್ಪಟ್ಟಿದೆ. ಇದು ಹೇಗೆ? ಎಂಬ ಸಂಶಯವನ್ನು ಪರಿಹರಿಸಲು ನಾರಾಯಣನೇ ಹರಿ ಎಂದು ತಿಳಿಸಲು ಸುಧಾದಲ್ಲಿ ಶ್ರಿಯಃ ಪತ್ಯೇ ಇತ್ಯಾದಿ ನಾರಾಯಣನ ವಿಶೇಷಣಗಳನ್ನು ಹೇಳಿ ಹರಯೇ ಎಂದು ವಿಶೇಷ್ಯಪದ ಪ್ರಯೋಗ ಮಾಡಲಾಗಿದೆ.

'ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥'

ಎಷ್ಟು ವೇದಾಕ್ಷರವನ್ನು ಪಠಿಸುವರೋ ಅಷ್ಟು ಹರಿನಾಮಗಳನ್ನು ಕೀರ್ತನೆ ಮಾಡಿದಂತಾಗುವುದು. ಎಂಬ ಸ್ಮೃತಿಯನ್ನು ಸೂಚಿಸಲು ಹರಿಶಬ್ದ ಪ್ರಯೋಗ ಎಂದೂ ಕೆಲವರು ಹೇಳುತ್ತಾರೆ.

'ತಮೇವ ಶಾಸ್ತ್ರ ಪ್ರಭವಂ' ಎಂಬಲ್ಲಿ ನಾರಾಯಣನನ್ನು ಶಾಸ್ತ್ರಕರ್ತ ಎನ್ನಲಾಗಿದೆ. ಅದನ್ನು ಉಪಪಾದಿಸಲು ಇಲ್ಲಿ ಹರಯೇ ಎಂದಿದ್ದಾರೆ. ನಾರಾಯಣನೇ ಹರಿ. ಹರಿಯೇ ವ್ಯಾಸರು. ಆದ್ದರಿಂದ ನಾರಾಯಣನು ಶಾಸ್ತ್ರಕರ್ತ ಎಂದು ಅಭಿಪ್ರಾಯ.

ಮೂಲದಲ್ಲಿ ಸುವಾಕ್ಯೈಃ ಆಪ್ಯತಮಂ ಎಂಬುದು ಮೊದಲೇ ಇದೆ. ಅನಂತರ ಅಸ್ಮೋದ್ಭವವಾದಿದಂ ಎಂಬುದು. ಆದರೆ ಇಲ್ಲಿ ಅಸ್ಯೋದ್ಭಭವವಾದಿದಂ ಎಂಬುದನ್ನು ವಿವರಿಸುವ ಜಗಜ್ಜನ್ಮ ಇತ್ಯಾದಿ ವಿಶೇಷಣವು ಮೊದಲು ಬಂದು ಅನಂತರ ಸುವಾಕ್ಯೈಃ ಎಂಬುದನ್ನು ವಿವರಿಸುವ ಅಶೇಷಾಮ್ನಾಯ ಎಂಬುದು ಬಂದಿದೆ. ಭಗವಂತನಿಗೆ ಹೇಳಲ್ಪಟ್ಟ ಎಲ್ಲ ವಿಶೇಷಣಗಳೂ ಆಮ್ನಾಯ ಸ್ಮೃತಿ ಪ್ರಮಾಣ ಸಿದ್ಧ ಎಂಬ ಅಂಶವನ್ನು ಸೂಚಿಸಲು ಈ ವ್ಯತ್ಯಾಸವನ್ನು ಮಾಡಲಾಗಿದೆ.

.'ನಿತ್ಯಾಗಣಿತ' ಇತ್ಯಾದಿ ವಿಶೇಷಣದಿಂದ ಗುಣಪೂರ್ಣತ್ವವೆಂಬ ಮೊದಲನೆಯ ಅಧ್ಯಾಯಾರ್ಥವನ್ನು, '...ಉಪಹತಸಕಲಾವದ್ಯತಮಸೇ' ಎಂಬುದರಿಂದ ನಿರ್ದೋಷತ್ವವೆಂಬ ಎರಡನೆಯ ಅಧ್ಯಾಯದ ಅರ್ಥವನ್ನು ಅಶೇಷಾಮ್ನಾಯ ಇತ್ಯಾದಿ ವಿಶೇಷಣದಿಂದ ಮೂರನೆಯ ಅಧ್ಯಾಯದ ಜ್ಞೇಯತ್ವರೂಪ ಅರ್ಥವನ್ನು ಹಾಗೂ ಹರಯೇ ಎಂಬುದರಿಂದ ಮುಕ್ತಿ ಎಂಬ ನಾಲ್ಕನೆಯ ಅಧ್ಯಾಯದ ಅರ್ಥವನ್ನೂ ಸಂಗ್ರಹಿಸಿದಂತಾಯಿತು.

'ಅಶೇಷಾಮ್ನಾಯಸ್ಮತಿ' ಎಂಬಲ್ಲಿ 'ಅಲ್ಪಾಚ್‌ತರಂ ಪೂರ್ವಂ' ಎಂಬ ಸೂತ್ರದಂತೆ ಅಲ್ಪ ಅಕ್ಷರಗಳಿಂದ ಕೂಡಿದ ಸ್ಮೃತಿ ಶಬ್ದವೇ ಮೊದಲು ಬಂದು ಅನಂತರ ಆಮ್ನಾಯ ಶಬ್ದ ಬರಬೇಕಾಗಿತ್ತು. ಆದರೆ 'ನಾಸಿಕಾಸ್ತನಯೋಃ ಧ್ಮಾಧೇಟೋಃ' ಎಂಬಲ್ಲಿ ಅಲ್ಪಾಕ್ಷರಗಳ ಸ್ತನ ಶಬ್ದವನ್ನು ಅನಂತರ ಪ್ರಯೋಗಿಸಿದ್ದರಿಂದ ಅಲ್ಪಾಚ್‌ತರಂ ಪೂರ್ವಂ ಎಂಬ ನಿಯಮವು ಪ್ರಾಯಿಕ (ಕೆಲವು ಕಡೆ ಸಾಪವಾದ) ಎಂದು ತಿಳಿಯುತ್ತದೆ. ಅಥವಾ ಆಮ್ನಾಯಕ್ಕೆ ಪ್ರಾಧಾನ್ಯವಿರುವುದರಿಂದ 'ಅಭ್ಯರ್ಹಿತಂ ಪೂರ್ವಂ' ಎಂಬ ನಿಯಮಾನುಸಾರವಾಗಿ ಆಮ್ನಾಯ ಪದವನ್ನು ಮೊದಲು ಪ್ರಯೋಗಿಸಿದ್ದಾರೆಂದು ಭಾವಿಸಬೇಕು.

**ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ**
**ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಮ್ ।**

**ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾ ಕಾರಿ ಸನ್ಮಾರ್ಗಗಃ**
**ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್॥**

ಈ ಪದ್ಯದಲ್ಲಿ 'ವ್ಯಸ್ತಾರಿ ಗೋಸಂತತಿಃ ಎಂಬಲ್ಲಿ ಗೋಸಂತತಿ ಎಂದರೆ ಭಾರತ, ಪುರಾಣ, ಬ್ರಹ್ಮಸೂತ್ರಾದಿ ಗ್ರಂಥ ಸಮೂಹ ಮತ್ತು ಕಿರಣ ಸಮೂಹ ಎಂದು ಅರ್ಥ. 'ಪ್ರಾಬೋಧಿ ಶ್ರುತಿಪಂಕಜಂ' ಎಂಬಲ್ಲಿ ಪ್ರಾಬೋಧಿ ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಶಾಸ್ತ್ರಪ್ರಭವಂ ಎಂಬುದನ್ನು ವಿವರಿಸಿದಂತಾಯಿತು. ಶಾಸ್ತ್ರಪ್ರಭವತ್ವ ಎಂದರೆ ವೇದವ್ಯಂಜಕತ್ವ ಎಂದರ್ಥ. ಗೋಸಂತತಿಃ ಎಂಬಲ್ಲಿ ಗೋಪದವನ್ನೂ ಶ್ರುತಿ ಪಂಕಜಂ ಎಂಬಲ್ಲಿ ಶ್ರುತಿ ಪದವನ್ನೂ ಪ್ರಯೋಗಿಸಿದ್ದರಿಂದ ಮೂಲದಲ್ಲಿ ಶಾಸ್ತ್ರ ಪ್ರಭವಂ ಎಂಬಲ್ಲಿ ಶಾಸ್ತ್ರ ಪದದಿಂದ ಪೌರುಷೇಯ ಮತ್ತು ಅಪೌರುಷೇಯ ಎರಡನ್ನೂ ಇಟ್ಟುಕೊಳ್ಳಬೇಕೆಂದು ಸೂಚಿಸಿದಂತಾಯಿತು.

**ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ**
**ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನ ವೈ ಬಾಧಿತೇ ।**
**ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂಶುದ್ಧಂ ಪ್ರಮಾಣಂ ಸ ಮೇ**
**ಭೂಯಾತ್ ತತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ ॥**

ಈ ಶ್ಲೋಕದಲ್ಲಿ ಶ್ರೀಮಜ್ಜಯತೀರ್ಥರು ಶ್ರೀಮದಾಚಾರ್ಯರನ್ನು ಅನುಮಾನ ಪ್ರಮಾಣ ಎಂದು ವರ್ಣಿಸಿದ್ದಾರೆ. ಹೇಗೆಂದರೆ -. ಅನುಮಾನ ಪ್ರಮಾಣಕ್ಕೆ ಪಕ್ಷವೃತ್ತಿತ್ವ, ಸಪಕ್ಷೇ ಸತ್ತ್ವ, ವಿಪಕ್ಷಾತ್ ವ್ಯಾವೃತ್ತತ್ವ, ಅಬಾಧಿತ ವಿಷಯತ್ವ, ಅಸತ್ಪ್ರತಿಪಕ್ಷತ್ವ ಎಂದು ಐದು ಅಂಗಗಳು ಇರಬೇಕು. ಶ್ರೀಮದಾಚಾರ್ಯರಲ್ಲಿ ಈ ಐದು ಅಂಗಗಳು ಇವೆ

೧) ಪಕ್ಷ ಎಂದರೆ ಸಾಧ್ಯ ಸಂದೇಹಾಸ್ಪದವಾದದ್ದು. ಶ್ರೀಮದಾಚಾರ್ಯರ ಭಕ್ತವರ್ಗವು 'ಯಾವುದು ತತ್ತ್ವಜ್ಞಾನ' ಎಂದು ಸಂದೇಹಕ್ಕೆ ಒಳಗಾದಾಗ ಆಚಾರ್ಯರು ಅವತರಿಸಿದ್ದರಿಂದ ಇಲ್ಲಿ ಭಕ್ತವರ್ಗವು ಪಕ್ಷ ಎನಿಸಿದೆ. ಅವರಲ್ಲಿ ಎಲ್ಲರಲ್ಲಿಯೂ ತಮ್ಮ ಪ್ರಭಾವದ ಮೂಲಕ ಅಥವಾ ಸ್ವರೂಪದ ಮೂಲಕ ಆಚಾರ್ಯರು ಸನ್ನಿಹಿತರಾಗಿದ್ದಾರೆ. ಆದ್ದರಿಂದ ಪಕ್ಷವೃತ್ತಿತ್ವವು ಬಂದಿತು.

೨) ಸಪಕ್ಷ ಎಂದರೆ ಸಾಧ್ಯ ನಿಶ್ಚಯ ಉಳ್ಳದ್ದು. ಭಗವಂತನಿಗೆ ತತ್ತ್ವ ನಿರ್ಣಯ ವಿರುವುದರಿಂದ ಸಪಕ್ಷ ಎನಿಸಿದ್ದಾನೆ. ಅಲ್ಲಿ ಆಚಾರ್ಯರಿಗೆ ನಿಷ್ಠೆ ಇದೆ. ಆದ್ದರಿಂದ ಸಪಕ್ಷೇ ಸ್ಥಿತಿಯೂ ಬಂದಿತು.

ಇಲ್ಲಿ ಸಪಕ್ಷದಲ್ಲಿ ಸ್ಥಿತಿ ಮಾತ್ರ ವಿವಕ್ಷಿತ. ಏಕೆಂದರೆ ಆಚಾರ್ಯರಿಗೂ ಭಗವಂತನ ವಿಷಯದಲ್ಲಿ ಪೂರ್ಣಜ್ಞಾನವಿರುವುದಿಲ್ಲ.

೩) ವಿಪಕ್ಷ ಎಂದರೆ ಸಾಧ್ಯರಹಿತವಾದದ್ದು. ತತ್ತ್ವನಿರ್ಣಯ ಹೀನರಾದ ಅಯೋಗ್ಯ ಜನರೇ ವಿಪಕ್ಷ ಎನಿಸಿದ್ದಾರೆ. ಅವರ ಕಡೆಗೆ ಆಚಾರ್ಯರು ಪ್ರವೃತ್ತಿಯನ್ನೇ ಮಾಡುವುದಿಲ್ಲ. ಆದ್ದರಿಂದ ವಿಪಕ್ಷಾತ್ ವ್ಯಾವೃತ್ತಿಯೂ ಬಂದಿತು.

೪) ಆಬಾಧಿತ ವಿಷಯತ್ವ - ಅಂದರೆ ಬಾಧಿತ ವಿಷಯದಲ್ಲಿ ಪ್ರವೃತ್ತಿ ಮಾಡದೇ ಇರುವಿಕೆ. ಶ್ರೀಮದಾಚಾರ್ಯರು ನಿಷಿದ್ಧ ವಿಷಯದಲ್ಲಿ ಸರ್ವಥಾ ಪ್ರವೃತ್ತಿ ಮಾಡುವವರಲ್ಲ. ಅಥವಾ ಋಜುಗಳಾದ್ದರಿಂದ ಭ್ರಾಂತಿ ರಹಿತರಾಗಿ ದ್ದಾರೆ ಎಂದರ್ಥ.

೫) ಅಸತ್ಪ್ರತಿಪಕ್ಷತ್ವ ಎಂದರೆ ಪ್ರತಿಪಕ್ಷಯುಕ್ತಿ ಇಲ್ಲದಿರುವಿಕೆ. ಶ್ರೀಮದಾಚಾರ್ಯರಲ್ಲಿಯೂ ಪ್ರತಿಪಕ್ಷ ಯುಕ್ತಿ ಅಂದರೆ ಪ್ರತಿಭಟರ ಯೋಗಃ ಸಂಬಂಧ ಇಲ್ಲವೇ ಇಲ್ಲ. ಹೀಗೆ ಪಂಚಾಂಗ ಯುಕ್ತರಾದ್ದರಿಂದ ಶ್ರೀಮದಾಚಾರ್ಯರೇ ನಿರ್ದುಷ್ಟ ಪ್ರಮಾಣಭೂತರಾಗಿದ್ದಾರೆಂದು ಅಭಿಪ್ರಾಯ.

**ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।**
**ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥**

ಚಂಚರೀಕತಿ ಮೇ ಮನಃ - ಇಲ್ಲಿ ಚಂಚರೀಕತಿ ಎಂದರೆ ಭ್ರಮರದಂತೆ ವರ್ತಿಸುತ್ತದೆ ಎಂದರ್ಥ. 'ಇಂದಿಂದಿರ ಭ್ರಮರ ಷಟ್ಪದ ಚಂಚರೀಕಾಃ' ಎಂದು ಶಬ್ದರತ್ನಾಕರದಲ್ಲಿದೆ. ಇಂದಿಂದರಶ್ಚಂಚರೀಕಃ ಎಂಬ ಅಮರ ಕೋಶ ಪಾಠವು ಪ್ರಕ್ಷಿಪ್ತವಾಗಿದೆ. ಅನೇಕ ಕೋಶಗಳಲ್ಲಿ ಕಂಡು ಬರುವುದಿಲ್ಲ ಮತ್ತು ವ್ಯಾಖ್ಯಾನಕಾರರು ಅದನ್ನು ವ್ಯಾಖ್ಯಾನಿಸಿಲ್ಲ. ಆದ್ದರಿಂದ ಅದನ್ನು ಆಧಾರವಾಗಿ ಕೊಡುವುದು ಸರಿಯಲ್ಲ.

## ನ ಶಬ್ದಾಬ್ಧೌ ಗಾಢಾ ಇತ್ಯಾದಿಗಳು ವಿನಯೋಕ್ತಿಗಳು

ಜಯತೀರ್ಥರು ನ್ಯಾಯಸುಧಾ ಗ್ರಂಥದ ಆದಿಯಲ್ಲಿ ನ ಶಬ್ದಾಬ್ಧೌ ಎಂಬ ಶ್ಲೋಕದಿಂದ ನಾವು ಶಬ್ದ ಶಾಸ್ತ್ರ (ವ್ಯಾಕರಣದಲ್ಲಿ) ಪ್ರವೀಣರಲ್ಲ. ವೇದ ವಿಚಾರ (ಮೀಮಾಂಸೆಯಲ್ಲಿ) ದಲ್ಲಿ ಬಹಳ ಚತುರರಲ್ಲ. ಆದರೂ ಆಚಾರ್ಯರ ಕರುಣಾಬಲವನ್ನಾಶ್ರಯಿಸಿರುವುದರಿಂದ ತಪ್ಪನ್ನೋ ಒಪ್ಪನ್ನೋ ಹೇಳಿದರೂ ಮಾನ್ಯರಾಗಿದ್ದೇವೆ ಎಂದು ಹೇಳಿದ್ದಾರೆ.

ವಾಸ್ತವಿಕವಾಗಿ ಇದು ಕೇವಲ ಸ್ವಾಹಂಕಾರ ಖಂಡನೆಗಾಡಿದ ವಿನಯದ ಮಾತಷ್ಟೇ ಹೊರತು, ವಾಸ್ತವಿಕವಾಗಿ ತಪ್ಪನ್ನು ಹೇಳಿದ್ದಾರೆಂದಲ್ಲ.

ವಸ್ತುತಃ ನಮ್ಮಲ್ಲಿ ಗುರುಗಳ ಕರುಣೆಯಿಂದ ಪ್ರಾಪ್ತವಾದ ಸಕಲ ಶಾಸ್ತ್ರ ಪಾಂಡಿತ್ಯ ಮೊದಲಾದ ಅನೇಕ ಧರ್ಮಗಳಿರುವುದರಿಂದಲೇ ಈ ವ್ಯಾಖ್ಯಾನ ಮಾಡುತ್ತಿದ್ದೇವೆ ಎಂಬ ಅಭಿಪ್ರಾಯದಿಂದ ಹೀಗೆ ಗಾಢಾಃ ಇತ್ಯಾದಿ ರೀತಿಯಿಂದ ಬಹುವಚನ ಪ್ರಯೋಗವನ್ನು ಜಯತೀರ್ಥರು ಮಾಡಿದ್ದಾರೆ.

ಅಥವಾ ಅಸ್ಮದೋ ದ್ವಯೋಶ್ಚ (ಏಕತ್ವ ಅಥವಾ ದ್ವಿತ್ವವು ವಿವಕ್ಷಿತವಾದಾಗ ಅಸ್ಮತ್ ಶಬ್ದಕ್ಕೆ ಬಹುವಚನವು ವಿಕಲ್ಪವಾಗಿ ಬರುತ್ತದೆ) ಎಂಬ ಸೂತ್ರದ ಪ್ರಕಾರ ಅಹಂ (ನಾನು) ಎಂಬರ್ಥದಲ್ಲಿಯೇ ವಯಂ (ನಾವು) ಎಂದು ಬಹುವಚನವನ್ನು ಜಯತೀರ್ಥರು ಉಪಯೋಗಿಸಿದ್ದಾರೆ. ಯದ್ಯಪಿ ಸವಿಶೇಷಣಸ್ಯ ಪ್ರತಿಷೇಧಃ (ವಿಶೇಷಣ ವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನ ಬರುವುದಿಲ್ಲ) ಎಂದು ಪ್ರಪನ್ನಾಃ ಇತ್ಯಾದಿ ವಿಶೇಷಣ ವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನ ಪ್ರಾಪ್ತಿಯಾಗುವ ಸಂಭವವಿಲ್ಲ, ಆದರೂ ಗಾಢಾಃ ಇತ್ಯಾದಿಗಳಿಂದ ಹೇಳಲ್ಪಟ್ಟ ಗಾಢತ್ವಾದಿಗಳು ಇಲ್ಲ ಎಂದು ಹೇಳಲ್ಪಡುವುದರಿಂದ ಅವುಗಳು ನಿಷೇಧ ಪ್ರತಿಯೋಗಿಗಳಾಗಿವೆ. ವಿಶೇಷಣಗಳಾಗಿಲ್ಲ ಹಾಗೂ ಗುರುಕಾರುಣ್ಯ ಸರಣಿಂ ಪ್ರಪನ್ನಾಃ ಎಂದು ಹೇಳಲ್ಪಟ್ಟ ಪ್ರಪನ್ನತ್ವವೂ ಮಾನ್ಯತ್ವೋಪಪಾದಕವಾಗಿದ್ದರಿಂದ ವಿಶೇಷಣ ವಾಗುವುದಿಲ್ಲ. ಹಾಗೂ ಮಾನ್ಯಾಃ ಎಂದು ಹೇಳಲ್ಪಟ್ಟ ಮಾನ್ಯತ್ವವೂ ವಿಧೇಯವಾಗಿದ್ದರಿಂದ ವಿಶೇಷಣವಾಗಿಲ್ಲ. ಹೀಗೆ ಇಲ್ಲಿ ಅಸ್ಮತ್ ಶಬ್ದವು ವಿಶೇಷಣ ವಿಶಿಷ್ಟವಾಗಿಲ್ಲವಾದ್ದರಿಂದ ಬಹುವಚನ ಬರಬಹುದು

ಆದ್ದರಿಂದ ವಯಂ ಎಂದು ಜಯತೀರ್ಥರು ಪ್ರಯೋಗ ಮಾಡಿದ್ದು ಸರಿಯಾಗಿದೆ.

**ಅಸ್ಯೋದ್ಭವಾದಿದಂ ಎಂಬ ಶ್ಲೋಕದ ವಿಚಾರಗಳು**

ಉದ್ಭವಾದಿದಂ ಎಂದು ಪ್ರಪಂಚಕ್ಕೆ ಉತ್ಪತ್ತಿ ಮೊದಲಾದವುಗಳನ್ನು ಕೊಡುವ ಭಗವಂತನನ್ನು ಆಚಾರ್ಯರು ನಮಸ್ಕರಿಸಿದ್ದಾರೆ. ಆದರೆ ಉತ್ಪತ್ತಿ, ಸ್ಥಿತಿ, ಸಂಹಾರ ಮೊದಲಾದವುಗಳಲ್ಲಿ ಉತ್ಪತ್ತಿಯನ್ನು ಮೊದಲು ಹೇಳಿದ್ದು ಯಾಕೆ? 'ಗುಣವ್ಯತ್ಯಯ ಏತಸ್ಮಿನ್ ಮಾಯಾವತ್ವಾದಧೀಶಿತುಃ। ನ ಪೌರ್ವಾಪ ರ್ಯ ಮಿಚ್ಛಂತಿ ನದ್ಯಾಂ ಭ್ರಾಮ್ಯದ್ ಭ್ರಮೇರ್ಯಥಾ ॥' (ತನ್ನ ಇಚ್ಛೆಯಂತೆಯೇ ಪ್ರವರ್ತಿಸುವ ಭಗವಂತನ ಈ ಗುಣಸಂಬಂಧ ರೂಪ ಸೃಷ್ಟಿ ಮೊದಲಾದ ವ್ಯಾಪಾರಗಳಲ್ಲಿ ಇದು ಮೊದಲು ಇದು ಅನಂತರ ಎಂದು ಪೌರ್ವಾಪರ್ಯವನ್ನು ಜ್ಞಾನಿಗಳು ಕಾಣುವುದಿಲ್ಲ. ನದಿಯಲ್ಲಿ ಬರುತ್ತಿರುವ ಅನೇಕ ಅಲೆಗಳಲ್ಲಿ ಯಾವುದು ಮೊದಲು ಯಾವುದು ಅನಂತರ ಎಂದು ನಿರ್ಣಯಿಸಲಾಗುವುದಿಲ್ಲ. ಹಾಗೆಯೇ ಈ ಪರಮಾತ್ಮನ ವ್ಯಾಪಾರಗಳೂ) ಎಂಬ ಭಾಗವತ ಶ್ಲೋಕದಿಂದ (ಭಾ. ೩-೧೧-೩೦) ಪರಮಾತ್ಮನ ವ್ಯಾಪಾರಗಳಲ್ಲಿ ಪೌರ್ವಾಪರ್ಯವಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಉದ್ಭವಾದಿದಂ ಎಂಬುದು ಹೇಗೆ ಸರಿ? ಎಂಬ ಪ್ರಶ್ನೆಗೆ ಸಮಾಧಾನ ಹೀಗಿದೆ.

ಪರಮಾತ್ಮನ ವ್ಯಾಪಾರಗಳಲ್ಲಿ ಪೌರ್ವಾಪರ್ಯವಿಲ್ಲವಾದ್ದರಿಂದ ಅದನ್ನು ಇಟ್ಟುಕೊಂಡು ಇಲ್ಲಿ ಉದ್ಭವಾದಿದಂ ಎಂದು ಹೇಳಿಲ್ಲ. ಆದರೆ ಜೀವಾದಿ ಸಕಲ ಜಗತ್ತಿಗೆ ಸ್ಥಿತಿ ಬರಬೇಕಾದರೆ, ಅನಂತರ ಪ್ರಲಯ ಬರಬೇಕಾದರೂ ಮೊದಲಿಗೆ ಸೃಷ್ಟಿ ಬೇಕು. ಸೃಷ್ಟಿಯೇ ಇಲ್ಲದಿದ್ದರೆ ಸ್ಥಿತಿ ಲಯಗಳೂ ಸಾಧ್ಯವಿಲ್ಲ. ಆದ್ದರಿಂದ ಸೃಷ್ಟಿಯನ್ನು ಮೊದಲು ಪರಿಗಣಿಸಿ ಉದ್ಭವಾದಿದಂ ಎಂದು ಆಚಾರ್ಯರು ಹೇಳಿದ್ದಾರೆ.

ಯಥಾಸಂಭವಂ ಜನ್ಮಾದ್ಯಷ್ಟಕಂ ದದಾತಿ (ಈ ಪ್ರಪಂಚಕ್ಕೆ ಯಥಾ ಯೋಗ್ಯವಾಗಿ ಸೃಷ್ಟ್ಯಾದಿಗಳನ್ನು ಕೊಡುವವನು ಪರಮಾತ್ಮ) ಎಂದು ಜಯತೀರ್ಥರು ಉದ್ಭವಾದಿದಂ ಎಂಬುದನ್ನು ವ್ಯಾಖ್ಯಾನಿಸಿದ್ದಾರೆ. ಇದರ ಅಭಿಪ್ರಾಯ ಹೀಗೆ - ಸ್ಥಾವರಜಂಗಮಾತ್ಮಕಸಕಲಪ್ರಪಂಚಕ್ಕೂ ಸಾಧಾರಣ

ವಾದ ಸೃಷ್ಟಿ-ಸ್ಥಿತಿ-ಲಯ-ನಿಯಮನ ಎಂಬ ನಾಲ್ಕು ಧರ್ಮಗಳನ್ನು ಪರಮಾತ್ಮನು ಕೊಡುತ್ತಾನೆ. ಇನ್ನು ಬ್ರಹ್ಮನೇ ಮೊದಲಾದ ಚೇತನರಿಗೆ ಮಾತ್ರ ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಗಳನ್ನು ಕೊಡುತ್ತಾನೆ. ಇವುಗಳು ಜಡಗಳಿಗೆ ಬರಲು ಸಾಧ್ಯವಿಲ್ಲ ಆದ್ದರಿಂದ ಅವುಗಳನ್ನು ಜಡಗಳಿಗೆ ಕೊಡುವುದಿಲ್ಲ. ಅದರಲ್ಲೂ ಮೋಕ್ಷವನ್ನು ಸಜ್ಜನರಿಗೆ ಮಾತ್ರ ಕೊಡುತ್ತಾನೆ. ದುರ್ಜನರಿಗೆ ಕೊಡುವುದಿಲ್ಲ. ಹೀಗೆ ಆಯಾ ವ್ಯಕ್ತಿಗೆ (ವಸ್ತುವಿಗೆ) ಯೋಗ್ಯವಾದ ಧರ್ಮಗಳನ್ನು ಮಾತ್ರ ಅವುಗಳಿಗೆ ಕೊಡುತ್ತಾನೆ. ಹೊರತು ಎಲ್ಲ ಸ್ಥಾವರ ಜಂಗಮ ಚೇತನಾಚೇತನರಿಗೆ ಸಮಾನವಾಗಿ ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ- ಅಜ್ಞಾನ-ಬಂಧ- ಮೋಕ್ಷಗಳನ್ನು ಕೊಡುತ್ತಾನೆಂದು ಅರ್ಥವಲ್ಲ.

ಈ ಜಗತ್ತಿಗೆ ಸ್ಥಿತ್ಯಾದಿಗಳನ್ನು ಕೊಡುತ್ತಾನೆ ಎಂಬರ್ಥದಲ್ಲಿ ಅಸ್ಮೈ ಉದ್ಭವಾದಿದಂ ಎಂದು ಸಂಪ್ರದಾನಾರ್ಥದಲ್ಲಿ ಚತುರ್ಥೀ ಬರಬೇಕಾಗಿತ್ತು. ಅಸ್ಯ ಉದ್ಭವಾದಿದಂ ಎಂಬ ಷಷ್ಠೀ ಹೇಗೆ? ಎಂಬ ಪ್ರಶ್ನೆಗೆ ಸುಧಾದಲ್ಲಿ 'ಸಂಬಂಧಮಾತ್ರೇ ಷಷ್ಠೀ' ಎಂದು ಸಮಾಧಾನ ಹೇಳಲಾಗಿದೆ.ಅದರ ಅಭಿಪ್ರಾಯ ಹೀಗಿದೆ -

ಈ ವಸ್ತು ಇನ್ನು ಮುಂದೆ ನಮ್ಮದಲ್ಲ. ದಾನ ತೆಗೆದುಕೊಂಡವರದು ಎಂದು ಅನುಸಂಧಾನ ಮಾಡಿಕೊಂಡು ಯಾರಿಗೆ ಯಾವುದಾದರೂ ವಸ್ತುವನ್ನು ದಾನ ಕೊಡುತ್ತೇವೋ ಆ ದಾನ ತೆಗೆದುಕೊಳ್ಳುವವನು ಸಂಪ್ರದಾನನೆನಿಸುತ್ತಾನೆ. ಇಲ್ಲಿ ಸಂಪ್ರದೀಯತೆ ಅಸ್ಮೈ ಎಂಬ ವ್ಯುತ್ಪತ್ತಿಯಿಂದ ದಾನ ತೆಗೆದುಕೊಳ್ಳುವವನಲ್ಲಿ ಈ ಸಂಪ್ರದಾನ ಸಂಜ್ಞೆಯು ಅನ್ವರ್ಥ ಕವಾಗಿದೆ ಹೊರತು ನದೀ, ಟಿ, ಘು ಮೊದಲಾದ ಸಂಜ್ಞೆಗಳಂತೆ ಸುಮ್ಮನೆ ಸಾಂಕೇತಿಕವಲ್ಲ. ಇಂಥ ಸಂಪ್ರದಾನತ್ವದ ವಿವಕ್ಷೆ ಇದ್ದಾಗ ಮಾತ್ರ ಬ್ರಾಹ್ಮಣಾಯ ಗಾಂ ದದಾತಿ (ಬ್ರಾಹ್ಮಣನಿಗಾಗಿ ಆಕಳನ್ನು ದಾನ ಕೊಡುತ್ತಾನೆ) ಮುಂತಾದವುಗಳಲ್ಲಿ ಚತುರ್ಥೀ ಬರುತ್ತದೆ. ಆದರೆ ಈ ಪ್ರಪಂಚದ ವಿಷಯದಲ್ಲಿ ಸಂಪ್ರದಾನತ್ವವು ವಿವಕ್ಷಿತವಾಗಿಲ್ಲ. ಏಕೆಂದರೆ

ಪರಮಾತ್ಮನು ಈ ಜಗತ್ತಿಗೆ ಕೊಡುವ ಉತ್ಪತ್ತ್ಯಾದಿಗಳು ಕೊಟ್ಟ ಮೇಲೂ ಪರಮಾತ್ಮನ ಅಧೀನವೇ ಆಗಿರುತ್ತವೆ. ಆದ್ದರಿಂದ ಇನ್ನು ಮುಂದೆ ಈ ವಸ್ತು ತನ್ನದಲ್ಲ ಎಂಬ ಅನುಸಂಧಾನವು ಪರಮಾತ್ಮನಿಗಿಲ್ಲದಿರುವುದರಿಂದ ಜಗತ್ತು ಸಂಪ್ರದಾನವಾಗುವುದಿಲ್ಲ. ಆದ್ದರಿಂದ ಇಲ್ಲಿ ಸಂಪ್ರದಾನಾರ್ಥದಲ್ಲಿ ಚತುರ್ಥೀ ಬರದೇ ಅಸ್ಯ ಉದ್ಭವಾದಿದಂ ಎಂದು ಷಷ್ಠೀ ಬಂದಿದೆ.

**ಅವಾಂತರ ಭೇದ ಸಹಿತ ಉತ್ಪತ್ತ್ಯಾದಿಕರ್ತಾ ಪರಮಾತ್ಮಾ**

ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ ಎಂಬ ಅನುವ್ಯಾಖ್ಯಾನದ ಅಶೇಷ ವಿಶೇಷತೋಽಪಿ ಎಂಬ ಪದಕ್ಕೆ ಅಸ್ಯೋದ್ಭವಾದಿದಂ ಎಂಬುದರ ಜೊತೆಗೂ ಸಂಬಂಧವಿದೆ. ಆದ್ದರಿಂದ ಪ್ರಪಂಚಕ್ಕೆ ಅವಾಂತರ ಭೇದ ಸಹಿತವಾದ ಉತ್ಪತ್ತ್ಯಾದಿಗಳನ್ನು ಪರಮಾತ್ಮನು ಕೊಡುತ್ತಾನೆ ಎಂದು ಅರ್ಥವಾಗುತ್ತದೆ. ಅದರ ವಿವರಣೆ ಹೀಗಿದೆ.

ನಿತ್ಯವಾದ ಪ್ರಕೃತಿಗೆ ಪರಿಣಾಮವನ್ನು ಹಾಗೂ ಪ್ರಕೃತ್ಯಭಿಮಾನಿ ಲಕ್ಷ್ಮೀದೇವಿಗೆ ಸಿಸೃಕ್ಷುತ್ವವನ್ನು (ಸೃಷ್ಟೀಚ್ಛೆಯನ್ನು) ಕೊಡುವುದರಿಂದ ಪರಮಾತ್ಮನು ಅವುಗಳಿಗೆ ಸೃಷ್ಟಿಕರ್ತನಾಗಿದ್ದಾನೆ. ಗಗನ(ಅವ್ಯಾಕೃತಾಕಾಶ) ಕ್ಕೆ ಮೂರ್ತಸಂಬಂಧ ರೂಪವಾದ ಉತ್ಪತ್ತಿಯಿದೆ. ಮಾತರಿಶ್ವಾ (ವಾಯು) ಮುಂತಾದ ಜೀವರಿಗೆ ಪ್ರಕೃತಿ ನಿರ್ಮಿತ ದೇಹ ಸಂಬಂಧವೇ ಉತ್ಪತ್ತಿ. ಅನಾದಿಯಾದ ಇಂದ್ರಿಯಗಳಿಗೂ ಪಂಚಭೂತಾಂಶಗಳ ಸಂಬಂಧದಿಂದ ಉಪಚಯವಾಗುತ್ತದೆ. ಅದೇ ಅವುಗಳ ಉತ್ಪತ್ತಿ. ಹೀಗೆ ಅನೇಕ ಪದಾರ್ಥಗಳಿಗೆ ಅನೇಕ ರೀತಿಯ ಉತ್ಪತ್ತಿಯನ್ನು ಭಗವಂತನು ಕೊಡುತ್ತಾನೆ. ಮತ್ತು ಜೀವರಿಗೆ ಅನ್ನಾದಿಗಳನ್ನು ಕೊಡುವ ಮೂಲಕ ಸ್ಥಿತಿಯನ್ನು, ಇತರ ನಿತ್ಯ ಪದಾರ್ಥಗಳಿಗೆ ಉತ್ತರ ಕಾಲ ಸಂಬಂಧ ರೂಪ ಸ್ಥಿತಿಯನ್ನೂ ವಿಷ್ಣುವು ಕೊಡುತ್ತಾನೆ. ಹೀಗೆ ಅನೇಕ ರೀತಿಯ ಸ್ಥಿತಿ ಕರ್ತಾ ವಿಷ್ಣುವೇ.

ಇನ್ನು ಜಡವಾದ ಕಾರ್ಯಕ್ಕೆ ಧ್ವಂಸ (ನಾಶ) ವೆಂಬ ಲಯವನ್ನೂ, ಇತರ ಜೀವ ಮುಂತಾದವರಿಗೆ ದೇಹ ನಾಶರೂಪವಾದ ಲಯವನ್ನೂ, ಲಕ್ಷ್ಮೀದೇವಿಗೆ ಅತ್ಯಂತ ಸಾಮೀಪ್ಯರೂಪವಾದ ಲಯವನ್ನೂ ಕೊಡುತ್ತಾನೆ.

ಆದ್ದರಿಂದ ಅನೇಕ ರೀತಿಯ ಲಯವನ್ನು ಕೊಡುವವನೂ ಅವನೇ. ಹೀಗೆ ಅನೇಕ ರೀತಿಯ ವಿಶೇಷಗಳಿಂದ ಕೂಡಿದ ಸೃಷ್ಟಿ ಸ್ಥಿತಿ ಲಯಗಳನ್ನು ಕೊಡುತ್ತಾನಾದ್ದರಿಂದ ಅಶೇಷ ವಿಶೇಷತೋಽಪಿ ಅಸ್ಮೋದ್ಭವಾದಿದಂ ಎಂದೂ ಅನ್ವಯ ತೋರಿಸಲಾಗಿದೆ.

**ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಎಂಬುದರ ವಿವರಣೆ**

ಇಲ್ಲಿರುವ ಅಪಿ ಶಬ್ದವು ಅಭಿವ್ಯಾಪ್ತಿಯೆಂಬ ಅರ್ಥದಲ್ಲಿದೆ. ಆದ್ದರಿಂದ ಇಡೀ ವೇದಗಳಲ್ಲಿ ಯಾವ ಭಾಗವೂ ಕೂಡ ಭಗವಂತನನ್ನು ಬಿಟ್ಟು ಬೇರೆ ಯಾರನ್ನೂ ಹೇಳುವುದಿಲ್ಲ. ಎಲ್ಲ ವೇದಗಳೂ ಕೇವಲ. ಭಗವಂತನನ್ನು ಹೇಳುತ್ತವೆ. ಆದ್ದರಿಂದ ವಿಷ್ಣುವು ವಂದ್ಯ ಎಂದು ಈ ವಾಕ್ಯದ ಅರ್ಥವಾಗುತ್ತದೆ. ಅಭಿವ್ಯಾಪ್ತಿಯೆಂದರೆ ಕಾರ್ತ್ಸ್ನ್ಯೇನ ಸಂಬಂಧ. (ಅವ್ಯಭಿ ಚರಿತವಾಗಿರುವ ಸಂಬಂಧ) ಅಂತಹ ಸಂಬಂಧ ವಿಷ್ಣುವಿಗಿದೆ.

ಇಲ್ಲಿ ಅಖಿಲೈಃ ಎಂಬುದನ್ನು ಕೊಡದಿದ್ದರೆ ಕೆಲವು ವೇದ ಭಾಗಗಳಿಂದ ಪ್ರತಿಪಾದ್ಯವಾದ ಧರ್ಮವೂ ವಂದನೀಯ ವಾಗಿಬೇಕಾದೀತು. ಆದ್ದರಿಂದ ಅಖಿಲೈಃ ಎಂದು ಹೇಳಿದ್ದಾರೆ. ಧರ್ಮವು ಎಲ್ಲ ವೇದಗಳಿಂದಲೂ ಪ್ರತಿಪಾದ್ಯವಾಗಿಲ್ಲವಾದ್ದರಿಂದ ವಂದನೀಯ ವಾಗುವುದಿಲ್ಲ. ಇಷ್ಟು ಹೇಳಿದರೂ ಪ್ರಾಣನೂ ಸರ್ವವೇದ ಪ್ರತಿಪಾದ್ಯನೆಂದು ''ತಾವಾ ಏತಾಃ ಶೀರ್ಷನ್'' ಎಂಬ ಶ್ರುತಿಯು ಹೇಳುತ್ತಿರುವುದರಿಂದ ಅವನೂ ಅಖಿಲವೇದಪ್ರತಿಪಾದ್ಯನಾದ್ದರಿಂದ ವಿಷ್ಣುವಿನಂತೆ ಮುಖ್ಯವಾಗಿ ವಂದ ನೀಯನಾಗಬೇಕಾದೀತು. ಆದ್ದರಿಂದ ಅಭಿವ್ಯಾಪ್ತ್ಯರ್ಥಕವಾದ ಅಪಿ ಶಬ್ದವನ್ನು ಕೊಟ್ಟಿದ್ದಾರೆ. ಪ್ರಾಣನು ಕೇವಲ ವಿಷ್ಣುಪರವಾದ ಕೆಲವು ಸೂಕ್ತಗಳು ಹಾಗೂ ಕೇವಲ ಲಕ್ಷ್ಮೀ ಪರ ಸೂಕ್ತಗಳನ್ನೂ ಬಿಟ್ಟು ಎಲ್ಲ ವೇದಗಳಿಂದ ಪ್ರತಿಪಾದ್ಯನಾದ್ದರಿಂದ ಪ್ರಾಣನಿಗೆ ಅವ್ಯಭಿಚರಿತ ಸಂಬಧವಿಲ್ಲ. ಆದ್ದರಿಂದ ವಂದನೀಯ ನಾಗುವುದಿಲ್ಲ.

ಹೀಗೆ ಅಪಿ ಶಬ್ದ ಸಹಿತವಾದ ಅಖಿಲ ಶಬ್ದವೇ ಧರ್ಮ ಪ್ರಾಣರ ವಂದನೀಯತ್ವವನ್ನು ನಿವಾರಿಸುತ್ತದೆ.

**ಸದಾ ಪ್ರಿಯತಮಂ ಮಮ ಎಂಬುದರ ವಿವರಣೆ**

ಇಲ್ಲಿಯೂ ಕೂಡ ಹಿಂದಿನಂತೇ ಸದಾ ಪದಕ್ಕೆ ಮತ್ತು ತಮಪ್ ಪ್ರತ್ಯಯಕ್ಕೆ ಪ್ರಯೋಜನವಿದೆಯೆಂದು ''ಅತ್ರಾಪಿ ಪೂರ್ವವತ್ ಸದಾ ಪದಸ್ಯ ತಮಪಶ್ಚ ಪ್ರಯೋಜನಮವಧೇಯಂ ''ಎಂದು ಸುಧಾದಲ್ಲಿ ತಿಳಿಸಿದ್ದಾರೆ.

ಇಲ್ಲಿ ಧರ್ಮಾದಿಗಳು ಮತ್ತು ಪ್ರಾಣಾದಿಗಳು ಪ್ರಿಯವೇ ಹೊರತು ಪ್ರಿಯತಮವಲ್ಲ. ಅದರಲ್ಲೂ ಧರ್ಮಾದಿಗಳು ಭಗವಂತನ ಪ್ರಾಪ್ತಿಗಾಗಿಯೇ ಪ್ರಿಯವಷ್ಟೇ ಹೊರತು ಸ್ವತಃ ಪ್ರಿಯವಲ್ಲ. ಆದ್ದರಿಂದ ಧರ್ಮ ಹಾಗೂ ಪ್ರಾಣರು ಪ್ರಿಯತಮರೇ ಅಲ್ಲವಾದ್ದರಿಂದ ವಂದನೀಯರಾಗುವುದಿಲ್ಲ. ಮತ್ತು ಅನಾದ್ಯನಂತ ಕಾಲಗಳಲ್ಲಿ ಸ್ವತಃ ಪ್ರಿಯತ್ವವೂ ಧರ್ಮಪ್ರಾಣಾದಿಗಳಿಗೆ ಬರುವುದಿಲ್ಲ. ಅದು ಕೇವಲ ಭಗವಂತನಿಗಷ್ಟೇ. ಆದ್ದರಿಂದ ಬೇರೆ ಯಾವುದೂ ವಂದನೀಯವಾಗುವುದಿಲ್ಲ. (ಉತ್ತಮಾಧಿಕಾರಿಗಳಿಗೆ ಮಾತ್ರ ಭಗವಂತ ಸದಾ ಪ್ರಿಯತಮನಾಗುತ್ತಾನೆ ಹೊರತು ಇತರ ಮಧ್ಯಮ ಅಧಮ ಅಧಿಕಾರಿಗಳಿಗಲ್ಲ. ಆದ್ದರಿಂದ ಉತ್ತಮಾಧಿಕಾರಿಗಳಾದ ತಮ್ಮ: ದೃಷ್ಟಿಯಿಂದ ಸದಾ ಪ್ರಿಯತಮಂ ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ).

**ಮಂಗಳ ಶ್ಲೋಕದ ಪದಗಳ ವಿನ್ಯಾಸ ವೈಶಿಷ್ಟ್ಯ**

ಮಂಗಳ ಶ್ಲೋಕದಲ್ಲಿ ಸದಾ ವಂದ್ಯಂ ಎಂಬುದರಿಂದ ಜಿಜ್ಞಾಸಾಧಿಕರಣದ ಅರ್ಥವನ್ನು ಆಚಾರ್ಯರು ತಿಳಿಸಿದ್ದಾರೆ. ಮನಸ್ಸು ಸದಾ ಅಲ್ಲೇ ಆಸಕ್ತವಾಗಿರುವುದೇ ವಂದನೆ. ಶ್ರವಣ ಮನನ ಧ್ಯಾನ ರೂಪ ಜಿಜ್ಞಾಸೆಯೆಂದರೂ ಸದಾ ಭಗವಂತನ ವಿಷಯದಲ್ಲಿ ಆಸಕ್ತವಾಗಿರುವುದೇ. ಹೀಗೆ ಎರಡೂ ಏಕಾರ್ಥಕ ವಾದ್ದರಿಂದ ಆ ಪದದಿಂದ ಜಿಜ್ಞಾಸಾಧಿಕರಣದ ಅರ್ಥ ತಿಳಿಯುತ್ತದೆ ಮತ್ತು ಎರಡನೆಯ ಜನ್ಮಾಧಿಕರಣದ ಅರ್ಥವಾದ ಜಗಜ್ಜನ್ಮಾದಿಕಾರಣತ್ವ ಮತ್ತು ತದುಪಲಕ್ಷಿತವಾದ ಅನಂತ ಗುಣ ಪೂರ್ಣತ್ವವೆಂಬ ವಿಷ್ಣುವಿನ ಲಕ್ಷಣವನ್ನು ನಿಖಿಲಪೂರ್ಣಗುಣೈಕದೇಹಂ ಅಸ್ಯೋದ್ಭವಾದಿದಂ ಎಂಬ ಪದಗಳಿಂದ

ತಿಳಿಸಿದ್ದಾರೆ. ನಂತರ ಮೂರನೇ ಶಾಸ್ತ್ರಯೋನಿತ್ವಾಧಿಕರಣದ ಭಗವಂತನ ಜ್ಞಾನಕ್ಕೆ ಶಾಸ್ತ್ರವೇ ಸಾಧನವೆಂಬ ಅರ್ಥವನ್ನು ಆಪ್ಯತಮಂ (ಸಕಲ ಶಾಸ್ತ್ರಗಳಿಂದ ಪ್ರಾಪ್ಯ) ಎಂಬುದರಿಂದ ತಿಳಿಸಿದ್ದಾರೆ.

**ಆಪ್ಯತಮಂ**

ಅನುವ್ಯಾಖ್ಯಾನದ ಮಂಗಳ ಶ್ಲೋಕದಿಂದ ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳ ಅರ್ಥವನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ಅದರಲ್ಲಿ ಆಪ್ಯತಮಂ ಎಂಬ ವಿಶೇಷಣವು ನಾಲ್ಕನೇ ಅಧ್ಯಾಯದ ಅರ್ಥವನ್ನು ತಿಳಿಸುತ್ತದೆ. ನಾವು ಭಗವಂತನ ಅಪರೋಕ್ಷಜ್ಞಾನ ಪಡೆದಾಗ ಭಗವಂತನ ಪ್ರಾಪ್ತಿಯಾಗುತ್ತದೆ. ಭಗವಂತನು ಸರ್ವಗತನಾದ್ದರಿಂದ ಈಗಲೂ ನಮಗೆ ಅವನ ಪ್ರಾಪ್ತಿಯಿದೆ ಆದರೆ ಈ ಭಗವಂತನ ಪ್ರಾಪ್ತಿಯು ಮೋಕ್ಷ ರೂಪವಾದದ್ದಲ್ಲ. ಶ್ವೇತದ್ವೀಪ-ವೈಕುಂಠ-ಅನಂತಾಸನಗಳಲ್ಲಿರುವ ಭಗವದ್ರೂಪದ ಪ್ರಾಪ್ತಿಯೇ ಮೋಕ್ಷ. ಈ ವಿಷಯವನ್ನು ತಿಳಿಸಲು ಆಪ್ಯತಮಂ (ವಿಶೇಷ ವಾಗಿ ಪ್ರಾಪ್ಯನಾದವನು) ಎಂಬಲ್ಲಿ ತಮಪ್ ಪ್ರತ್ಯಯವನ್ನು ಕೊಟ್ಟಿದ್ದಾರೆ.

ಹೀಗೆ ಮೊದಲ ಮೂರು ಸೂತ್ರಗಳ ಅರ್ಥಗಳನ್ನು ಹಾಗೂ ನಾಲ್ಕು ಅಧ್ಯಾಯಗಳ ಅರ್ಥವನ್ನೂ ಮಂಗಳ ಶ್ಲೋಕದಲ್ಲಿ ತಿಳಿಸಿದ್ದಾರೆ.

ಆದರೆ ಮೊದಲ ಮೂರು ಸೂತ್ರಗಳ ಅರ್ಥವನ್ನು ತಿಳಿಸುವುದು ಆಚಾರ್ಯರ ಉದ್ದೇಶ್ಯವಾಗಿದ್ದರೆ ಶ್ಲೋಕದಲ್ಲೂ ಆ ಮೂರು ಪದಗಳನ್ನು ಆ ಸೂತ್ರಗಳ ಕ್ರಮದಲ್ಲಿಯೇ ಜೋಡಿಸಬೇಕಾಗಿತ್ತು. ಆದರೆ

> ನಾರಾಯಣಂ ನಿಖಿಲ ಪೂರ್ಣ ಗುಣೈಕ ದೇಹಂ
> ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
> ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
> ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ಈ ಶ್ಲೋಕದಲ್ಲಿ ಎರಡನೇ ಸೂತ್ರದ ಅರ್ಥಪ್ರತಿಪಾದಕವಾದ ನಿಖಿಲ ಪೂರ್ಣ ಎಂಬ ಪದ ಮೊದಲು ಬಂದಿದೆ. ನಂತರ ಮೂರನೆಯ ಶಾಸ್ತ್ರಯೋನಿತ್ವಾಧಿಕರಣಾರ್ಥ ಪ್ರತಿಪಾದಕವಾದ ಆಪ್ಯತಮಂ ಎಂಬುದು ಇದೆ.

ಕಡೆಯಲ್ಲಿ ಮೊದಲನೇ ಸೂತ್ರಾರ್ಥ ಪ್ರತಿಪಾದಕವಾದ ಸದಾ ವಂದ್ಯಂ ಎಂಬುದು ಇದೆ. ಸೂತ್ರಗಳ ಕ್ರಮದಲ್ಲಿಯೇ ಈ ಪದಗಳಿಲ್ಲ. ಇದು ಏಕೆ? ಎಂದು ಶಂಕೆ ಬರಬಹುದು.

ಅದಕ್ಕೆ ಸಮಾಧಾನ - ಪರಮಾತ್ಮನ ಗುಣಪೂರ್ಣತ್ವ ಮೊದಲಾದವುಗಳ (ದ್ವಿತೀಯಾಧಿಕರಣ) ವಿಷಯದಲ್ಲೂ ಶಾಸ್ತ್ರವೇ ಪ್ರಮಾಣ ಹಾಗೂ ಜಿಜ್ಞಾಸಾ (ಪ್ರಥಮಾಧಿಕರಣ) ವಿಷಯದಲ್ಲೂ ಶಾಸ್ತ್ರವೇ ಪ್ರಮಾಣವಾದ್ದರಿಂದ ಮೊದಲಿನ ಸೂತ್ರಾರ್ಥಕ್ಕೆ ಹಾಗೂ ದ್ವಿತೀಯ ಸೂತ್ರಾರ್ಥಕ್ಕೂ ಈ ಮೂರನೆಯ ಸೂತ್ರಾರ್ಥವು ಉಪಪಾದಕವಾಗಿದೆ. ಆದ್ದರಿಂದ ಎರಡೂ ಸೂತ್ರಾರ್ಥಗಳ ಜೊತೆ ಸಂಬಂಧ ಗೊತ್ತಾಗಬೇಕೆಂದು ಎರಡು ಮತ್ತು ಒಂದನೇ ಸೂತ್ರಾರ್ಥಗಳ ಮಧ್ಯೆ ಮೂರನೆಯ ಸೂತ್ರಾರ್ಥವನ್ನು ಆಚಾರ್ಯರು ಹೇಳಿದ್ದಾರೆ.)

**ನಿಮಿತ್ತದ್ವಯ ಸಮಾವೇಶದಿಂದ ನೈಮಿತ್ತಕಕಾರ್ಯದ್ವಯ ವಿಲೋಪವಿಲ್ಲ.**

ವೇದವ್ಯಾಸರು ಆಚಾರ್ಯರಿಗೆ ದೇವತೆಯೂ ಮತ್ತು ಗುರುವೂ ಆಗಿದ್ದಾರೆ. ಆದ್ದರಿಂದ ದೇವತೆಯೆಂದು ''ನಾರಾಯಣಂ ನಿಖಿಲಪೂರ್ಣ'' ಎಂಬ ಶ್ಲೋಕದಿಂದ ಒಂದು ಸಲ ನಮಸ್ಕರಿಸಿ ಮತ್ತೆ ''ತಮೇವ ಶಾಸ್ತ್ರ ಪ್ರಭವಂ ''ಎಂಬ ಶ್ಲೋಕದಿಂದ ಗುರುವೆಂದೂ ಅದೇ ನಾರಾಯಣನನ್ನು (ವೇದವ್ಯಾಸರನ್ನು) ನಮಸ್ಕರಿಸಿದ್ದಾರೆ. ಆದರೆ ಲೋಕದಲ್ಲಿ ಮಗನಿಗೆ ತಂದೆಯೇ ಗುರುವಾಗಿದ್ದಾಗಲೂ ಮಗನು ತಂದೆಗೆ ತಂದೆಯೆಂದೂ, ಗುರುವೆಂದೂ ಎರಡು ಸಲ ನಮಸ್ಕಾರ ಮಾಡುವುದಿಲ್ಲ. ಆದ್ದರಿಂದ ಆಚಾರ್ಯರು ಈ ರೀತಿ ಎರಡು ನಮಸ್ಕಾರಗಳನ್ನು ಮಾಡಿದ್ದು ಹೇಗೆ ? ಎಂಬ ಪ್ರಶ್ನೆಗೆ ಸುಧಾದಲ್ಲಿ ಹೇಳಿರುವ ಉತ್ತರ ಹೀಗಿದೆ - ಲೋಕದಲ್ಲಿ ಹೀಗೆ ಎರಡು ಸಲ ನಮಸ್ಕಾರ ಮಾಡುವುದು ಇಲ್ಲದಿದರೂ ಎಲ್ಲ ಕಡೆ ಎರಡು ನಿಮಿತ್ತಗಳು ಒಟ್ಟಿಗೆ ಸೇರಿದಾಗ ಆ ನಿಮಿತ್ತಗಳ ಎರಡು ಕಾರ್ಯಗಳನ್ನು ಬಿಡುವುದೇನೂ ಕಂಡಿಲ್ಲ. ಎಷ್ಟೋ ಕಡೆ ಆ ಎರಡು ನಿಮಿತ್ತಗಳ ಎರಡು ಕಾರ್ಯಗಳನ್ನು ಮಾಡುವುದು ಕಂಡಿದೆ. ಇದರ ಅಭಿಪ್ರಾಯವಿದು - ಸತ್ರವೆಂಬ ಸೋಮಯಾಗದಲ್ಲಿ ಋತ್ವಿಜರೇ ಯಜಮಾನರಾಗಿರುತ್ತಾರೆ.

ಆಗ ಆ ಯಾಗದಲ್ಲಿ ಋತ್ವಿಜರು ಮಾಡಬೇಕಾದ ಕೆಲಸಗಳನ್ನೂ, ಮತ್ತು ಯಜಮಾನ ಮಾಡಬೇಕಾದ ಕೆಲಸಗಳನ್ನೂ ಅವರೇ ಮಾಡುತ್ತಾರೆ (ಋತ್ವಿಕ್ತ್ವ -ಯಜಮಾನತ್ವಗಳೆಂಬ ಎರಡು ನಿಮಿತ್ತಗಳು ಅವರಲ್ಲೇ ಸಮಾವೇಶವಾಗಿದ್ದಾಗ ಆ ಎರಡು ನಿಮಿತ್ತ ಪ್ರಯುಕ್ತ ಕೆಲಸಗಳನ್ನು ಅವರೇ ಮಾಡುತ್ತಾರೆ) ಹಾಗೂ, ಬ್ರಹ್ಮ ಸೂತ್ರಗಳಲ್ಲೂ ಜ್ಯೋತಿ ಆಕಾಶ ಮುಂತಾದ ಶಬ್ದಗಳನ್ನು ಸಮನ್ವಯ ಮಾಡಿದ್ದಾರೆ. ಇಲ್ಲಿಯೂ ಜ್ಯೋತಿ ಶಬ್ದವು ಅನ್ಯತ್ರ ಪ್ರಸಿದ್ಧ (ಪರಮಾತ್ಮನನ್ನು ಬಿಟ್ಟು ಲೌಕಿಕವಾದ ತೇಜಸ್ಸಿನಲ್ಲಿ ಪ್ರಸಿದ್ಧ) ವಾಗಿದೆ. ಹಾಗೂ ನಾಮಾತ್ಮಕ ಶಬ್ದವೂ ಆಗಿದೆ. ಈ ಎರಡು ಅನ್ಯತ್ರ ಪ್ರಸಿದ್ಧತ್ವ ನಾಮಾತ್ಮಕತ್ವಗಳೆಂಬ ನಿಮಿತ್ತಗಳ ಕಾರ್ಯ ಪ್ರಥಮಾಧ್ಯಾಯ ಪ್ರಥಮ ಪಾದದಲ್ಲಿ ವಿಚಾರ್ಯಮಾಣತ್ವವೂ ಇದರಲ್ಲೇ ಸಮಾವೇಶವಾಗಿದೆ. ಹಾಗೂ ಪ್ರತಿಸಂವತ್ಸರ ಮಾಡುವ ಶ್ರಾದ್ಧವೇ ದರ್ಶ ದಿನದಂದು ಬಂದರೆ (ದರ್ಶ ಪ್ರಯುಕ್ತವಾಗಿ ಶ್ರಾದ್ಧ ಮಾಡಬೇಕೆಂದು ನಿಯಮವಿರುವುದರಿಂದ) ಅದೇ ದಿನ ಸಾಂವತ್ಸರಿಕ ಶ್ರಾದ್ಧವನ್ನು ಮತ್ತು ಇನ್ನೊಂದು ಶ್ರಾದ್ಧವನ್ನೂ ಮಾಡುವುದು ಕಂಡಿದೆ (ಹಾಗೆ ವಿಧಿಯಿದೆ) ಹಾಗೆಯೇ ಗುರುತ್ವ ಮತ್ತು ದೇವತಾತ್ವಗಳೆಂಬ ಎರಡು ನಿಮಿತ್ತಗಳಿಂದ ಎರಡು ನಮಸ್ಕಾರಗಳನ್ನು ಮಾಡುವುದೂ ಲೋಕ ಸಮ್ಮತವೇ.

### ವಿದ್ಯಾಶಬ್ದಾರ್ಥ ವಿಚಾರ

ವಿದ್ಯಾಶಬ್ದವು ಯೋಗ - ರೂಢಿಗಳಿಂದ ಜ್ಞಾನವಾಚಕವಾದಂತೆ ಜ್ಞಾನಸಾಧನ ವಾಚಕವೂ ಆಗಿದೆ ಎಂದು ಶ್ರೀಮಜ್ಜಯತೀರ್ಥರು ಹೇಳಿದ್ದಾರೆ. ಆದರೆ ಇದು ಜ್ಞಾನಸಾಧನ ವಾಚಕ ವಾಗಲಾರದು. ಏಕೆಂದರೆ 'ಸಂಜ್ಞಾಯಾಂ ಸಮಜದನಿಷದನಿಪತಮನವಿದಷುಞ್ ಶೀಙ್ ಭೃಞಿಣಃ' ಎಂಬ ಸೂತ್ರದಿಂದ ವಿದ ಧಾತುವಿಗೆ ಕ್ಯಪ್ ಪ್ರತ್ಯಯ ಸೇರಿಸಿ 'ವಿದ್ಯಾ' ರೂಪ ನಿಷ್ಪತ್ತಿ ಮಾಡಬೇಕು. ಆದರೆ ಈ ಸೂತ್ರದಲ್ಲಿ ಕ್ಯಪ್ ಎಂಬುದನ್ನು 'ವ್ರಜಯಜೋರ್ಭಾವೇ ಕ್ಯಪ್' ಎಂಬುದರಿಂದ ಅನುವೃತ್ತಿ ಮಾಡಬೇಕು.' ವ್ರಜಯಜೋರ್ಭಾವೇ ಕ್ಯಪ್' ಎಂಬಲ್ಲಿ ಹಿಂದಿನ ಸೂತ್ರದಿಂದ ಭಾವೇ ಎಂಬುದನ್ನು ಅನುವೃತ್ತಿಮಾಡಲು ಬರುವಂತಿದ್ದರು, ಆ ಸೂತ್ರದಲ್ಲಿ ಪುನ: ಭಾವೇ ಎಂದು ಹೇಳಿದ್ದರಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಬರುತ್ತದೆಯೇ

ಹೊರತು ಕರ್ತೃಭಿನ್ನ ಕಾರಕಾರ್ಥದಲ್ಲಿ ಅಲ್ಲ ಎಂದು ತಿಳಿಯುತ್ತದೆ. ಹೀಗೆ ಆ ಸೂತ್ರದಿಂದ ಕ್ಯಪ್ ಎಂಬುದನ್ನು ಇಲ್ಲಿ ಅನುವೃತ್ತಿ ಮಾಡಿದ್ದರಿಂದ ಇಲ್ಲಿ ಹೇಳಲ್ಪಟ್ಟ ಧಾತುಗಳಿಗೂ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಬರುತ್ತದೆಂದು ಸಿದ್ಧವಾಯಿತು. ಈ ರೀತಿ ಭಾವಾರ್ಥದಲ್ಲಿ (ಜ್ಞಾನವೆಂಬ ಅರ್ಥದಲ್ಲಿ) ಮಾತ್ರ ವಿದ್ಯಾಶಬ್ದ ನಿಷ್ಪನ್ನವಾಗುತ್ತದೆ ಹೊರತು ಜ್ಞಾನಸಾಧನಾರ್ಥದಲ್ಲಿ ಅಲ್ಲ ಎಂದು ಶಂಕೆ.

ಇದಕ್ಕೆ ಸಮಾಧಾನ - 'ಸಂಜ್ಞಾಯಾಂ ಸಮಜ...' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ ಕೇವಲ ಕ್ಯಪ್ ಎಂಬುದನ್ನು ಮಾತ್ರ ಅನುವೃತ್ತಿ ಮಾಡಬೇಕೇ ಹೊರತು 'ಭಾವಾರ್ಥದಲ್ಲಿ ಮಾತ್ರ' ಎಂದು ಸೂಚಿಸಲು ಉಕ್ತವಾದ 'ಭಾವೇ' ಎಂಬುದನ್ನು ಅನುವೃತ್ತಿಮಾಡಬಾರದೆಂದು ವೃತ್ತಿಯೇ ಮೊದಲಾದ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೆ 'ವ್ರಜಯಜೋ..' ಎಂಬ ಸೂತ್ರಕ್ಕಿಂತಲೂ ಪೂರ್ವದ ಸೂತ್ರಗಳಲ್ಲಿ ಅಧಿಕೃತವಾದ 'ಭಾವೇ' ಎಂಬುದನ್ನು ಮತ್ತು ಅಕರ್ತರಿ ಚ ಕಾರಕೇ ಎಂಬುದನ್ನು 'ಕೃತ್ಯಲ್ಯುಟೋ ಬಹುಲಮ್ ' ಎಂಬ ಸೂತ್ರದ ವರೆಗೂ ಅನುವೃತ್ತಿ ಮಾಡಬೇಕಾದ್ದರಿಂದ 'ಸಮಜನಿಷದ..' ಸೂತ್ರಕ್ಕೂ ಅದು ಅನುವೃತ್ತಿಯಾಗುವುದರಿಂದ ಭಾವಾರ್ಥದಲ್ಲಿಯೂ ಕರ್ತೃಭಿನ್ನ ಕಾರಕಾರ್ಥದಲ್ಲಿಯೂ ಕ್ಯಪ್ ಬರುತ್ತದೆಂದು ಸಿದ್ಧವಾಯಿತು. ಆದ್ದರಿಂದ ವಿದ್ ಧಾತುವಿಗೆ ಭಾವಾರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಕ್ಯಪ್ ಪ್ರತ್ಯಯ ಬಂದು ವಿದ್ಯಾ ಶಬ್ದ ನಿಷ್ಪನ್ನವಾದ ಪ್ರಯುಕ್ತ ವಿದ್ಯಾ ಶಬ್ದಕ್ಕೆ ಯೋಗವೂ ಮತ್ತು ಸಂಜ್ಞಾಯಾಂ ಎಂದು ಹೇಳಿದ್ದರಿಂದ ರೂಢಿಯೂ ಸಿದ್ಧವಾಯಿತು.

ಈ ಸಮಾಧಾನವು ಹೇಗೆ ತಿಳಿಯುತ್ತದೆ ಎಂದರೆ - ಸುಧಾದಲ್ಲಿ ಸಂಜ್ಞಾಯಾಂ ಸಮಜನಿಷದ...'ಇತ್ಯತ್ರ ಸಂಜ್ಞಾಯಾಂ ಇತ್ಯನುವೃತ್ತೇಃ ಎಂದು ಹೇಳಿದ್ದಾರೆ. ಸೂತ್ರದಲ್ಲಿಯೇ ಸಂಜ್ಞಾಯಾಂ ಎಂದಿರುವಾಗ ಪುನ: ಅನುವೃತ್ತಿ ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ 'ಸಂಜ್ಞಾಯಾಂ' ಎಂಬುದನ್ನು ಅನುವೃತ್ತಿ ಮಾಡಬೇಕೆಂದು ಅರ್ಥಮಾಡದೇ 'ಅಕರ್ತರಿ ಚ ಕಾರಕೇ ಸಂಜ್ಞಾಯಾಂ' ಎಂಬ ಸಮಗ್ರ ಸೂತ್ರವನ್ನೇ ಅನುವೃತ್ತಿ ಮಾಡಬೇಕು

ಎಂದು ಆ ವಾಕ್ಯಕ್ಕೆ ಅರ್ಥ ಮಾಡಬೇಕು. ' ಅಕರ್ತರಿ ಚ ...' ಸೂತ್ರವನ್ನು ಅನುವೃತ್ತಿ ಮಾಡುವಾಗ ಅದರ ಜೊತೆಗೆ ಇರುವ 'ಭಾವೇ' ಎಂಬುದು ಅನುವೃತ್ತವಾಗಿ ಬರುತ್ತದೆ ಎಂದು ಅಭಿಪ್ರಾಯ.

'ಅಕರ್ತರಿ ಚ ಕಾರಕೇ ಸಂಜ್ಞಯಾಮ್ ' ಎಂಬ ಸಮಗ್ರ ಸೂತ್ರವೇ ಸಂಜ್ಞಾಯಾಂ ಸಮಜ ನಿಷದ ಎಂಬಲ್ಲಿ ಅನುವೃತ್ತವಾಗುವುದಾದರೆ ಈ ಸೂತ್ರದಲ್ಲಿ ಪುನ: ಸಂಜ್ಞಾಯಾಂ ಎಂದು ಏಕೆ ಹೇಳಿದ್ದು ಎಂದರೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಂ ' ಎಂಬಲ್ಲಿರುವ ಸಂಜ್ಞಾಯಾಂ ಎಂಬ ಪದವು ವ್ಯಾವರ್ತಕವಲ್ಲ. ಚ ಶಬ್ದವನ್ನು ಸಂಜ್ಞಾಯಾಂ ಚ ಎಂದು ಅನ್ವಯ ಮಾಡಿ ಸಂಜ್ಞಾಯಾಂ ಅಸಂಜ್ಞಾಯಾಂ ಚ ಎಂದು ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ ಅಲ್ಲಿಂದ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡುವುದೆಂದರೆ ಆ ಸೂತ್ರ ಅನುವೃತ್ತಿಮಾಡಬೇಕೆಂದಷ್ಟೆ ಅರ್ಥ. ಹಾಗಾದರೆ ವಿದ್ಯಾ ಶಬ್ದಕ್ಕೆ ರೂಢಿ ಹೇಗೆ ಸಿದ್ಧವಾಯಿತೆಂದರೆ 'ಸಂಜ್ಞಾಯಾಂ ಸಮಜ..' ಸೂತ್ರದಲ್ಲಿರುವ ಸಂಜ್ಞಾ ಪದದಿಂದಲೇ ರೂಢಿ ಸಿದ್ಧವಾಗುತ್ತದೆ.

ಆದ್ದರಿಂದಲೇ 'ಸಂಜ್ಞಾಯಾಂ ಸಮಜ ನಿಷದ...'ಸೂತ್ರದಲ್ಲಿ ಸಂಜ್ಞಾಯಾಂ ಎಂಬುದಕ್ಕೆ ಅನುವೃತ್ತಿಯೆಂದರೆ ಈ ಸೂತ್ರದಲ್ಲಿ ಉಕ್ತವಾದ ಪ್ರತಿಪದಕ್ಕೂ ಸಂಜ್ಞಾಯಾಂ ಎಂದು ಅನುಷಂಗ ಮಾಡಬೇಕು. ಎಂದೂ ಅರ್ಥವೆಂದು ಹೇಳುತ್ತಾರೆ.

ಕೆಲವು ಪುಸ್ತಕಗಳಲ್ಲಿ ಸಂಜ್ಞಾಯಾಂ ಸಮಜ ನಿಷದ ಇತ್ಯುಕ್ತೇ: ಎಂದೇ ಪಾಠವಿದೆ ಆ ಪಕ್ಷದಲ್ಲಿ ಯಾವ ಕ್ಲೇಶವೂ ಇಲ್ಲ.

**ಉಪನಿಷತ್ತುಗಳು ಅಪರವಿದ್ಯೆಯಲ್ಲ.**

ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನವಾಚಕಾಃ ।
ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥

ಎಂಬಲ್ಲಿ ಋಗಾದ್ಯಾಃ ಎಂಬ ಪದದಿಂದ ಮಂತ್ರ ಬ್ರಾಹ್ಮಣರೂಪವಾದ ವೇದವನ್ನು ಪರಿಗ್ರಹಿಸಬೇಕು. ಉಪನಿಷತ್ತುಗಳನ್ನು ಗ್ರಹಿಸಿಕೂಡದು. ಏಕೆಂದರೆ ಉಪನಿಷತ್ತುಗಳಿಗೆ ಭಗವದವಾಚಕತ್ವದಶೆಯೇ ಇರುವುದಿಲ್ಲ. ಅವುಗಳು ಯಾವಾಗಲೂ ವಿಷ್ಣು ವಾಚಕಗಳೇ ಆಗಿರುತ್ತವೆ. 'ಆರಣ್ಯಕ ಮಾವರ್ತಯೇತ್ ಆರಣ್ಯಕಮಾವರ್ತಯೇತ್' ಎಂಬುದಾಗಿ

ಆವೃತ್ತಿಯನ್ನು ವಿಧಾನಮಾಡಿದ್ದರಿಂದ ಉಪನಿಷತ್ತುಗಳು ಸದಾ ವಿಷ್ಣು ವಾಚಕಗಳೇ ಆಗಿರುತ್ತವೆಂದು ತಿಳಿಯುತ್ತದೆ. ಬ್ರಹ್ಮ ಮೀಮಾಂಸಾ ಶಾಸ್ತ್ರವು ಸಮಗ್ರ ವೇದಗಳಿಗೂ ಬ್ರಹ್ಮಪರತ್ವವನ್ನು ಪ್ರತಿಪಾದಿಸಿದ್ದರಿಂದ 'ಯದಾ ವಿಷ್ಣೋಸ್ತು ವಾಚಕಾ': ಎಂಬುದು ಸಮಗ್ರ ವೇದಗಳಿಗೆ ಸಂಬಂಧ ಪಡುತ್ತದೆ.

## ವಕ್ತ್ರಾದ್ಯಾನುಕೂಲ್ಯ ಸಾಧನೆ

''ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ'' ಎಂಬ ಶ್ಲೋಕದಲ್ಲಿ ತೋರಿಸಿದ ವಕ್ತ್ರಾದ್ಯಾನುಕೂಲ್ಯ ಸಾಧನ ಮಾಡುವ ಅನುಮಾನಗಳು. -

ಜಗತ್ತಿಗೆ ಜ್ಞಾನೋಪದೇಶಕರಾದ ಬ್ರಹ್ಮಾದಿಗಳಿಗೂ ಗುರುವಾದ, ಮತ್ತು ಅಶೇಷಾರ್ಥಪ್ರತಿಪಾದಕವಾದ ಭಾರತಾದಿಶಾಸ್ತ್ರಗಳಿಗೆ ಉತ್ಪಾದಕನಾದ ಬಾದ ರಾಯಣನಿಂದ ಬ್ರಹ್ಮಾದಿಗಳ ಪ್ರಾರ್ಥನಾನುಸಾರ ಅವರಿಗೆ ಮೋಕ್ಷವಾಗಲೆಂಬ ಉದ್ದೇಶದಿಂದ ರಚಿಸಲ್ಪಟ್ಟ ಈ ಬ್ರಹ್ಮಸೂತ್ರಗಳು ಪ್ರಮಾಣವೆಂದು ಆಚಾರ್ಯರು ಗುರುರ್ಗುರೂಣಾಂ ಎಂಬ ಶ್ಲೋಕದಲ್ಲಿ ಹೇಳಿದ್ದಾರೆ.

ಇಲ್ಲಿ ಗುರುರ್ಗುರೂಣಾಂ ಇತ್ಯಾದಿಗಳಿಂದ ಮೊದಲು ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧಿಸಿ ಅವುಗಳಿಂದ ಪ್ರಾಮಾಣ್ಯ ಸಾಧನ ಮಾಡಬೇಕೆಂದು ಜಯತೀರ್ಥರು ತಿಳಿಸಿದ್ದಾರೆ. ಅದರ ಬಗೆ ಹೀಗಿದೆ.

ಯಾವುದೇ ಗ್ರಂಥ ಪ್ರಮಾಣವಾಗಬೇಕಾದರೆ ಅದನ್ನು ರಚಿಸುವ ವ್ಯಕ್ತಿಯು ತಾನು ತಿಳಿಸಬೇಕಾದ ವಿಷಯವನ್ನು ಸರಿಯಾಗಿ ತಿಳಿದಿರಬೇಕು. ಇದೇ ವಿವಕ್ಷಿತಾರ್ಥ ತತ್ವಜ್ಞಾನ. ಹಾಗೂ ಅವನು ವಿಷಯವನ್ನು ಹೇಳುವ ಇಚ್ಛೆಯುಳ್ಳವನಾಗಿರಬೇಕು. ಮತ್ತು ಅವನ ಇಂದ್ರಿಯಗಳು ಸರಿಯಾಗಿರಬೇಕು. (ವಿವಕ್ಷಾ ಮತ್ತು ಕರಣಪಾಟವಗಳು) ಇದು ವಕ್ತೃವಿನ ಅನುಕೂಲ್ಯ.

ಮತ್ತು ಶ್ರೋತೃವೂ ಕೂಡ ತತ್ವಜ್ಞಾನ ಯೋಗ್ಯನಾಗಿರಬೇಕು. ಮತ್ತು ವಕ್ತೃವಿಗೆ ಪ್ರೀತಿ ಪಾತ್ರನಾಗಿರಬೇಕು ಇವೆರಡು ಸೇರಿ ಶ್ರೋತ್ರಾನು ಕೂಲ್ಯವೆನಿಸುತ್ತದೆ.

ಮತ್ತು ಶ್ರೋತೃಗಳಿಗೆ ಪ್ರಯೋಜನವಾಗಬೇಕೆಂಬ ಉದ್ದೇಶದಿಂದ ರಚಿಸಿದಾಗಷ್ಟೇ ಗ್ರಂಥ ಪ್ರಮಾಣವಾಗುತ್ತದೆ. ಇದು ಪ್ರಸಂಗಾನುಕೂಲ್ಯ.

ಇಲ್ಲಿ ಬಾದರಾಯಣರು ವಕ್ತೃ ಅವರು ಅನೇಕ ಶಾಸ್ತ್ರಗಳಿಗೆ ಉತ್ಪಾದಕ ಹಾಗೂ ಬ್ರಹ್ಮರುದ್ರಾದಿಗಳಿಗೂ ಗುರುವಾದವರು. ಆದ್ದರಿಂದ ಅಶೇಷಾರ್ಥ ಪ್ರತಿಪಾದಕವಾದ ಮಹಾಭಾರತ ಮೊದಲಾದ ಗ್ರಂಥಗಳನ್ನು ಬರೆದ ಮತ್ತು ಸರ್ವಜ್ಞಕಲ್ಪರಾದ ಬ್ರಹ್ಮಾದಿಗಳಿಗೆ ಉಪದೇಶ ಮಾಡಿದ ವೇದವ್ಯಾಸರು ಸರ್ವಜ್ಞರಾಗಿರಬೇಕು.

ಹೀಗೆ ಸರ್ವಜ್ಞರೆಂದು ಸಿದ್ಧರಾದ ವೇದವ್ಯಾಸರು ಪಟುಕರಣರೂ ಆಗಿರುತ್ತಾರೆ. ಅವರೇ ಕರುಣೆಯಿಂದ ಬ್ರಹ್ಮಾದಿಗಳಿಗೆ ಉಪದೇಶ ಮಾಡಿರುವುದರಿಂದ ಅವರಿಗೆ ವಿವಕ್ಷೆಯೂ ಇದೆಯೆಂದು ಸಿದ್ಧವಾಗುತ್ತದೆ. ಆದ್ದರಿಂದ ವಕ್ತ್ರನುಕೂಲ್ಯವು ಸಿದ್ಧವಾಗುತ್ತದೆ. ಮತ್ತು ಬ್ರಹ್ಮಾದಿಗಳು ವೇದವ್ಯಾಸರಿಗೆ ಪ್ರೇಮಾಸ್ಪದರೆಂದು ಶಾಸ್ತ್ರದಿಂದ ತಿಳಿಯುತ್ತದೆ. ಹಾಗು ಬ್ರಹ್ಮಾದಿಗಳು ಜಗತ್ತಿಗೇ ಗುರುಗಳಾದ್ದರಿಂದ ಅವರು ತತ್ತ್ವಜ್ಞಾನಯೋಗ್ಯರೂ ಆಗಿದ್ದಾರೆ. ಆದ್ದರಿಂದ ಶ್ರೋತ್ರಾನುಕೂಲ್ಯ ಸಿದ್ಧವಾಯಿತು.

ಮತ್ತು ಬ್ರಹ್ಮಾದಿಗಳ ಪ್ರಾರ್ಥನೆಯಿಂದ ಕರುಣಾನ್ವಿತರಾದ ವೇದವ್ಯಾಸರು ಬ್ರಹ್ಮ ಸೂತ್ರಗಳನ್ನು ರಚಿಸಿದ್ದಾರೆ. ಆದ್ದರಿಂದ ಇಲ್ಲಿ ಪ್ರಸಂಗಾನುಕೂಲ್ಯವೂ ಸಿದ್ಧವಾಗುತ್ತದೆ.

ಇಲ್ಲಿ ಅನುಮಾನಗಳು ಹೀಗಿವೆ.

೧) ಈ ಶಾಸ್ತ್ರವು ಶಾಸ್ತ್ರಪ್ರಭವರಾದ ಮತ್ತು ಗುರುಗಳಿಗೂ ಗುರುವಾದ ವೇದವ್ಯಾಸರಿಂದ ರಚಿತವಾದ್ದರಿಂದ ಅನುಕೂಲ ವಕ್ತೃವುಳ್ಳದ್ದು. ಮಹಾಭಾರತಾದಿಗಳಂತೆ.

೨) ಈ ಶಾಸ್ತ್ರವು ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ಉಪದೇಶಿಸಲ್ಪಟ್ಟದ್ದರಿಂದ ಅನುಕೂಲಶ್ರೋತೃವುಳ್ಳದ್ದು. ಮಹಾಭಾರತಾದಿ ಗಳಂತೆ

೩) ಈ ಶಾಸ್ತ್ರವು ಶ್ರೋತೃ ಪ್ರಯೋಜನದ ಉದ್ದೇಶದೀದ ರಚಿಸಲ್ಪಟ್ಟದ್ದರಿಂದ ಅನುಕೂಲ ಪ್ರಸಂಗವುಳ್ಳದ್ದು. ಮಹಾಭಾರತದಂತೆ.

೪) ಹೀಗೆ ಮೂರು ಅನುಮಾನಗಳಿದ ವಕ್ತೃ-ಶ್ರೋತೃ-ಪ್ರಸಂಗಗಳ ಅನುಕೂಲ್ಯಗಳನ್ನು ಸಾಧನೆ ಮಾಡಿ ನಂತರ ಈ ಶಾಸ್ತ್ರವು ವಕ್ತೃ-ಶ್ರೋತೃ-ಪ್ರಸಂಗಗಳ ಆನುಕೂಲ್ಯವುಳ್ಳದ್ದಾದ್ದರಿಂದ ಪ್ರಮಾಣವಾಗಬೇಕು. ಮಹಾಭಾರತಾದಿಗಳಂತೆ ಎಂಬ ಅನುಮಾನದಿಂದ ಪ್ರಾಮಾಣ್ಯವನ್ನು ಸಾಧಿಸಬೇಕು.

ಆದ್ದರಿಂದ ಗುರುರ್ಗುರೂಣಾಂ ಇತ್ಯಾದಿಗಳಿಂದ ಮೊದಲಿಗೆ ವಕ್ತ್ರಾದ್ಯಾನುಕೂಲ್ಯಗಳನ್ನು ಸಾಧಿಸಿ ನಂತರ ವಕ್ತ್ರಾದ್ಯಾನುಕೂಲ್ಯಗಳಿಂದ ಪ್ರಾಮಾಣ್ಯವನ್ನು ಸಾಧಿಸಬೇಕೆಂದು ಜಯತೀರ್ಥರ ಅಭಿಪ್ರಾಯ.

**ಸುಧಾದಲ್ಲಿರುವ ಶಂಕಾ ಸಮಾಧಾನಗಳ ಸಾಮಂಜಸ್ಯ'**

ಬ್ರಹ್ಮಸೂತ್ರಂ ಪ್ರಮಾಣಂ ಆಪ್ತವಾಕ್ಯತ್ವಾತ್ ಎಂಬ ಅನುಮಾನದಿಂದ ಶಾಸ್ತ್ರ ಪ್ರಾಮಾಣ್ಯಜ್ಞಾನವು ಬಂದರೆ ಶಾಸ್ತ್ರದ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಭಂಗ ಬರುತ್ತದೆ. ಏಕೆಂದರೆ ಶಾಸ್ತ್ರದಲ್ಲಿರುವ ಜ್ಞಾನಜನನಶಕ್ತಿಯು ಯಾವುದರಿಂದ ತಿಳಿಯಲ್ಪಡುವುದೋ ಅದರಿಂದಲೇ ಪ್ರಮಾಜನನಶಕ್ತಿಯೂ ತಿಳಿಯಲ್ಪಟ್ಟರೆ ಶಾಸ್ತ್ರದಲ್ಲಿರುವ ಪ್ರಾಮಾಣ್ಯದ ಜ್ಞಾನವು ಸ್ವತಃ ಉಂಟಾದಂತೆ ಆಗುವುದು. ಪ್ರಕೃತದಲ್ಲಿಯಾದರೂ ಶಾಸ್ತ್ರದಲ್ಲಿರುವ ಜ್ಞಾನ ಜನನ ಶಕ್ತಿಯು ಅನ್ವಯವ್ಯತಿರೇಕದಿಂದ ತಿಳಿಯಲ್ಪಡುವುದು. ಪ್ರಮಾಜನನಶಕ್ತಿಯಾದರೂ ಆಪ್ತವಾಕ್ಯತ್ವದಿಂದ ತಿಳಿಯಲ್ಪಟ್ಟರೆ ಆಗ ಸ್ವತಸ್ತ್ವಕ್ಕೆ ಭಂಗ ಬರುವುದು ಎಂಬ ಶಂಕೆಗೆ ಸುಧಾದಲ್ಲಿ ಹೀಗೆ ಉತ್ತರಿಸಿದ್ದಾರೆ - ಈ ಅನುಮಾನವು ಅಪ್ರಾಮಾಣ್ಯ ಶಂಕಾನಿರಾಸಕ್ಕೆ ಪ್ರಯೋಗಿಸಲ್ಪಟ್ಟಿದೆ ಹೊರತು ಪ್ರಾಮಾಣ್ಯ ಜ್ಞಾನಕ್ಕಲ್ಲ. ಎಂದು. ಇದರ ಮೇಲೆ ಒಂದು ಆಕ್ಷೇಪ ಬರುತ್ತದೆ. ಇಲ್ಲಿ ವಿರೋಧ ಶಂಕೆಯೇ ಇಲ್ಲ ಏಕೆಂದರೆ ಜ್ಞಾನಜನನ ಶಕ್ತಿಯೂ ಪ್ರಮಾಜನನ ಶಕ್ತಿಯೂ ಒಂದೇ ಆಗಿರುವುದರಿಂದ ಪ್ರಮಾಜನನ ಶಕ್ತಿಯನ್ನು ಗ್ರಹಿಸಿದ ಆಪ್ತವಾಕ್ಯತ್ವವು ಜ್ಞಾನಜನನ ಶಕ್ತಿಯನ್ನೂ ಗ್ರಹಿಸಿದಂತೆಯೇ ಆಯಿತು. ಆದ್ದರಿಂದ ಸ್ವತಸ್ತ್ವಕ್ಕೆ ಭಂಗವೇ ಇಲ್ಲ. ಆ ಎರಡು ಶಕ್ತಿಗಳೂ ಬೇರೆ ಬೇರೆ ಎಂದು ಹೇಳುವ ಪಕ್ಷದಲ್ಲಿಯೂ ಕೂಡ 'ಈ ಶಾಸ್ತ್ರವು ಆಪ್ತ ವಾಕ್ಯವಾದುದರಿಂದ

ಜ್ಞಾನಜನಕ' ವಾಗಿದೆ ಎಂದು ಅನುಮಾನ ಪ್ರಯೋಗ ಮಾಡಿದಾಗ ಆಪ್ತ ವಾಕ್ಯತ್ವದಿಂದಲೇ ಜ್ಞಾನಜನನಶಕ್ತಿಯೂ ತಿಳಿಯಲ್ಪಟ್ಟಂತಾಯಿತು. ಈ ರೀತಿಯಿಂದಲೂ ಸ್ವತಸ್ತ್ವವನ್ನು ಉಪಪಾದನೆ ಮಾಡಲು ಬರುತ್ತದೆ ಆದ್ದರಿಂದ ವಿರೋಧವಿಲ್ಲ ಎಂದು.

ಆದರೆ ಇದು ಸರಿಯಲ್ಲ. ಏಕೆಂದರೆ ಜ್ಞಾನಂ ಪ್ರಮಾಣಂ ಎಂದು ಜ್ಞಾನ ಬರುವಾಗ ಜ್ಞಾನವೂ ಅದರ ಪ್ರಾಮಾಣ್ಯವೂ ಏಕ ಕಾಲದಲ್ಲಿ ಗ್ರಹಿಸಲ್ಪಟ್ಟಂತೆ ಆಪ್ತವಾಕ್ಯತ್ವ ಲಿಂಗದಿಂದ ಜ್ಞಾನ ಬರುವಾಗ ಏಕಕಾಲದಲ್ಲಿ ಜ್ಞಾನಜನನ ಶಕ್ತಿಯೂ ಪ್ರಮಾಜನನ ಶಕ್ತಿಯೂ ಗ್ರಹಿಸಲ್ಪಡುವುದಿಲ್ಲ

ಒಂದು ವೇಳೆ ಅನುಮಾನ ಪ್ರಯೋಗವನ್ನೇ ಬದಲಿಸಿ ಜ್ಞಾನಜನಕವಾದ ಈ ಶಾಸ್ತ್ರವು ಆಪ್ತವಾಕ್ಯವಾದುದರಿಂದ ಪ್ರಮಾಜನಕ ಎಂದು ಪ್ರಯೋಗ ಮಾಡಿದಾಗ ಅದರಿಂದ ಏಕಕಾಲದಲ್ಲಿ ಜ್ಞಾನಜನನ ಶಕ್ತಿಯೂ ಪ್ರಮಾಜನನ ಶಕ್ತಿಯೂ ಗ್ರಹಿಸಲ್ಪಡುವುದರಿಂದ ಸ್ವತಸ್ತ್ವಕ್ಕೆ ಭಂಗವಿಲ್ಲ. ಆದ್ದರಿಂದ ಸ್ವತಸ್ತ್ವ ಭಂಗ ಶಂಕೆಯೂ ಅದರ ಸಮಾಧಾನವೂ ಸುಧಾದಲ್ಲಿ ಮಾಡಿದ್ದು ಸರಿಯಲ್ಲ ಎಂದು ಆಕ್ಷೇಪಿಸಿದರೆ - ಇದಕ್ಕೆ ಸಮಾಧಾನ ಹೀಗೆ ತಿಳಿಯಬೇಕು -

ಅನುವ್ಯಾಖ್ಯಾನದಲ್ಲಿ ಆಪ್ತವಾಕ್ಯತಯಾ ಎಂದು ಹೇಳಿ ಉತ್ತರ ವಾಕ್ಯದಲ್ಲಿ ಶ್ರುತಿ ಮೂಲತಯಾ ತಥಾ ಯುಕ್ತಿ ಮೂಲತಯಾ ಎಂಬಲ್ಲಿ ಇದಂ ಶಾಸ್ತ್ರಂ ಪ್ರಮಾಣಂ ಆಪ್ತಿಮೂಲತ್ವಾತ್, ಇದಂ ಶಾಸ್ತ್ರಂ ಪ್ರಮಾಣಂ ಶ್ರುತಿಮೂಲತ್ವಾತ್, ಇದಂ ಶಾಸ್ತ್ರಂ ಪ್ರಮಾಣಂ ಯುಕ್ತಿ ಮೂಲತ್ವಾತ್ ಎಂಬುದಾಗಿ ಪ್ರಾಮಾಣ್ಯವನ್ನು ಸಾಧಿಸಿದ್ದಾರೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಸುಧಾದಲ್ಲಿ ಸ್ವತಸ್ತ್ವ ಭಂಗ ಶಂಕೆಯನ್ನೂ ಮತ್ತು ಅದರ ಸಮಾಧಾನವನ್ನೂ ಹೇಳಿದ್ದಾರೆಂದು ತಿಳಿಯಬೇಕು. ಹೊರತು ಆಪ್ತವಾಕ್ಯತ್ವಾತ್ ಎಂಬ ಅನುಮಾನವನ್ನು ಕುರಿತಾಗಿ ಅಲ್ಲ.

ಅಥವಾ ಮೂಲದಲ್ಲಿ ಬ್ರಹ್ಮಸೂತ್ರ ಪ್ರಾಮಾಣ್ಯವೆಂದರೆ ಬ್ರಹ್ಮಸೂತ್ರಜ್ಞಾನ ಪ್ರಾಮಾಣ್ಯ ಎಂಬುದಾಗಿಯೂ ಆಪ್ತ ವಾಕ್ಯತಯಾ ಎಂಬುದಕ್ಕೆ ಆಪ್ತ ವಾಕ್ಯಜನ್ಯವಾದುದರಿಂದ ಎಂಬುದಾಗಿಯೂ

ಅರ್ಥವನ್ನು ಇಟ್ಟುಕೊಳ್ಳ ಬೇಕು. ಆಗ ಬ್ರಹ್ಮಸೂತ್ರಗಳಿಂದುಟಾಗುವ ಜ್ಞಾನವು ಆಪ್ತ ವಾಕ್ಯಜನ್ಯವಾದು ದರಿಂದ ಪ್ರಮಾಣ ಎಂದು ಅನುಮಾನ ಪ್ರಯೋಗಿಸಿದಂತಾಯಿತು. ಆಗ, ಜ್ಞಾನ ಪ್ರಾಮಾಣ್ಯವು ಯುಕ್ತಿ ವೇದ್ಯವೆಂದು ಹೇಳಿದಂತಾಗಿ ಸಾಕ್ಷಿಗ್ರಾಹ್ಯತ್ವ ರೂಪಸ್ವತಸ್ತ್ವಕ್ಕೆ ಭಂಗವೆಂಬ ಶಂಕೆಯೂ ಅದಕ್ಕೆ ಸಮಾಧಾನ ಹೇಳಿದ್ದೂ ಸರಿಯಾಗುತ್ತದೆ ಮತ್ತು ಶಂಕೆಗೆ ಉಪೋದ್ಬಲಕವಾಗಿ 'ನವಿಲಕ್ಷಣತ್ವಾತ್' ಎಂಬ ಸಮ್ಮತಿಯನ್ನು ಹೇಳಿದ್ದೂ ಕೂಡ ಜ್ಞಾನ ಪ್ರಾಮಾಣ್ಯ ಸ್ವತಸ್ತ್ವದ ಅಭಿಪ್ರಾಯದಿಂದಲೇ ಎಂದು ತಿಳಿಯಬೇಕು.

ಅಥವಾ ಮೂಲದಲ್ಲಿ ಬ್ರಹ್ಮ ಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧಿಸಲು 'ಬ್ರಹ್ಮ ಸೂತ್ರವು ಪ್ರಮಾಜನಕ ಏಕೆಂದರೆ ಸಂಶಯ ವಿಪರೀತ ಜ್ಞಾನಗಳಿಗೆ ಜನಕವಾಗದೆ ಜ್ಞಾನಜನಕವಾದುದರಿಂದ' ಎಂಬ ಅನುಮಾನವನ್ನು ಹೇಳಿ, ಆಪ್ತವಾಕ್ಯತ್ವಾದಿ ಯುಕ್ತಿಗಳನ್ನು ಹೇತುವಿನ ಅಸಿದ್ಧಿ ಪರಿಹಾರಕ್ಕಾಗಿ ಹೇಳಿದ್ದಾರೆಂದು ಭಾವಿಸಬೇಕು.

ವಸ್ತುತಸ್ತು ಸುಧಾದಲ್ಲಿ ಬಂದ ಶಂಕಾ ಸಮಾಧಾನಗಳ ಸ್ವರೂಪವನ್ನು ಹೀಗೆ ತಿಳಿಯಬೇಕು.- ವಾಕ್ಯವನ್ನು ಶ್ರವಣಮಾಡಿದಾಗ ಜ್ಞಾನ ಉಂಟಾಗುತ್ತದೆ. ಈ ಜ್ಞಾನರೂಪವಾದ ಕಾರ್ಯಲಿಂಗದಿಂದ ಜ್ಞಾನ ಜನನ ಶಕ್ತಿಯನ್ನು ಅನುಮಾನ ಮಾಡಿ ತಿಳಿಯುತ್ತೇವೆ. ಇದೇ ಕಾರ್ಯ ಲಿಂಗದಿಂದಲೇ ಪ್ರಮಾಜನನ ಶಕ್ತಿಯನ್ನೂ ತಿಳಿಯಬೇಕೇ ಹೊರತು ಆಪ್ತವಾಕ್ಯತ್ವ ಲಿಂಗದಿಂದ ಪ್ರಮಾಜನನ ಶಕ್ತಿಯನ್ನು ತಿಳಿಯಲು ಸಾಧ್ಯವಿಲ್ಲ. ಹೀಗಿರುವಾಗ ಆಪ್ತ ವಾಕ್ಯತ್ವ ಲಿಂಗವನ್ನು ಹೇಳಿದ್ದು ಸರಿಯೇ? ಎಂಬುದು ಶಂಕೆ. ಆಪ್ತವಾಕ್ಯತ್ವ ಲಿಂಗವನ್ನು ಅಪ್ರಾಮಾಣ್ಯ ಶಂಕಾನಿರಾಸಕ್ಕಾಗಿ ಹೇಳಿದ್ದೇ ಹೊರತು ಪ್ರಾಮಾಣ್ಯ ಜ್ಞಾನ ಉಂಟುಮಾಡಲು ಅಲ್ಲ ಆದ್ದರಿಂದ ಸ್ವತಸ್ತ್ವಕ್ಕೇನೂ ಭಂಗವಿಲ್ಲ. ಎಂದು ಸಮಾಧಾನ.

**ಔತ್ಪತ್ತಿಕಸ್ತು ಎಂಬ ಜೈಮಿನಿ ಸೂತ್ರದ ಅರ್ಥ.**

ಪ್ರಾಮಾಣ್ಯವು ಸ್ವತಃ ಉತ್ಪತ್ತಿಯಾಗುತ್ತದೆ ಮತ್ತು ಸ್ವತಃ ತಿಳಿಯಲ್ಪಡುತ್ತದೆ ಎಂಬ ವಿಷಯದಲ್ಲಿ ಜಯತೀರ್ಥರು ಜೈಮಿನಿಯ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ ತಸ್ಯ ಜ್ಞಾನಮುಪದೇಶಃ

ಅವ್ಯತಿರೇಕಶ್ಚಾರ್ಥೇ ಅನುಪಲಬ್ಧೇ ತತ್ ಪ್ರಮಾಣಂ ಬಾದರಾಯಣ ಸ್ಯಾನಪೇಕ್ಷತ್ವಾತ್' ಎಂಬ ಸೂತ್ರವನ್ನು ಪ್ರಮಾಣತಯಾ ಉದಾಹರಿಸಿದ್ದಾರೆ. ಈ ಸೂತ್ರಕ್ಕೆ ಶಬ್ದಕ್ಕೂ ಮತ್ತು ಅದರ ಅರ್ಥಕ್ಕೂ ಇರುವ ಸಂಬಂಧವು ಸ್ವಾಭಾವಿಕ. (ಅನಾದಿಕಾಲದಿಂದಿರುವುದು. ಅದನ್ನು ಯಾರೂ ಸೃಷ್ಟಿಸಿಲ್ಲ) ಈ ಸ್ವಾಭಾವಿಕತ್ವಕ್ಕೆ ಉಪದೇಶ ರೂಪ ವೇದವೇ ಜ್ಞಾಪಕ (ವೇದವು ಅನಾದಿಯಾದ್ದರಿಂದ ಅದಕ್ಕೂ ಅದರ ಅರ್ಥಕ್ಕೂ ಇರುವ ಸಂಬಂಧವೂ ಅನಾದಿಯೇ ಆಗಬೇಕು).

ವಿಪರೀತ ಜ್ಞಾನಾಜನಕವಾದ ಮತ್ತು ಸಂಶಯಾ ಜನಕವೂ ಆದ ಈ ವೇದವೇ ಪ್ರತ್ಯಕ್ಷ ಅನುಮಾನಗಳಿಂದ ತಿಳಿಯಲಶಕ್ಯವಾದ ವಸ್ತುವಿನ ವಿಷಯದಲ್ಲಿ ಸ್ವತಃ ಪ್ರಮಾಣವಾಗುತ್ತದೆ. ಏಕೆಂದರೆ ಪ್ರಾಮಾಣ್ಯವು ಅನ್ಯಾನಪೇಕ್ಷವಾಗಿಯೇ ಉತ್ಪತ್ತಿಯಾಗುತ್ತದೆ. ಎಂದು ಅರ್ಥ.

**ತಾರಶಬ್ದಾರ್ಥ ವಿಚಾರ**

''ತತ್ರ ತಾರಾಥ ಮೂಲತ್ವಮ್ '' ಎಂದು ಆಚಾರ್ಯರು ಓಂಕಾರ ಶಬ್ದವನ್ನು ತಿಳಿಸುವ ತಾರ ಶಬ್ದವನ್ನು ಪ್ರಯೋಗಿಸಿದ್ದಾರೆ. ಈ ಶಬ್ದದ ನಿಷ್ಪತ್ತಿ- ಪ್ಲವನ ತರಣ ಎಂಬ ಅರ್ಥವುಳ್ಳ 'ತ್ೄ' ಧಾತುವಿಗೆ ' ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಿಂದ ತರಂತಿ ಅನೇನ ಎಂಬ ಕರಣಾರ್ಥದಲ್ಲಿ ಘಞ್(ಅ) ಪ್ರತ್ಯಯ ಬಂದು 'ಅಚೋ ಞ್ಣಿತಿ ' ಎಂಬ ಸೂತ್ರದಿಂದ ರಪರವಾದ 'ಆರ' ಎಂಬ ವೃದ್ಧಿಯು ತ್ೄ ಎಂಬಲ್ಲಿರುವ ೠ ಕಾರಕ್ಕೆ ಬಂದರೆ ತಾರ ಎಂಬ ಶಬ್ದವು ಸಿದ್ಧಿಸುತ್ತದೆ. ಎಂದು ಸುಧಾದಲ್ಲಿದೆ.

ಇಲ್ಲಿ ಬರುವ ಸಂಶಯವೇನೆಂದರೆ ದೀರ್ಘ ಋವರ್ಣಾಂತವಾದ ತ್ೄ ಧಾತುವಿಗೆ ಘಞ್ ಪ್ರತ್ಯಯಕ್ಕೆ ಅಪವಾದವಾದ ' ಋದೋರಪ್ '' ಎಂಬ ಸೂತ್ರದಿಂದ ' ಅಪ್' (ಅ) ಪ್ರತ್ಯಯವು ರಪರವಾಗಿ ಬಂದರೆ ತರ ಎಂದೇ ಆಗಬೇಕು ಆದ್ದರಿಂದ ತಾರ ಎಂಬ ಪ್ರಯೋಗವು ಸರಿಯಲ್ಲ ಎಂದು.

ಸಮಾಧಾನ - ದೀರ್ಘ ಋವರ್ಣಾಂತವಾದ 'ತ್ೄ 'ಎಂಬ ಧಾತುವು ಇರುವ ಹಾಗೆ ಹ್ರಸ್ವ ಋವರ್ಣಾಂತವಾದ 'ತೃ' ಎಂಬ ಧಾತುವೂ ಇದೇ ಎಂದು ಒಪ್ಪಲೇ ಬೇಕು. ಇಲ್ಲದಿದ್ದರೇ 'ಸಾಂಪರಾಯೇ ತರ್ತವ್ಯಾಭಾವಾತ್'

ಎಂಬ ಬ್ರಹ್ಮಸೂತ್ರದಲ್ಲಿರುವ 'ತರ್ತವ್ಯ 'ಎಂಬ ಪದವು ಅಸಾಧು ಎಂದಾಗಬೇಕಾದೀತು. ಇಲ್ಲಿ ತೃ ಧಾತುವಿನ ಮೇಲೆ ತವ್ಯ ಪ್ರತ್ಯಯ ಬಂದರೆ 'ಪುಗಂತ ಲಘೂಪಧಸ್ಯ' ಎಂಬ ಸೂತ್ರದಿಂದ ಹ್ರಸ್ವ ಋಕಾರಕ್ಕೆ ರಪರವಾದ 'ಅರ 'ಎಂಬ ಗುಣ ಬಂದು 'ತರ್ತವ್ಯ 'ಎಂದು ರೂಪವಾಗುತ್ತದೆ. ಒಂದು ವೇಳೆ ದೀರ್ಘಋವರ್ಣಾಂತವಾದ 'ತೄ' ಧಾತುವನ್ನು ಇಟ್ಟುಕೊಂಡರೆ ಉಪಧಾ ಲಘು ಅಲ್ಲದ ಕಾರಣ ಗುಣ ಬರದೆ 'ತರ್ತವ್ಯ 'ಎಂಬ ರೂಪ ಸಿದ್ದಿಸುವುದಿಲ್ಲ. ಆದ್ದರಿಂದ ತರ್ತವ್ಯ ಎಂಬ ರೂಪವನ್ನು ಕೂಡಿಸಲು ಅವಶ್ಯವಾಗಿ ಅಂಗೀಕರಿಸಲೇಬೇಕಾದ ಹ್ರಸ್ವ ಋವರ್ಣಾಂತವಾದ ತೃ ಧಾತುವಿಗೆ ಘಞ್ (ಅ) ಪ್ರತ್ಯಯ ಬಂದು ಆರ ಎಂಬ ರಪರವಾದ ಆದಿ ವೃದ್ಧಿ ಬಂದು ತಾರ ಎಂದು ರೂಪ ಸಿದ್ಧಿಸುತ್ತದೆ.

ಎರಡನೆಯ ಸಮಾಧಾನ - ಅಥವಾ 'ತೄ' ಎಂಬ ದೀರ್ಘ ಋವರ್ಣಾಂತವಾದ ಧಾತುವಿಗೆ 'ಋದೋರಪ್' ಎಂದು ಅಪ್ (ಅ) ಪ್ರತ್ಯಯ ಬಂದು ಸಿದ್ದವಾದ ತರ ಶಬ್ದಕ್ಕೆ 'ಪ್ರಜ್ಞಾದಿಭ್ಯಶ್ಚ 'ಎಂಬ ಸೂತ್ರದಿಂದ ಅಣ್ ಪ್ರತ್ಯಯ ಬಂದು ಆದಿ ವೃದ್ಧಿ ಬಂದರೆ ತಾರ ಎಂಬ ರೂಪವು ಸಿದ್ದಿಸುತ್ತದೆ.

ಅಥವಾ ಣ್ಯಂತವಾದ ತೄ ಧಾತುವಿಗೆ ತಾರಯತಿ ಪುರುಷಾನನಿಷ್ಟನಿಚಯಂ ಎಂಬ ಅರ್ಥದಲ್ಲಿ ಣಿಚ್ ಬಂದು ಆದಿ ವೃದ್ಧಿ ಬಂದರೆ ತಾರ್ ಇ ಎಂದಿರುವಾಗ ಏರಚ್ ಎಂದು ಇ ಕಾರಕ್ಕೆ ಅ ಕಾರ ಬಂದರೆ ತಾರ ಎಂಬ ರೂಪವು ಸಿದ್ಧಿಸುತ್ತದೆ.

ಆಸಮತಾಂತ್ ಗಮಯತಿ ಧರ್ಮಾಧರ್ಮೌ ಪರಂಪದಂ ' ಎಂದು ಉಪಸನಾಪಾದೀಯ ಅನುವ್ಯಾಖ್ಯಾನದಲ್ಲಿ ಮತ್ತು ' ಅಥ ಕಸ್ಮಾದುಚ್ಯತೇ ಯಸ್ಮಾದುಚ್ಚಾರ್ಯಮಾಣ ಏವ ಗರ್ಭ-ಜನ್ಮ-ಜರಾ-ಮರಣ- ಸಂಸಾರ ಮಹಾಭಯಾತ್ ತಾರಯತಿ ' ಎಂಬ ಅಥರ್ವಶ್ರುತಿಯಲ್ಲಿ ಕರಣದಲ್ಲಿ ಕರ್ತೃತ್ವ ಉಪಚಾರವು ಕಂಡಿದೆ ಆದ್ದರಿಂದ ಸುಧಾದಲ್ಲಿ ತರಂತಿ ಅನೇನ ಅನಿಷ್ಟನಿಚಯಂ ಎಂದು ಹೇಳಿರುವುದು ಸ್ಪಷ್ಟವಾಗಿ ಅರ್ಥವಾಗಲಿ ಎಂಬ

ಉದ್ದೇಶದಿಂದಲೇ ಹೊರತು ' ತಾರಯತಿ ಪುರಾಷಾನ್ ಅನಿಷ್ಟಂ ನಿಚಯಂ ಎಂಬ ಅರ್ಥ ಸರಿಯಲ್ಲ, ಎಂಬ ಅರ್ಥದಲ್ಲಿ ಅಲ್ಲ.

**ವಿರೋಧ ಪರಿಹಾರ (ಓಂಕಾರ ವಿಚಾರ)**

ಪ್ರತಿಯೊಂದು ಬ್ರಹ್ಮಸೂತ್ರವೂ ಪ್ರತ್ಯೇಕವಾಗಿ ಒಂದೊಂದು ಬ್ರಹ್ಮ ವಿದ್ಯೆಯಾಗಿರುವುದರಿಂದ ಪ್ರತಿಯೊಂದು ಸೂತ್ರದ ಆದಿ ಅಂತ್ಯಗಳಲ್ಲಿ ಓಂಕಾರದ ಊಹವನ್ನು ಮಾಡಿಕೊಳ್ಳಬೇಕು. ಎಂದು ಸುಧಾದಲ್ಲಿ ಇದೆ. ಇಲ್ಲಿ ಊಹ ಎಂದರೆ ಅಧ್ಯಾಹಾರ.

ಪ್ರಶ್ನೆ- 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಅರ್ಥವಾದ ಬಲದಿಂದ ಊಹ ಮಾಡಿಕೊಳ್ಳಬೇಕೆಂಬುವುದಕ್ಕೆ ಅಧ್ಯಾಹಾರ ಮಾಡಿಕೊಳ್ಳಬೇಕು ಎಂದೇ ಅರ್ಥವಾದರೆ, ಇದಕ್ಕೆ 'ಯದಯಮೋಂಕಾರಾಥಶಬ್ದೌ ಆದಿತಃ ಕೃತವಾನ್ ' ಎಂಬ ಪೂರ್ವದಲ್ಲಿರುವ ಸುಧಾ ವಾಕ್ಯದಿಂದ ವಿರೋಧ ಬರುತ್ತದೆ. ಏಕೆಂದರೆ, ಅಲ್ಲಿ ಓಂಕಾರಾಥಶಬ್ದಗಳನ್ನು ಪ್ರಯೋಗಿಸಿದ್ದಾರೆ ಎಂದು ಹೇಳಲಾಗಿದೆ. ಪ್ರಯೋಗಿಸಲ್ಪಟ್ಟ ಪದವನ್ನು ಅಧ್ಯಾಹಾರ ಮಾಡಲ್ಪಟ್ಟದ್ದು ಎಂದು ಹೇಳಲಾಗದಷ್ಟೇ?

ಉತ್ತರ-'ಓಂಕಾರಾಥಶಬ್ದೌ ಆದಿತಃ ಕೃತವಾನ್ 'ಎಂಬ ವಾಕ್ಯಕ್ಕೆ ಓಂಕಾರಾಥ ಶಬ್ದಗಳು ಆದಿಯಲ್ಲಿವೆ ಎಂಬ ಅರ್ಥವೇ ಹೊರತು ಪ್ರಯೋಗಿಸಲ್ಪಟ್ಟಿವೆ ಎಂದು ಅರ್ಥವಲ್ಲ. ಹಾಗಾದರೆ ಕೃತವಾನ್ ಎಂದು ಏಕೆ ಹೇಳಿದರೆಂದರೆ ಓಂಕಾರಾಥ ಶಬ್ದಗಳಲ್ಲಿ ಒಂದಾದ ಅಥ ಶಬ್ದವು ಪ್ರಯೋಗಿಸಲ್ಪಟ್ಟಿದೆಯಾದ್ದರಿಂದ ಅದನ್ನು ಮನಸ್ಸಿಟ್ಟುಕೊಂಡು ಕೃತವಾನ್ ಎಂದಿದ್ದಾರೆ. ಅಥವಾ ಅಧ್ಯಾಹಾರ ಮಾಡಲ್ಪಟ್ಟ ಓಂಕಾರವೂ ಕೂಡ 'ಸ್ರವತ್ಯನೋಂಕೃತಂ' ಎಂಬ ಶ್ರೌತ ಅರ್ಥವಾದ ಲಭ್ಯವಾದುದರಿಂದ ಸೂತ್ರಕಾರರಿಗೆ ಅಭಿಮತವಾದ ಪ್ರಯುಕ್ತ ಪ್ರಯೋಗಿಸಲ್ಪಟ್ಟಂತೆಯೇ ಆಗಿದೆ ಎಂದು ಭಾವಿಸಿ ಕೃತವಾನ್ ಎಂದಿದ್ದಾರೆ.

'ತತ್ರ ತಾರಾಥ ಮೂಲತ್ವಂ' ಎಂಬ ಅನುವ್ಯಾಖ್ಯಾನ ವಾಕ್ಯದಿಂದ ಅಥ ಪದದಂತೆ ಓಂಕಾರವೂ ಸೂತ್ರಾದಿಯಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಯುತ್ತದೆ. ಎಂದು ಆಕ್ಷೇಪಿಸಬಹುದು ಆದರೆ ಅದರ ಅಭಿಪ್ರಾಯ ಹೀಗೆ

- ಸೂತ್ರಕಾರರು ಅಥಾತೋ ಬ್ರಹ್ಮ ಜಿಜ್ಞಾಸಾ ಎಂಬುದಾಗಿ ಮಾತ್ರ ಸೂತ್ರವನ್ನು ಹೇಳಿದ್ದರೂ ಅಧ್ಯಯನ ಮಾಡುವವರು ಅಗ್ನಿಮೀಳೇ ಮುಂತಾದ ಸೂಕ್ತಗಳನ್ನು ಆದಿ ಅಂತ್ಯಗಳಲ್ಲಿ ಓಂಕಾರವನ್ನುಚ್ಚರಿಸಿ ಪಠಿಸುವಂತೆ ಸೂತ್ರಗಳನ್ನು ಕೂಡ ಆದ್ಯಂತಗಳಲ್ಲಿ ಓಂಕಾರದೊಂದಿಗೆ ಉಚ್ಚರಿಸುತ್ತಾರೆ. ಎಂಬ ಅಭಿಪ್ರಾಯದಿಂದ ಆಚಾರ್ಯರು ತತ್ರ ತಾರಾಥ ಮೂಲತ್ವಂ ಎಂದು ಹೇಳಿದ್ದಾರೆ. ಹೊರತು ಅಥ ಪದಕ್ಕೆ ಸಮಾನವಾಗಿ ಸೂತ್ರಕಾರರಿಂದ ಪ್ರಯೋಗಿಸಲ್ಪಟ್ಟಿದೆ ಎಂಬ ಅಭಿಪ್ರಾಯದಿಂದಲ್ಲ. ಆದ್ದರಿಂದಲೇ ಭಾಷ್ಯದಲ್ಲಿ ಆರಂಭದಲ್ಲಿ ಅಥ ಶಬ್ದಕ್ಕೆ ಮಾತ್ರ ವ್ಯಾಖ್ಯಾನ ಮಾಡಿದ್ದಾರೆ. ಮತ್ತು ಅಥಾತಃ ಶಬ್ದ ಪೂರ್ವಾಣಿ ...... ತಾವೇವಾದೌ ಪ್ರಯುಂಜತೇ ಎಂಬ ಪ್ರಮಾಣವನ್ನು ಉದಾಹರಿಸಿದ್ದಾರೆ.

ಅಥವಾ ಚಂದ್ರಿಕಾದಲ್ಲಿ ಹೇಳಿದಂತೆ, ಸುಧಾ ವಾಕ್ಯಕ್ಕೆ ಇನ್ನೊಂದು ಅರ್ಥ ಹೇಳಬಹುದು. ಅಥ ಶಬ್ದದಂತೆ ಓಂಕಾರವೂ ಆದಿಯಲ್ಲಿ ಪ್ರಯೋಗಿಸಲ್ಪಟ್ಟಿದೆ ನಿಜ. ಆದರೆ ಆ ಓಂಕಾರವು ಸ್ರವತಿ ಇತ್ಯಾದಿ ಶ್ರುತಿ ಬಲದಿಂದ ಅಧ್ಯಾಹಾರ ಮಾಡಲ್ಪಟ್ಟ ಓಂಕಾರವಲ್ಲ. ಓಂಕಾರಶ್ಚ ಅಥ ಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್ (ಓಂಕಾರ ಮತ್ತು ಅಥ ಶಬ್ದಗಳು ಮೊದಲಿಗೆ ಪ್ರಯೋಗಿಸಲ್ಪಡುತ್ತವೆ) ಎಂಬ ಸ್ಮೃತಿ ಸಿದ್ಧವಾದ ಓಂಕಾರವಾಗಿದೆ ಎಂದು.

ಸೂತ್ರಕಾರರು ಓಂಕಾರವನ್ನು ಸೂತ್ರದ ಆದಿಯಲ್ಲಿ ಸೇರಿಸಿದ್ದಾರೆ. ಆದ್ದರಿಂದ ಕೃತವಾನ್ ಎಂದು ಹೇಳಿದ್ದು ಸರಿ. ಇಲ್ಲಿರುವ ಅಧ್ಯಾಹಾರ ಎಂಬ ಮಾತಿಗೆ ಇದು ಶ್ರುತಿ ಸಿದ್ಧವಾದ ಅರ್ಥವಾದ ಮೂಲಕ ಎಂಬ ಅಭಿಪ್ರಾಯವನ್ನಿಟ್ಟುಕೊಳ್ಳಬೇಕೆಂದು ಕೆಲವರು ವಿರೋಧ ಪರಿಹರಿಸಿದ್ದಾರೆ.

ವಸ್ತುತಸ್ತು ಸೂತ್ರಕಾರರು ಓಂಕಾರವನ್ನು ಆದಿಯಲ್ಲಿ ಉಚ್ಚರಿಸಿದ್ದಾರೆಯೇ ಹೊರತು ಅಥಾತಃ ಶಬ್ದಗಳಂತೆ ಸೇರಿಸಿಲ್ಲ.

**'ಅರ್ಥವಾದ ಸಮರ್ಥಾತ್' ಎಂಬುದು ಸಮಂಜಸ.**

'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾತ್ ಚ ವಿಶೀರ್ಯತೇ ' ಎಂಬ ಶ್ರುತಿಯ ಅರ್ಥವಾದ ಬಲದಿಂದ ಎಲ್ಲ ಬ್ರಹ್ಮ ವಿದ್ಯೆ (ವೇದ

ಮೊದಲಾದುವು) ಗಳ ಆದ್ಯಂತದಲ್ಲಿ ಓಂಕಾರವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸುಧಾದಲ್ಲಿ ಹೇಳಿದ್ದಾರೆ.

ಆದರೆ 'ಸ್ರವತ್ಯನೋಂಕೃತಂ' ಎಂಬುದರ ಪೂರ್ವಾರ್ಧವಾದ 'ಬ್ರಹ್ಮಣ: ಪ್ರಣವಂ ಕುರ್ಯಾತ್ ಆದಾವಂತೇ ಚ ಸರ್ವದಾ' ಎಂಬ ಶಿಕ್ಷಾವಚನದ ವಿಧಿಸಾಮರ್ಥ್ಯದಿಂದಲೇ ಓಂಕಾರವನ್ನು ಬ್ರಹ್ಮವಿದ್ಯೆಗಳ ಆದ್ಯಂತಗಳಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಿದ್ಧವಾಗುವಾಗ ಅರ್ಥವಾದ ಸಾಮಂಜಸ್ಯಾತ್ ಎಂಬುದು ಅಸಮಂಜಸ. ಕುಮಾರ ಸಂಭವದ ವ್ಯಾಖ್ಯಾನದಲ್ಲೂ 'ಬ್ರಹ್ಮಣಃ' ಎಂಬ ವಾಕ್ಯವು ಶಿಕ್ಷಾವಚನವೆಂದೇ ಹೇಳಲಾಗಿದೆ ಆದ್ದರಿಂದ ಹಾಗೇಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ.

ಆ ಶಿಕ್ಷಾವಚನವು ಸ್ವಯಂ ವೇದವಲ್ಲ. ಈ 'ಸ್ರವತ್ಯನೋಂಕೃತಂ' ಎಂಬ ಅರ್ಥವಾದವನ್ನು ಆಧರಿಸಿಕೊಂಡು ಶಿಕ್ಷಾಗ್ರಂಥಕಾರರು ಸ್ವಯಂ ರಚಿಸಿದ ವಾಕ್ಯ. ಆದ್ದರಿಂದ ಪೌರುಷೇಯವಾದ ಅದರ ಆಧಾರವನ್ನಿಟ್ಟುಕೊಂಡು ಓಂಕಾರದ ಅಧ್ಯಾಹಾರವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಅರ್ಥವಾದದ 'ಸ್ರವತ್ಯನೋಂಕೃತಂ' ಎಂಬ ಶ್ರುತಿಯ ಆಧಾರದಿಂದಲೇ ಓಂಕಾರದ ಅಧ್ಯಾಹಾರವನ್ನು ಸುಧಾಕಾರರು ತಿಳಿಸಿದ್ದಾರೆ.

**ಜಿಜ್ಞಾಸಾ ಶಬ್ದಾರ್ಥ (ವಿರೋಧ ಪರಿಹಾರ)**

' ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಸೂತ್ರದಲ್ಲಿರುವ ಜಿಜ್ಞಾಸಾ ಶಬ್ದವು ಯುಕ್ತ್ಯನುಸಂಧಾನ ರೂಪವಾದ ವಿಚಾರ - ಮೀಮಾಂಸಾ - ಮನನ ಎಂಬರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ಸುಧೆಯಲ್ಲಿ ಜಯತೀರ್ಥರು ಹೇಳಿದ್ದಾರೆ. ಆದರೆ ಸೂತ್ರಭಾಷ್ಯಟೀಕಾ - ತತ್ವ ಪ್ರಕಾಶಿಕಾದಲ್ಲಿ ಶ್ರವಣಾದಿರೂಪವಾದದ್ದು ಜಿಜ್ಞಾಸೆ ಎಂಬ ವಾಕ್ಯವಿದೆ. ಆದ್ದರಿಂದ ಇವೆರಡಕ್ಕೆ ಪರಸ್ಪರ ವಿರೋಧವಿದೆಯೆಂದು ತೋರುತ್ತದೆ. ಈ ವಿರೋಧವನ್ನು ಚಂದ್ರಿಕಾದಲ್ಲಿ ನಿರಾಕರಿಸಲಾಗಿದೆ ಎಂದು ಪರಿಮಳದಲ್ಲಿ ಹೇಳಿದ್ದಾರೆ. ಚಂದ್ರಿಕಾದಲ್ಲಿ ವಿರೋಧವು ಹೀಗೆ ಪರಿಹೃತವಾಗಿದೆ.

೧) ಸುಧೆಯಲ್ಲಿ ಹೇಳಿರುವಂತೆ ಜಿಜ್ಞಾಸೆಯೆಂದರೆ ವಿಚಾರ - ಮನನ ವೆಂದೇ ಇಟ್ಟುಕೊಳ್ಳಬೇಕು ಏಕೆಂದರೆ ಶ್ರವಣಾದಿರೂಪ ಜಿಜ್ಞಾಸೆಯನ್ನು ಪ್ರಾರಂಭಿಸಲು ನ್ಯಾಯ ನಿಬಂಧನಾತ್ಮಕವಾದ ಈ ಶಾಸ್ತ್ರದ ಆವಶ್ಯಕತೆ ಯಿರುವುದಿಲ್ಲ. ನ್ಯಾಯಗಳ ಅನುಸಂಧಾನವಿಲ್ಲದೆಯೂ ಕೇವಲ ಗುರುವಾಕ್ಯೋಚ್ಚಾರಣಾನೂಚ್ಚಾರಣ ರೂಪವಾದ ಶ್ರವಣವನ್ನು ಪ್ರಾರಂಭಿ ಸಬಹುದಾದ್ದರಿಂದ ಶ್ರವಣ ರೂಪ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ ಮಾತ್ರಕ್ಕೆ ಈ ನ್ಯಾಯ ನಿಬಂಧನಾತ್ಮಕ ಶಾಸ್ತ್ರದ ಆರಂಭಣೀಯತ್ವವನ್ನು ಸಮರ್ಥಿಸದಂತಾಗುವುದಿಲ್ಲ. ಮನನ ರೂಪವಾದ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದಾಗ, ಆ ಮನನವು ಯುಕ್ತ್ಯನುಸಂಧಾನವಿಲ್ಲದೆ ಕೂಡುವುದಿಲ್ಲವಾದ್ದರಿಂದ ಶಾಸ್ತ್ರಾರಂಭಣೀಯ ತ್ವವು ಸಮರ್ಥಿತವಾಗುತ್ತದೆ. ಆದ್ದರಿಂದ ಜಿಜ್ಞಾಸೆಯು ವಿಚಾರರೂಪವೇ ಶ್ರವಣ ರೂಪವಲ್ಲ 'ಶ್ರವಣಾದಿರೂಪಾ ಜಿಜ್ಞಾಸಾ' ಎಂಬ ತತ್ವ ಪ್ರಕಾಶಿಕಾದ ವಾಕ್ಯದಲ್ಲಿ 'ಶ್ರವಣಾದಿ ರೂಪ' ಎಂಬ ಪದವು ಅತದ್ಗುಣಸಂವಿಜ್ಞಾನ ಬಹುವ್ರೀಹಿ ಸಮಾಸದಿಂದ ನಿಷ್ಪನ್ನವಾಗಿದೆ ಆದ್ದರಿಂದ ಶ್ರವಣವೇ ಮೊದಲಾಗಿ ಉಳ್ಳ ಮನನವೇ ಜಿಜ್ಞಾಸೆ ಹೊರತು ಶ್ರವಣವಲ್ಲವೆಂದು ಗೊತ್ತಾಗುತ್ತದೆ. ಆದ್ದರಿಂದಲೇ ಅಲ್ಲಿಯೇ ಮುಂದೆ ವಿಚಾರೇಪಿ ತತ್ರ ಪ್ರಯೋಗಾತ್ ಎಂದು ವಿಚಾರ ಎಂಬ ಅರ್ಥದಲ್ಲಿ ಜಿಜ್ಞಾಸಾ ಶಬ್ದವಿದೆ ಎಂದು ತಿಳಿಸಿದ್ದಾರೆ. ಆದ್ದರಿಂದ ಪರಸ್ಪರ ವಿರೋಧವಿಲ್ಲ.

೨) ಅಥವಾ 'ಆತ್ಮಾ ವಾಽರೇ ದ್ರಷ್ಟವ್ಯ: ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಶ್ರವಣ ಮನನ ನಿದಿಧ್ಯಾಸನ (ಧ್ಯಾನ) ಗಳಿಂದ ಪರಮಾತ್ಮನ ದರ್ಶನವಾಗುವುದೆಂದು ಹೇಳಿರುವುದರಿಂದ ಶ್ರವಣ ಮತ್ತು ನಿದಿಧ್ಯಾಸನವನ್ನು ಯಾವ ರೀತಿಯಲ್ಲಿ ಮುಮುಕ್ಷುವು ಮಾಡಬೇಕೋ ಹಾಗೆಯೇ ಮನನವನ್ನೂ ಮಾಡಬೇಕು ಎಂದು ಹೇಳಲು (ಮನನವೂ ಕರ್ತ್ಯವ್ಯವೆಂಬ ವಿಷಯಕ್ಕೆ ದೃಷ್ಟಾಂತವಾಗಿ) ಶ್ರವಣಾದಿ ರೂಪ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ್ದಾರೆ. ಆದ್ದರಿಂದರಲೂ ವಿರೋಧವಲ್ಲ.

೩) ಅಥವಾ ನಿದಿಧ್ಯಾಸನವನ್ನು ಮಾಡಬೇಕೆಂದು ಹೇಳದಿದ್ದರೆ ನಿದಿಧ್ಯಾಸನಕ್ಕೆ ಅಂಗವಾದ ಮನನವನ್ನು ಮಾಡುವ ಆವಶ್ಯಕತೆ ಇರುವುದಿಲ್ಲ 'ನಿಶ್ಚಿತತತ್ವಸ್ಯ ಚ ಧ್ಯಾನಂ' (ಚೆನ್ನಾಗಿ ವಿಷಯವನ್ನು ವಿಮರ್ಶಿಸಿ ತಿಳಿದಮೇಲೆಯೇ ಧ್ಯಾನವಾದ್ದರಿಂದ ಮನನವೂ ಧ್ಯಾನದ ಅಂಗವಾಗಿದೆ) ಆದ್ದರಿಂದ ಈ ಬ್ರಹ್ಮ ಮೀಮಾಂಸಾ ಶಾಸ್ತ್ರವು ಆರಂಭಣೀಯ ವಾಗಬೇಕಾದರೆ ನಿದಿಧ್ಯಾಸನವೂ ಕರ್ತ್ಯವ್ಯವೆಂದು ಅಂಗೀಕರಿಸಬೇಕು.

ಹಾಗೂ ವೇದೋಪನಿಷತ್ತುಗಳ ಪ್ರತಿವಾಕ್ಯಗಳಿಗೆ 'ಈ ವಾಕ್ಯಕ್ಕೆ ಇದು ಅರ್ಥ' ಎಂದು ಗೊತ್ತಿಲ್ಲದಿದ್ದರೆ. ಈ ವಾಕ್ಯದ ಅರ್ಥವು ಇದೋ ಅದೋ ಎಂಬ ಸಂಶಯವನ್ನು ನಿವಾರಿಸುವ ಸಲುವಾಗಿ ವಿಚಾರ ಮಾಡುವುದೇ ಅನುಪಯುಕ್ತವಾಗುತ್ತದೆ. ಆದ್ದರಿಂದ ಶಾಸ್ತ್ರಾರಂಭಣೀಯತ್ವಕ್ಕೆ ಶ್ರವಣ (ಈ ವಾಕ್ಯಕ್ಕೆ ಈ ಅರ್ಥ ಎಂದು ತಿಳಿಯುವಿಕೆ) ಕರ್ತ್ಯವ್ಯತ್ವವೂ ಹೇತುವಾಗಿದೆ. ಆದ್ದರಿಂದ ಶಾಸ್ತ್ರಾರಂಭಣೀಯತ್ವಕ್ಕೆ ಶ್ರವಣ ಕರ್ತ್ಯವ್ಯತಾ, ಮನನ ಕರ್ತ್ಯವ್ಯತಾ ಹಾಗೂ ನಿದಿಧ್ಯಾಸನ ಕರ್ತ್ಯವ್ಯತೆಗಳು ಮೂರೂ ಕಾರಣವಾಗಿರುವುದರಿಂದ ತತ್ವ ಪ್ರಕಾಶಿಕಾದಲ್ಲಿ ಟೀಕಾಕೃತ್ಪಾದರು 'ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯಾ' ಎಂದು ಹೇಳಿದ್ದಾರೆ ಸುಧಾದಲ್ಲಿ ಮನನ ಮಾಡಬೇಕೆಂದು ಹೇಳಿದ್ದಾರೆ. ಇವೆರಡಕ್ಕೂ ಪರಸ್ಪರ ವಿರೋಧವಿಲ್ಲ.

೪) ಅಥವಾ ಸೂತ್ರಭಾಷ್ಯ ಟೀಕೆಯಲ್ಲಿ ಶ್ರವಣಾದ್ಯನು ಗತೋಪಾಸನೆಯು ಕರ್ತ್ಯವ್ಯವೆಂದಭಿಪ್ರಾಯದಿಂದ ಶ್ರವಣಾದಿ ರೂಪ ಜಿಜ್ಞಾಸಾ ಎಂದು ಹೇಳಿದ್ದಾರೆ. ಸುಧಾದಲ್ಲಿ ಕೇವಲ ಮನನವು ಕರ್ತ್ಯವವೆಂದು ಸಿದ್ಧವಾದರೆ ಜಿಜ್ಞಾಸಾ ಶಾಸ್ತ್ರಾರಂಭಣೀಯತ್ವವು ಸಮರ್ಥಿತ ವಾಗುವುದೆಂಬ ಅಭಿಪ್ರಾಯದಿಂದ ಮಾತ್ರ ಜಿಜ್ಞಾಸೆಯೆಂದರೆ ವಿಚಾರ ಎಂದು ಹೇಳಿದ್ದಾರೆ. ಆದ್ದರಿಂದಲೂ ವಿರೋಧವಿಲ್ಲ.

**ಭಾಷ್ಯ ಟೀಕಾ- ಸುಧಾಗಳಿಗೆ ವಿರೋಧವಿಲ್ಲ**

ಶಾಸ್ತ್ರ ಪ್ರಾರಂಭಕ್ಕೆ ಬೇಕಾದ ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳು ಈ ಶಾಸ್ತ್ರದಲ್ಲಿಲ್ಲ ಎಂದು ಜಿಜ್ಞಾಸಾಧಿಕರಣದ ಪೂರ್ವಪಕ್ಷ ಸಂದರ್ಭದಲ್ಲಿ - ಜೀವನು ಸಿದ್ಧಾಂತರೀತ್ಯಾ ಸ್ವಪ್ರಕಾಶ (ಸಾಕ್ಷಿವೇದ್ಯ) ಅಥವಾ ತಾರ್ಕಿಕರ ಪ್ರಕಾರ ಮನಸ್ಸಿನಂದ ವೇದ್ಯ, ಅಥವಾ ಪ್ರಾಭಾಕರರ

ಪ್ರಕಾರ ಸ್ವಪ್ರಕಾಶ ಜ್ಞಾನಾಶ್ರಯನಾದ್ದರಿಂದ ಸ್ವಪ್ರಕಾಶ, ಹೀಗೆ ಎಲ್ಲರ ಮತದ ಪ್ರಕಾರವೂ ಒಂದಲ್ಲ ಒಂದು ರೀತಿಯಲ್ಲಿ ಅಹಂ ಎಂಬ ಜ್ಞಾನಕ್ಕೆ ವಿಷಯನಾಗಿರುವುದರಿಂದ (ಮೊದಲೇ ಜ್ಞಾತನಾಗಿರುವುದರಿಂದ) ಶಾಸ್ತ್ರಕ್ಕೆ ವಿಷಯನಾಗುವುದಿಲ್ಲವೆಂದು ಸುಧಾದಲ್ಲಿ ಹೇಳಿದ್ದಾರೆ.

ನ್ಯಾಯವಿವರಣದಲ್ಲಿ ಸಿದ್ಧಾಂತರೀತ್ಯಾ ಸ್ವಪ್ರಕಾಶತಯಾ ಆತ್ಮನು ಸಿದ್ಧನಾಗುತ್ತಾನೆಂದು ಹೇಳಿದ್ದರೂ ಅದನ್ನು ಉಪಲಕ್ಷಣವನ್ನಾಗಿಟ್ಟು ಕೊಂಡು ಸುಧಾದಲ್ಲಿ ಸ್ವಪ್ರಕಾಶ ಜ್ಞಾನಾಶ್ರಯತ್ವ ಮಾನಸ ವೇದ್ಯತ್ವ ಪಕ್ಷಗಳನ್ನು ತೋರಿಸಿದ್ದಾರೆ. ಆದ್ದರಿಂದಲೇ ನ್ಯಾಯ ವಿವರಣ ಟೀಕೆಯಲ್ಲೂ ಜಯತೀರ್ಥರು ಸ್ವಪ್ರಕಾಶತ್ವವು ಉಳಿರಡು ಪಕ್ಷಗಳಿಗೆ ಉಪಲಕ್ಷಣವೆಂದು ಹೇಳಿದ್ದಾರೆ.

ಆದರೆ ತತ್ವ ಪ್ರಕಾಶಿಕಾದಲ್ಲಿ ಕೇವಲ ಸ್ವಪ್ರಕಾಶತ್ವೇನ ಆತ್ಮ ಸಿದ್ಧನಾಗುತ್ತಾನೆಂದು ಸಿದ್ಧಾಂತರೀತ್ಯಾ ಆತ್ಮ ಸಿದ್ಧಿಯಾಗುವಾಗ ಉಳಿದೆರಡು ಪಕ್ಷಗಳನ್ನು ಉಪಲಕ್ಷಣವನ್ನಾಗಿಟ್ಟುಕೊಳ್ಳುವ ಅವಶ್ಯಕತೆಯಿಲ್ಲ. ಒಂದು ಪಕ್ಷ ಉಪಲಕ್ಷಣವನ್ನಾಗಿಟ್ಟುಕೊಂಡರೂ ಶಬ್ದತಃ ಗ್ರಹಣ ಮಾಡುವ ಅವಶ್ಯಕತೆಯಿಲ್ಲವೆಂದು ವಸ್ತುಸ್ಥಿತಿಯನ್ನು ಹೇಳಲು ಸ್ವಪ್ರಕಾಶತ್ವೇನ ಆತ್ಮನು ಸಿದ್ಧನಾಗುತ್ತಾನೆ ಎಂದು ತಿಳಿಸಿದ್ದಾರೆ. ಹೀಗೆ ತತ್ವಪ್ರಕಾಶಿಕಾ ಹಾಗೂ ಸುಧಾಗಳಿಗೆ ಪರಸ್ಪರವಿರೋಧವಿಲ್ಲ.

**ಊಯತೇ: ಎಂಬ ಪ್ರಯೋಗಸಾಧು.**

''ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಂ '' ಓ ತತ್ವವಾಚಿಯಾದ ಓಂಕಾರವು ಗುಣ ಪೂರ್ಣತ್ವವನ್ನು ಹೇಳುತ್ತದೆ ಎಂದು ಆಚಾರ್ಯರು ಹೇಳಿದ್ದಾರೆ ಇಲ್ಲಿ ಗುಣ+ಓತತಾಂ ಎಂಬಲ್ಲಿ ವೃದ್ಧಿ ಆದೇಶ ಬಂದು ಗುಣೌತತಾಂ ಎಂದು ಪ್ರಯೋಗ ಮಾಡಬೇಕಾಗಿತ್ತು ಎಂಬ ಪ್ರಶ್ನೆಗೆ ಸುಧಾದಲ್ಲಿ ಊಯತೇ: ರೂಪಮೇತತ್ ಇದು ಊಯತಿಯ ರೂಪ ಎಂದಿದ್ದಾರೆ. ಅಂದರೆ ಗುಣ+ಓತತಾ ಎಂಬುದಾಗಿ ಓತತಾ ಶಬ್ದವನ್ನು ಇಟ್ಟುಕೊಳ್ಳಬಾರದು. ಊತತಾ ಶಬ್ದವನ್ನು ಇಟ್ಟುಕೊಳ್ಳಬೇಕು. ಆಗ ಗುಣ ಆದೇಶ ಬಂದು ಗುಣೋತತಾಂ ಎಂದು ಪ್ರಯೋಗಿಸಿದ್ದು ಸಮಂಜಸವಾಗುತ್ತದೆ ಎಂದರ್ಥ.

೩) ಅಥವಾ ನಿದಿಧ್ಯಾಸನವನ್ನು ಮಾಡಬೇಕೆಂದು ಹೇಳದಿದ್ದರೆ ನಿದಿಧ್ಯಾಸನಕ್ಕೆ ಅಂಗವಾದ ಮನನವನ್ನು ಮಾಡುವ ಆವಶ್ಯಕತೆ ಇರುವುದಿಲ್ಲ 'ನಿಶ್ಚಿತತತ್ವಸ್ಯ ಚ ಧ್ಯಾನಂ' (ಚೆನ್ನಾಗಿ ವಿಷಯವನ್ನು ವಿಮರ್ಶಿಸಿ ತಿಳಿದಮೇಲೆಯೇ ಧ್ಯಾನವಾದ್ದರಿಂದ ಮನನವೂ ಧ್ಯಾನದ ಅಂಗವಾಗಿದೆ) ಆದ್ದರಿಂದ ಈ ಬ್ರಹ್ಮ ಮೀಮಾಂಸಾ ಶಾಸ್ತ್ರವು ಆರಂಭಣೀಯ ವಾಗಬೇಕಾದರೆ ನಿದಿಧ್ಯಾಸನವೂ ಕರ್ತ್ಯವ್ಯವೆಂದು ಅಂಗೀಕರಿಸಬೇಕು.

ಹಾಗೂ ವೇದೋಪನಿಷತ್ತುಗಳ ಪ್ರತಿವಾಕ್ಯಗಳಿಗೆ 'ಈ ವಾಕ್ಯಕ್ಕೆ ಇದು ಅರ್ಥ' ಎಂದು ಗೊತ್ತಿಲ್ಲದಿದ್ದರೆ. ಈ ವಾಕ್ಯದ ಅರ್ಥವು ಇದೋ ಅದೋ ಎಂಬ ಸಂಶಯವನ್ನು ನಿವಾರಿಸುವ ಸಲುವಾಗಿ ವಿಚಾರ ಮಾಡುವುದೇ ಅನುಪಯುಕ್ತವಾಗುತ್ತದೆ. ಆದ್ದರಿಂದ ಶಾಸ್ತ್ರಾರಂಭಣೀಯತ್ವಕ್ಕೆ ಶ್ರವಣ (ಈ ವಾಕ್ಯಕ್ಕೆ ಈ ಅರ್ಥ ಎಂದು ತಿಳಿಯುವಿಕೆ) ಕರ್ತ್ಯವ್ಯತ್ವವೂ ಹೇತುವಾಗಿದೆ. ಆದ್ದರಿಂದ ಶಾಸ್ತ್ರಾರಂಭಣೀಯತ್ವಕ್ಕೆ ಶ್ರವಣ ಕರ್ತ್ಯವ್ಯತಾ, ಮನನ ಕರ್ತ್ಯವ್ಯತಾ ಹಾಗೂ ನಿದಿಧ್ಯಾಸನ ಕರ್ತ್ಯವ್ಯತೆಗಳು ಮೂರೂ ಕಾರಣವಾಗಿರುವುದರಿಂದ ತತ್ವ ಪ್ರಕಾಶಿಕಾದಲ್ಲಿ ಟೀಕಾಕೃತ್ಪಾದರು 'ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯಾ' ಎಂದು ಹೇಳಿದ್ದಾರೆ ಸುಧಾದಲ್ಲಿ ಮನನ ಮಾಡಬೇಕೆಂದು ಹೇಳಿದ್ದಾರೆ. ಇವೆರಡಕ್ಕೂ ಪರಸ್ಪರ ವಿರೋಧವಿಲ್ಲ.

೪) ಅಥವಾ ಸೂತ್ರಭಾಷ್ಯ ಟೀಕೆಯಲ್ಲಿ ಶ್ರವಣಾದ್ಯನು ಗತೋಪಾಸನೆಯು ಕರ್ತ್ಯವ್ಯವೆಂದಭಿಪ್ರಾಯದಿಂದ ಶ್ರವಣಾದಿ ರೂಪ ಜಿಜ್ಞಾಸಾ ಎಂದು ಹೇಳಿದ್ದಾರೆ. ಸುಧಾದಲ್ಲಿ ಕೇವಲ ಮನನವು ಕರ್ತ್ಯವವೆಂದು ಸಿದ್ಧವಾದರೆ ಜಿಜ್ಞಾಸಾ ಶಾಸ್ತ್ರಾರಂಭಣೀಯತ್ವವು ಸಮರ್ಥಿತ ವಾಗುವುದೆಂಬ ಅಭಿಪ್ರಾಯದಿಂದ ಮಾತ್ರ ಜಿಜ್ಞಾಸೆಯೆಂದರೆ ವಿಚಾರ ಎಂದು ಹೇಳಿದ್ದಾರೆ. ಆದ್ದರಿಂದಲೂ ವಿರೋಧವಿಲ್ಲ.

**ಭಾಷ್ಯ ಟೀಕಾ- ಸುಧಾಗಳಿಗೆ ವಿರೋಧವಿಲ್ಲ**

ಶಾಸ್ತ್ರ ಪ್ರಾರಂಭಕ್ಕೆ ಬೇಕಾದ ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳು ಈ ಶಾಸ್ತ್ರದಲ್ಲಿಲ್ಲ ಎಂದು ಜಿಜ್ಞಾಸಾಧಿಕರಣದ ಪೂರ್ವಪಕ್ಷ ಸಂದರ್ಭದಲ್ಲಿ - ಜೀವನು ಸಿದ್ಧಾಂತರೀತ್ಯಾ ಸ್ವಪ್ರಕಾಶ (ಸಾಕ್ಷಿವೇದ್ಯ) ಅಥವಾ ತಾರ್ಕಿಕರ ಪ್ರಕಾರ ಮನಸ್ಸಿನಂದ ವೇದ್ಯ, ಅಥವಾ ಪ್ರಾಭಾಕರರ

ಪ್ರಕಾರ ಸ್ವಪ್ರಕಾಶ ಜ್ಞಾನಾಶ್ರಯನಾದ್ದರಿಂದ ಸ್ವಪ್ರಕಾಶ, ಹೀಗೆ ಎಲ್ಲರ ಮತದ ಪ್ರಕಾರವೂ ಒಂದಲ್ಲ ಒಂದು ರೀತಿಯಲ್ಲಿ ಅಹಂ ಎಂಬ ಜ್ಞಾನಕ್ಕೆ ವಿಷಯನಾಗಿರುವುದರಿಂದ (ಮೊದಲೇ ಜ್ಞಾತನಾಗಿರುವುದರಿಂದ) ಶಾಸ್ತ್ರಕ್ಕೆ ವಿಷಯನಾಗುವುದಿಲ್ಲವೆಂದು ಸುಧಾದಲ್ಲಿ ಹೇಳಿದ್ದಾರೆ.

ನ್ಯಾಯವಿವರಣದಲ್ಲಿ ಸಿದ್ಧಾಂತರೀತ್ಯಾ ಸ್ವಪ್ರಕಾಶತಯಾ ಆತ್ಮನು ಸಿದ್ಧನಾಗುತ್ತಾನೆಂದು ಹೇಳಿದ್ದರೂ ಅದನ್ನು ಉಪಲಕ್ಷಣವನ್ನಾಗಿಟ್ಟು ಕೊಂಡು ಸುಧಾದಲ್ಲಿ ಸ್ವಪ್ರಕಾಶ ಜ್ಞಾನಾಶ್ರಯತ್ವ ಮಾನಸ ವೇದ್ಯತ್ವ ಪಕ್ಷಗಳನ್ನು ತೋರಿಸಿದ್ದಾರೆ. ಆದ್ದರಿಂದಲೇ ನ್ಯಾಯ ವಿವರಣ ಟೀಕೆಯಲ್ಲೂ ಜಯತೀರ್ಥರು ಸ್ವಪ್ರಕಾಶತ್ವವು ಉಳಿರಡು ಪಕ್ಷಗಳಿಗೆ ಉಪಲಕ್ಷಣವೆಂದು ಹೇಳಿದ್ದಾರೆ.

ಆದರೆ ತತ್ವ ಪ್ರಕಾಶಿಕಾದಲ್ಲಿ ಕೇವಲ ಸ್ವಪ್ರಕಾಶತ್ವೇನ ಆತ್ಮ ಸಿದ್ಧನಾಗುತ್ತಾನೆಂದು ಸಿದ್ಧಾಂತರೀತ್ಯಾ ಆತ್ಮ ಸಿದ್ಧಿಯಾಗುವಾಗ ಉಳಿದೆರಡು ಪಕ್ಷಗಳನ್ನು ಉಪಲಕ್ಷಣವನ್ನಾಗಿಟ್ಟುಕೊಳ್ಳುವ ಅವಶ್ಯಕತೆಯಿಲ್ಲ. ಒಂದು ಪಕ್ಷ ಉಪಲಕ್ಷಣವನ್ನಾಗಿಟ್ಟುಕೊಂಡರೂ ಶಬ್ದತಃ ಗ್ರಹಣ ಮಾಡುವ ಅವಶ್ಯಕತೆಯಿಲ್ಲವೆಂದು ವಸ್ತುಸ್ಥಿತಿಯನ್ನು ಹೇಳಲು ಸ್ವಪ್ರಕಾಶತ್ವೇನ ಆತ್ಮನು ಸಿದ್ಧನಾಗುತ್ತಾನೆ ಎಂದು ತಿಳಿಸಿದ್ದಾರೆ. ಹೀಗೆ ತತ್ವಪ್ರಕಾಶಿಕಾ ಹಾಗೂ ಸುಧಾಗಳಿಗೆ ಪರಸ್ಪರವಿರೋಧವಿಲ್ಲ.

**ಊಯತೇ: ಎಂಬ ಪ್ರಯೋಗಸಾಧು.**

''ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಂ '' ಓ ತತ್ವವಾಚಿಯಾದ ಓಂಕಾರವು ಗುಣ ಪೂರ್ಣತ್ವವನ್ನು ಹೇಳುತ್ತದೆ ಎಂದು ಆಚಾರ್ಯರು ಹೇಳಿದ್ದಾರೆ ಇಲ್ಲಿ ಗುಣ+ಓತತಾಂ ಎಂಬಲ್ಲಿ ವೃದ್ಧಿ ಆದೇಶ ಬಂದು ಗುಣೌತತಾಂ ಎಂದು ಪ್ರಯೋಗ ಮಾಡಬೇಕಾಗಿತ್ತು ಎಂಬ ಪ್ರಶ್ನೆಗೆ ಸುಧಾದಲ್ಲಿ ಊಯತೇ: ರೂಪಮೇತತ್ ಇದು ಊಯತಿಯ ರೂಪ ಎಂದಿದ್ದಾರೆ. ಅಂದರೆ ಗುಣ+ಓತತಾ ಎಂಬುದಾಗಿ ಓತತಾ ಶಬ್ದವನ್ನು ಇಟ್ಟುಕೊಳ್ಳಬಾರದು. ಊತತಾ ಶಬ್ದವನ್ನು ಇಟ್ಟುಕೊಳ್ಳಬೇಕು. ಆಗ ಗುಣ ಆದೇಶ ಬಂದು ಗುಣೋತತಾಂ ಎಂದು ಪ್ರಯೋಗಿಸಿದ್ದು ಸಮಂಜಸವಾಗುತ್ತದೆ ಎಂದರ್ಥ.

ಇಲ್ಲಿ ಊಯತೇ: ರೂಪಂ ಎಂಬ ಮಾತಿಗೆ ಏನು ಅರ್ಥ? ವೇಞ್ ( ತಂತುಸಂತಾನೇ) ಎಂಬ ಧಾತುವಿನ ರೂಪ ಎಂದು ಅಭಿಪ್ರಾಯವಿದ್ದರೆ ವಯತೇ: ಎಂದು ನಿರ್ದೇಶಿಸಬೇಕಾಗಿತ್ತು. ಊಯೀ(ತಂತುಸಂತಾನೇ) ಎಂಬ ಧಾತು ಅಭಿಪ್ರೇತವಾಗಿದ್ದ ಪಕ್ಷದಲ್ಲಿ ಅದು ಆತ್ಮನೇಪದಿ ಧಾತುವಾದ್ದರಿಂದ ತಿಪ್‌ನಿಂದ ನಿರ್ದೇಶ ಅಂದರೆ ಊಯತೇ: ಎಂಬ ನಿರ್ದೇಶ ಸರಿಯಲ್ಲ . ಮತ್ತು ಊಯತಿ ಎಂಬಲ್ಲಿರುವ ತಿಪ್ ಕರ್ತ್ರರ್ಥದಲ್ಲಿ ಬಂದಿರುವ ಲಕಾರದ ಆದೇಶವಲ್ಲ ಆದ್ದರಿಂದ ಶಪ್ ಎಂಬ ವಿಕರಣ ಪ್ರತ್ಯಯವೂ ಬರಲು ಅವಕಾಶವಿಲ್ಲ. ಆದ್ದರಿಂದಲೂ ಊಯತೇ: ಎಂದು ಶಪ್ ವಿಕರಣ ಪ್ರತ್ಯಯಯುಕ್ತವಾಗಿ ನಿರ್ದೇಶಿಸಿದ್ದು ಸರಿಯಲ್ಲ ಎಂದು ಪ್ರಶ್ನೆ .

-ಇದಕ್ಕೆ ಸಮಾಧಾನವನ್ನು ಕೆಲವರು ಹೀಗೆ ಹೇಳುತ್ತಾರೆ - 'ವೇಞ್ ತಂತು ಸಂತಾನೇ ' ಎಂಬೀ ಧಾತುವಿನ ಅಭಿಪ್ರಾಯದಿಂದಲೇ ಊಯತೇ: ಎಂದು ಪ್ರಯೋಗಿಸಲಾಗಿದೆ. ಯದ್ಯಪಿ ವಯತೇ: ಎಂದೇ ಪ್ರಯೋಗಿಸಬೇಕಾಗಿತ್ತು ಆದರೂ ಇಲ್ಲಿ ವೇಞ್ ಧಾತುವಿಗೆ ತಿಪ್ ಮತ್ತು ಯಕ್ ಪ್ರತ್ಯಯಗಳನ್ನಿಟ್ಟುಕೊಳ್ಳಬೇಕು. ಆಗ ಯಕ್ ಕಿತ್ ಆದ್ದರಿಂದ, ಮತ್ತು ಯಜ ವಪಿ ವಹಿ ವೇಞ್ ವ್ಯೇಞ್ ಶ್ವಯತಿ ವದ್ ವಸ್ ಮತ್ತು ಹ್ವಯತಿ ಎಂಬ ಈ ಒಂಬತ್ತು ಯಜಾದಿಗಳಲ್ಲಿ ವೇಞ್ ಸೇರಿರುವುದರಿಂದ 'ವಚಿಸ್ವಪಿ ಯಜಾದೀನಾಂ ಕಿತಿ ' ಎಂಬ ಸೂತ್ರದಿಂದ ವ ಕಾರಕ್ಕೆ ಸಂಪ್ರಸಾರಣ ಬರುತ್ತದೆ ಅಂದರೆ ವೇ ಎಂಬಲ್ಲಿ ವ್ ಗೆ ಉ ಬಂದು ಉ+ಏ ಎಂದಾಗುತ್ತದೆ 'ಸಂಪ್ರಸಾರಣಾಚ್ಚ' ಎಂಬ ಸೂತ್ರದಿಂದ ಉ+ಏ ಎಂಬಲ್ಲಿ ಪೂರ್ವರೂಪ ಬಂದು ಉ ಎಂದಾಗುತ್ತದೆ ' ಅಕೃತ್ ಸಾರ್ವಧಾತುಕಯೋಃ ' ಎಂಬ ಸೂತ್ರದಿಂದ ದೀರ್ಘ ಬಂದು ಊಯತಿ ಎಂದಾಗುವುದು. ಯದ್ಯಪಿ ತಿಪ್ ಎಂಬುದು ಭಾವಕರ್ಮವಾಚಿಯಾದರೆ ಮಾತ್ರ ಯಕ್ ಬರಲು ಅವಕಾಶ. ಆದರೂ ಇಕ್‌ಶ್ತಿಪೌ ಎಂಬಲ್ಲಿ ತಿಪೌ ಎಂದು ಹೇಳುವುದರ ಬದಲು ಶಕಾರ ಸೇರಿಸಿ ಹೇಳಿದ್ದರಿಂದ ತಿಪ್‌ಗೆ ಕರ್ತ್ರಾದಿ ವಾಚಕತ್ವವಿಲ್ಲದಿದ್ದಾಗಲೂ ಶಪ್ ಮೊದಲಾದ ಪ್ರತ್ಯಯಗಳನ್ನು ಮಾಡಬಹುದು ಎಂದು ಅರ್ಥವಾಗುತ್ತದೆ

ಎಂದು ಹೇಳಿದ್ದರಿಂದ ಇಲ್ಲಿಯ ತಿಪ್‌ಗೆ ಭಾವ ಕರ್ಮವಾಚಿತ್ವವಿಲ್ಲದಿದ್ದರೂ ಯಕ್ ಮಾಡಬಹುದೆಂದು ತಿಳಿಯುತ್ತದೆ.

ಆದ್ದರಿಂದಲೇ ವಿಭಾಷಾ ಲೀಯತೇ: ಎಂಬ ಸೂತ್ರದಲ್ಲಿ ಲೀಯತೇ: ಎಂಬುದು ಲೀಜ್ ಶ್ಲೇಷಣೇ ಮತ್ತು ಲೀ ಶ್ಲೇಷಣೇ ಎಂಬ 'ಶ್ಯನ್' ಮತ್ತು 'ಶ್ನಾ 'ವಿಕರಣದ ಧಾತುಗಳ ಯಕ್ ಸಹಿತವಾದ ನಿರ್ದೇಶ ಎಂದು ಮಹಾಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಕೈಯಟ ಮತ್ತು ಮಂಜರೀಯಲ್ಲಿಯೂ ಕೂಡ 'ಶ್ತಿಪ್' ಎಂಬಲ್ಲಿ ಶಕಾರ ಇತ್ ಮಾಡಿದ್ದರಿಂದ ತಿಪ್‌ಗೆ ಭಾವಕರ್ಮ ವಾಚಕತ್ವವಿಲ್ಲದಿದ್ದರೂ ಯಕ್ ಬರುತ್ತದೆ. ಉದಾಹರಣೆಗೆ ತಿಪ್ ಕರ್ತೃ ವಾಚಕವಾಗದಿದ್ದರೂ ಭೂಧಾತುವಿಗೆ ಶಪ್ ಮಾಡಿ 'ಭವತೇ:' ಎಂದು ಸೂತ್ರದಲ್ಲಿಯೇ ನಿರ್ದೇಶ ಮಾಡಿದ್ದಾರೆ' ಎಂದು ಹೇಳಿದ್ದಾರೆ. ಯಕ್ ಪ್ರತ್ಯಯವನ್ನು ಸೇರಿಸಿ 'ಊಯತೇ:' ಎಂದು ನಿರ್ದೇಶಿಸುವ ಬದಲು ಸ್ವಾರಸಿಕವಾದ 'ವಯತೇ:' ಎಂಬ ನಿರ್ದೇಶವನ್ನೇ ಮಾಡಬಹುದಿತ್ತು. ನಿಜ, ಆದರೆ ವಯತೇ: ಎಂದೇ ನಿರ್ದೇಶ ಮಾಡಿದ್ದರೆ ವಯ ಗತೌ ಎಂಬ ಧಾತುವಿನ ನಿರ್ದೇಶ ಎಂದು ಭ್ರಾಂತಿ ಬರುವ ಸಂಭವವಿದೆ. ಅದರ ಪರಿಹಾರಕ್ಕಾಗಿ ಊಯತೇ: ಎಂದು ನಿರ್ದೇಶಿಸಿದ್ದಾರೆ.

ಅಥವಾ ಊಯೀ ಧಾತುವಿನ ರೂಪ ಎಂದೂ ಇಟ್ಟುಕೊಳ್ಳಬಹುದು. 'ವಿಭಾಷಾ ಲೀಯತೇಃ' ಎಂಬ ಸೂತ್ರದಲ್ಲಿ ಆತ್ಮನೇದಿಯಾದ ಲೀಜ್ ಧಾತುವನ್ನು ತಿಪ್ ನಿಂದ ನಿರ್ದೇಶ ಮಾಡಿದ್ದಾರೆ. ಹಾಗೆಯೇ ಬ್ರಹ್ಮಸೂತ್ರಗಳಲ್ಲಿಯೂ 'ಈಕ್ಷತಿ ಕರ್ಮ...' 'ಈಕ್ಷತೇರ್ನಾಶಬ್ದಮ್' ಇತ್ಯಾದಿಗಳಲ್ಲಿ ಆತ್ಮನೇದಿಯಾದ ಈಕ್ಷ ಧಾತುವನ್ನು ತಿಪ್‌ನಿಂದ ನಿರ್ದೇಶ ಮಾಡಿದ್ದಾರೆ. ಆದ್ದರಿಂದ ಆತ್ಮನೇದಿಯಾದರೂ ಊಯತೇಃ ಎಂದು ಊಯೀ ಧಾತುವಿನ ನಿರ್ದೇಶ ಯುಕ್ತವಾಗುತ್ತದೆ.

**ಆಗಮ ಯಾವುದು?**

ಗಾಯತ್ರೀ ಮಂತ್ರವು ವ್ಯಾಹೃತಿಯ ವ್ಯಾಖ್ಯಾನರೂಪ ಎಂದು ಆಗಮ ಸಿದ್ಧವಾಗಿದೆ ಎಂದು ಸುಧಾಕಾರರು ಹೇಳಿದ್ದಾರೆ. ಆ ಆಗಮ ಯಾವುದು ಎಂಬುದರ ಬಗ್ಗೆ ಕೆಲವರು ಹೀಗೆ ಹೇಳುತ್ತಾರೆ - ''ನಾರಾಯಣಾಷ್ಟಾಕ್ಷರಾಚ್ಚ

ವ್ಯಾಹೃತಿ ತ್ರಿಗುಣಾತ್ಮನ: । ವೇದಮಾತಾ ತು ಗಾಯತ್ರೀ'' ಎಂಬ ತಂತ್ರಸಾರ ವಚನದಿಂದ ಗಾಯತ್ರಿಗೆ ವ್ಯಾಹೃತಿ ವ್ಯಾಖ್ಯಾನ ರೂಪತ್ವ ಸಿದ್ಧವಾಗುತ್ತದೆ ಎಂದು.

ಆದರೆ ಇದು ಸರಿಯಲ್ಲ ಆ ತಂತ್ರ ವಚನದಲ್ಲಿರುವ ವ್ಯಾಹೃತಿ ಶಬ್ದಕ್ಕೆ ವ್ಯಾಹರಣ- ಉಚ್ಚಾರಣ ಎಂಬ ಅರ್ಥವೇ ಹೊರತು ಭೂರ್ಭುವ ಸ್ವ: ಎಂಬ ವ್ಯಾಹೃತಿ ಎಂದರ್ಥವಲ್ಲ ಆದ್ದರಿಂದ ಆ ತಂತ್ರಸಾರ ವಚನವು - ಮೂರು ಬಾರಿ ಉಚ್ಚರಿಸಲ್ಪಟ್ಟ ನಾರಾಯಣಾಷ್ಟಾಕ್ಷರದಿಂದ ಗಾಯತ್ರಿಯು ಅಭಿವ್ಯಕ್ತವಾಯಿತು ಎಂದೇ ತಿಳಿಸುತ್ತದೆ ಹೊರತು ಗಾಯತ್ರಿಗೆ ವ್ಯಾಹೃತಿ ವ್ಯಾಖ್ಯಾನರೂಪತ್ವವನ್ನಲ್ಲ. ಆದ್ದರಿಂದ ಆಗಮ ಶಬ್ದದಿಂದ ಪಂಚರಾತ್ರಾ ಗಮನವನ್ನಿಟ್ಟುಕೊಳ್ಳಬೇಕೆಂದು ಬೇರೆ ಕೆಲವರು ಹೇಳುತ್ತಾರೆ. ಶ್ರೀಮದಾಚಾರ್ಯರು ಆ ಆಗಮವನ್ನು ಎಲ್ಲಿಯೂ ಉದಾಹರಿಸಿಲ್ಲವಾದ್ದರಿಂದ ಟೀಕಾಕೃತ್ಪಾದರೂ ಕೂಡ ಉದಾಹರಿಸದೇ ಆಗಮಾತ್ ಎಂದು ಸಾಮಾನ್ಯವಾಗಿ ಹೇಳಿದ್ದಾರೆ. ಎಂದು ಭಾವಿಸಬೇಕು.

**ವಿರೋಧ ಪರಿಹಾರ - ಭರ್ಗ ಶಬ್ದ**

ಓಂಕಾರ ವಾಚ್ಯನಾದ ವಿಷ್ಣುವೇ ಸರ್ವ ವೇದಾರ್ಥ. ಏಕೆಂದರೆ ಓಂಕಾರಾರ್ಥವೇ ಭೂ: ಭುವ: ಸ್ವ: ಎಂಬ ವ್ಯಾಹೃತಿಗಳ ಅರ್ಥ. ವ್ಯಾಹೃತ್ಯರ್ಥವೇ ಗಾಯತ್ರಿಯ ಅರ್ಥ. ಗಾಯತ್ರಿಯ ಅರ್ಥವೇ ಪುರುಷಸೂಕ್ತಾರ್ಥ. ಪುರುಷಸೂಕ್ತಾರ್ಥವೇ ಸರ್ವವೇದಾರ್ಥ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು ಸುಧಾಕಾರರು ವಿವರಿಸಿದ್ದಾರೆ. ಈ ಸಂದರ್ಭದಲ್ಲಿ ಗಾಯತ್ರಿಯಲ್ಲಿರುವ ಭರ್ಗ ಶಬ್ದವು ಸೂರ್ಯವಾಚಕ ಎಂಬ ಶಂಕೆಯನ್ನು ಮಾಡಿಕೊಂಡು ಅದನ್ನು ನಿವಾರಿಸಲು ಭರಣ ಗಮನ ಕರ್ತೃ ವಿಷ್ಣುವೇ ಆದ್ದರಿಂದ ಭರ್ಗ ಶಬ್ದವು ವಿಷ್ಣುವಾಚಕವೇ ಎಂದು ಹೇಳಿ ಗಾಯತ್ರಿ ಮಂತ್ರಾರ್ಥವನ್ನು ವಿವರಿಸುತ್ತಾ 'ಯೋ ಭರ್ಗ: ಸ:' ಎಂದು ಅನ್ವಯ ತೋರಿಸಿದ್ದಾರೆ. ಇಲ್ಲಿ ಅಕಾರಾಂತ ಭರ್ಗ ಶಬ್ದವನ್ನು ಇಟ್ಟುಕೊಂಡಿದ್ದಾರೆ ಆದರೆ ಋಗ್ಭಾಷ್ಯ ಟೀಕಾದಲ್ಲಿ ಭರ್ಗೋ ರೂಪಂ ಎಂದು ಪ್ರಯೋಗಮಾಡಿ ಭರ್ಗ: ಎಂಬುದು ಸಕಾರಾಂತ ನಪುಂಸಕಲಿಂಗದ

ಭರ್ಗಸ್ ಶಬ್ದ ಎಂದು ಸೂಚಿಸಿದ್ದಾರೆ. ಆದ್ದರಿಂದ ಪರಸ್ಪರ ವಿರೋಧ ಬರುತ್ತದೆ ಎಂದರೆ ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬೇಕು.

ಋಗ್ಭಾಷ್ಯ ಟೀಕೆಯಲ್ಲಿ ಭರ್ಗಸ್ ಎಂದು ಸಕಾರಾಂತ ನಪುಂಸಕಲಿಂಗ ಶಬ್ದ ಹೇಳಿದ್ದು ಅದರ ಆದ್ಯುದಾತ್ತ ಸ್ವರ ಸಿದ್ಧಿಗೋಸ್ಕರ. ಇಲ್ಲಿ ಅಕಾರಾಂತವನ್ನು ಆಶ್ರಯಿಸಿದ್ದೇಕೆಂದರೆ ಮೈತ್ರಾವರುಣೀಯ ಶ್ರುತಿಯಲ್ಲಿ 'ಯಸ್ಯ ಭರ್ಗಾಖ್ಯಾ ತಚ್ಚಿಂತಯಾಮಿ' ಎಂಬಲ್ಲಿ ಭರ್ಗಾಖ್ಯಾ ಎಂದು ಭರ್ಗಸ್ ಶಬ್ದ ಸಮಾನಾರ್ಥಕವಾದ ಅಕಾರಾಂತ ಶಬ್ದವನ್ನಿಟ್ಟುಕೊಂಡು ಪ್ರಯೋಗಮಾಡಿದ್ದಾರೆ. ಹೀಗೂ ಒಂದು ಶಬ್ದವಿದೆಯೆಂದು ಸೂಚಿಸುವ ಉದ್ದೇಶದಿಂದ ಇಲ್ಲಿ ಯೋ ಭರ್ಗಃ ಎಂದು ಶ್ರೀಮಟ್ಟೀಕಾಕೃತ್ಪಾದರು ಪ್ರಯೋಗಮಾಡಿದ್ದಾರೆ. ಆದ್ದರಿಂದ ಎರಡೂ ವಿಧವಾದ ಶಬ್ದಗಳಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲ.

**ಜೈಮಿನಿಗಳು ನಿರೂಪಿಸಿದ ಧರ್ಮಲಕ್ಷಣ.**

''ಚೋದನಾಲಕ್ಷಣೋಽರ್ಥೋ ಧರ್ಮಃ'' ಎಂದು ಜೈಮಿನಿ ಸೂತ್ರ. ಇಲ್ಲಿ ಚೋದನಾ ಎಂದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಮುಂತಾದ ಸೋಮಯಾಗ ಮಾಡಬೇಕೆಂದು ಹೇಳುವ ವಿಧಿವಾಕ್ಯಗಳು ಮಾತ್ರ ಎಂದು ಪ್ರಾಭಾಕರರ ಅಭಿಪ್ರಾಯ. ಮಂತ್ರ ಅರ್ಥವಾದ ನಾಮಧೇಯ ಸಹಿತವಾದ ವಿಧಿವಾಕ್ಯವೆಂದು ಭಾಟ್ಟರ ಅಭಿಪ್ರಾಯ. ಲಕ್ಷಣ ಶಬ್ದಕ್ಕೆ ಪ್ರಮಾಣವೆಂದರ್ಥ. ಆದ್ದರಿಂದ ವಿಧಿವಾಕ್ಯವೇ ಪ್ರಮಾಣವಾಗಿ ಉಳ್ಳದ್ದು ಮತ್ತು 'ಅರ್ಥ'ವಾದದ್ದು ಧರ್ಮವೆಂದು ಸಿದ್ಧವಾಗುತ್ತದೆ. ಅರ್ಥವೆಂದರೆ ಅಪೇಕ್ಷಿಸಲ್ಪಡುವುದು.

ಜ್ಯೋತಿಷ್ಟೋಮಾದಿ ಯಾಗಗಳು ವಿಧಿವಿಹಿತವಾದ್ದರಿಂದ ಮತ್ತು ಸ್ವರ್ಗ ಸಾಧನ ತಯಾ ಅಪೇಕ್ಷ್ಯಮಾಣವಾದ್ದರಿಂದ ಧರ್ಮವಾಗಿದೆ.

ಶತ್ರುವಧಕ್ಕಾಗಿ ಮಾಡುವ ಶ್ಯೇನಯಾಗವೂ ವೇದ ಬೋಧಿತವಾದ್ದರಿಂದ ಧರ್ಮವಾಗಬೇಕಾದೀತು. ಆದ್ದರಿಂದ ಅರ್ಥ ಪದಕೊಡಲಾಗಿದೆ.

ಶ್ಯೇನಯಾಗವು ತಾತ್ಕಾಲಿಕಶತ್ರುವಧರೂಪೇಷ್ಟಸಾಧನವಾಗಿದ್ದರೂ ಅಂತಿಮವಾಗಿ ನರಕ ಕಾರಣವಾದ್ದರಿಂದ ಅರ್ಥವಲ್ಲ.

ಹೀಗೆ ಬ್ರಹ್ಮ ಜ್ಞಾನವೂ ಕೂಡ ಧರ್ಮವೇ. ಆತ್ಮನ್ಯೇವಾತ್ಮಾನಂ ಪಶ್ಯೇತ್ (ತನ್ನಲ್ಲೇ ಪರಮಾತ್ಮನನ್ನು ನೋಡಬೇಕು) ಮುಂತಾದ ಶ್ರುತಿಗಳಿಂದ ಬ್ರಹ್ಮ ಜ್ಞಾನವು ವಿಹಿತವಾಗಿದೆ, ಮತ್ತು ಅರ್ಥವೂ ಆಗಿದೆ.

ಆದ್ದರಿಂದ ಜೈಮಿನಿಗಳ ಸೂತ್ರಗಳಿಂದ ಬ್ರಹ್ಮ ಜ್ಞಾನದ ವಿಚಾರವೂ ನಡೆದಿದೆಯಾದ್ದರಿಂದ ಪ್ರತ್ಯೇಕವಾಗಿ ಬ್ರಹ್ಮ ಸೂತ್ರಗಳೇಕೆ? ಎಂದು ಆಶಂಕಿಸಿ ಬ್ರಹ್ಮಜ್ಞಾನವು ಧರ್ಮವಾದರೂ ಅದರ ವಿಚಾರವು ಜೈಮಿನಿ ಸೂತ್ರಗಳಲ್ಲಿ ನಡೆದಿಲ್ಲ. ಅದಕ್ಕಾಗಿ, ಮತ್ತು ಸಮಸ್ತ ವೇದವೂ ಬ್ರಹ್ಮ ಪರವೆಂದು ಸಿದ್ಧ ಪಡಿಸಲು ಬ್ರಹ್ಮ ಸೂತ್ರಗಳು ಹೊರಟಿವೆಯೆಂದು ಸುಧಾದ ಅಭಿಪ್ರಾಯವಾಗಿದೆ.

**ಓಂ ಕಾರದ ಪಂಚ ಪ್ರಯೋಜನಗಳು**

ಮಂಗಲಾಸ್ರವಣೇ ಯುಕ್ತಿವಿಶೇಷ ದ್ಯೋತನಂ ತಥಾ ।
ಮೀಮಾಂಸಾನುಗ್ರಾಹ್ಯಮಾನಕೀರ್ತನಂ ಪೂರ್ವತಂತ್ರತ: ।
ಅಗತಾರ್ಥತಾಸೂಚನಂ ಚೇತ್ಯೇವಂ ಪಂಚ ಪ್ರಯೋಜನ: ।
ಸೌತ್ರ ಪ್ರಾಥಮಿಕೋಂಕಾರ: ಶ್ರುತಿ ಸಿದ್ಧೋಽವಧಾರಿತಃ ॥

ಓಂ ಅಥಾತೋ ಬ್ರಹ್ಮ ಜಿಜ್ಞಾಸಾ ಓಂ ಎಂಬಲ್ಲಿ ಆದಿಯಲ್ಲಿರುವ ಓಂಕಾರಕ್ಕೆ ಐದು ಪ್ರಯೋಜನಗಳು

೧) ಓಂಕಾರಶ್ಚಾಥ ಶಬ್ದಶ್ಚ ದ್ವಾವೇತೌ ಬ್ರಹ್ಮಣ :ಪುರಾ ।
ಕಂಠಂಭಿತ್ವಾ ವಿನಿರ್ಯಾತೌ ತಸ್ಮಾನ್ ಮಾಂಗಲಿಕಾವುಭೌ ॥

ಓಂಕಾರ ಮತ್ತು ಅಥ ಶಬ್ದಗಳು ಆದಿಯಲ್ಲಿ ಭಗವಂತನ ಕಂಠದಿಂದ ಹೊರ ಹೊಮ್ಮಿದ ಶಬ್ದಗಳು. ಆದ್ದರಿಂದ ಅವುಗಳು ಮಂಗಲವನ್ನುಂಟು ಮಾಡುತ್ತವೆ. ಎಂಬ ಪ್ರಮಾಣಾನುಸಾರ ಓಂಕಾರವು ಮಂಗಲ ಪ್ರಯೋಜನಕವಾಗಿದೆ.

೨) ' ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೆ ' ಯಾವುದೇ ಬ್ರಹ್ಮ ವಿದ್ಯೆಯನ್ನು ಪಠಿಸುವಾಗ ಆದಿಯಲ್ಲಿ ಓಂಕಾರವನ್ನು ಪಠಿಸದಿದ್ದರೆ ಪುಣ್ಯ ಹ್ರಾಸವಾಗುವುದು. ಎಂದು ಪ್ರಮಾಣವಿರುವುದರಿಂದ ಇಲ್ಲಿರುವ ಓಂಕಾರ ಪುಣ್ಯ ಹ್ರಾಸವನ್ನು ಪರಿಹರಿಸುತ್ತದೆ.

೩) ಓಂಕಾರವು ಗುಣಪೂರ್ಣತ್ವವನ್ನು ತಿಳಿಸುತ್ತದೆ ಆದ್ದರಿಂದ ಜೀವನು ಸ್ವಪ್ರಕಾಶತಯಾ ಸಿದ್ದನಾಗಿದ್ದರೂ ಗುಣ ಪೂರ್ಣನಾದ ಬ್ರಹ್ಮನು ಜೀವವಿಲಕ್ಷಣನಾದುದರಿಂದ ಸಂದಿಗ್ಧನಾದ ಪ್ರಯುಕ್ತ ವಿಚಾರಶಾಸ್ತ್ರಕ್ಕೆ ವಿಷಯನಾಗಬಹುದು ಎಂಬುದಾಗಿ ವಿಷಯತ್ವಕ್ಕೆ ಉಪಪಾದಕವಾದ ಗುಣಪೂರ್ಣತ್ವ ಯುಕ್ತಿಯನ್ನು ಸೂಚಿಸುವುದು ಅದರ ಪ್ರಯೋಜನ.

೪) ಓಂಕಾರದ ವಿಸ್ತಾರವೇ ವ್ಯಾಹೃತಿ ಅದರ ವಿಸ್ತಾರವೇ ಗಾಯತ್ರೀ. ಗಾಯತ್ರೀಯ ವಿಸ್ತಾರವೇ ಪುರುಷಸೂಕ್ತ. ಅದರ ವಿಸ್ತಾರವೇ ವೇದ. ಆದ್ದರಿಂದ ವಿಚಾರ ಶಾಸ್ತ್ರದಿಂದ ನಿರ್ಣಯಿಸಲ್ಪಡುವ ಪ್ರಮಾಣವು ವೇದ ಎಂದು ಓಂಕಾರದಿಂದ ತಿಳಿಯುತ್ತದೆ.

೫) ಪೂರ್ವಮೀಮಾಂಸಾ ಶಾಸ್ತ್ರವು ವೇದೈಕದೇಶದ ಪರಮಮುಖ್ಯಾರ್ಥವಲ್ಲದ ಧರ್ಮವನ್ನು ವಿಚಾರಿಸಲು ಪ್ರವೃತ್ತವಾಗಿದೆ. ಬ್ರಹ್ಮ ಮೀಮಾಂಸಾಶಾಸ್ತ್ರವಾದರೂ ಸಕಲವೇದಗಳು ಈಶ್ವರನಿಷ್ಠ ಎಂಬುದನ್ನು ಪ್ರತಿಪಾದಿಸಲು ಪ್ರವೃತ್ತವಾಗಿವೆ. ಆದ್ದರಿಂದ ಈ ಶಾಸ್ತ್ರವು ಪೂರ್ವಮೀಮಾಂಸಾ ಶಾಸ್ತ್ರದಿಂದ ಗತಾರ್ಥವಾಗುವುದಿಲ್ಲ ಎಂದು ಸೂಚಿಸುತ್ತದೆ. ಏಕೆಂದರೆ ಓಂಕಾರವು ಸರ್ವವೇದಗಳಿಗೆ ಜ್ಞಾಪಕವಾಗಿದೆ.

**ಅತಃ ಶಬ್ದದ ಅರ್ಥಗಳು**

ಆದಿ ಸೂತ್ರದಲ್ಲಿರುವ 'ಅತ:' ಎಂಬ ಶಬ್ದವು ಐದು ಅರ್ಥಗಳನ್ನು ತಿಳಿಸುತ್ತದೆ.

೧) **ಜ್ಞಾನಾದಿ ಮೂಲಕವಾಗಿ ಮೋಕ್ಷಫಲಕವಾದ್ದರಿಂದ** ಅಂದರೆ ಜಿಜ್ಞಾಸಾದಿಂದ ಜ್ಞಾನ, ಜ್ಞಾನದಿಂದ ಪ್ರಸಾದ, ಪ್ರಸಾದದಿಂದ ಮೋಕ್ಷ . ಆದ್ದರಿಂದ ಮೋಕ್ಷಕ್ಕಾಗಿ ಜಿಜ್ಞಾಸಾ ಮಾಡಬೇಕೆಂದು ಅರ್ಥ.

೨) **ಬಂಧ ಸತ್ಯವಾದುದರಿಂದ** ಮೋಕ್ಷವೆಂದರೆ ಬಂಧನಿವೃತ್ತಿ. ಬಂಧವಾದರೂ ಮಿಥ್ಯೆ. ಆದುದರಿಂದ ಮಿಥ್ಯೆಯಾದ ಬಂಧನಿವೃತ್ತಿಗಾಗಿ ಪ್ರಸಾದ ಬೇಕಿಲ್ಲ. ಆದ್ದರಿಂದ ಪ್ರಸಾದಕ್ಕಾಗಿ ಜಿಜ್ಞಾಸಾ ಅನಪೇಕ್ಷಿತ ಎಂಬ ಆಶಂಕೆಯನ್ನು ಬಂಧವು ಸತ್ಯವಾದುದರಿಂದ ಎಂಬರ್ಥದ ಅತಃ ಶಬ್ದವು ಪರಿಹರಿಸುತ್ತದೆ.

೩) **ವೇದವು ಸಿದ್ಧರೂಪವಸ್ತುಬೋಧಕವಾದ್ದರಿಂದ** ಸಮಗ್ರ ವೇದವು ಕಾರ್ಯ ಬೋಧಕ ವಾಗಿದೆ. ಆ ಕಾರ್ಯವನ್ನಾದರೂ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ವಿಚಾರಮಾಡಲಾಗಿದೆ. ಆದ್ದರಿಂದ ವೇದದಿಂದ ಬ್ರಹ್ಮ ವಿಚಾರ ಹೇಗೆ ಸಮಂಜಸವಾದೀತು ಎಂಬ ಶಂಕೆಯನ್ನು ಪರಿಹರಿಸಲು ವೇದವು ಸಿದ್ಧಬೋಧಕವಾದ್ದರಿಂದ ಎಂಬದರ್ಥದ ಅತಃ ಶಬ್ದವನ್ನು ಪ್ರಯೋಗಿಸಿದ್ದಾರೆ.

೪) **ವೇದವು ಪ್ರಮಾಣವಾದುದರಿಂದ.** ಶಬ್ದವೇ ಅಪ್ರಮಾಣ ಮೀಮಾಂಸಾದಿಂದ ಅನುಗ್ರಾಹ್ಯವಾದ ಶಬ್ದರೂಪವಾದ ವೇದವು ಸುತರಾಂ ಅಪ್ರಮಾಣ. ಆದ್ದರಿಂದ ಅನುಗ್ರಾಹಕವಾದ ಮೀಮಾಂಸಾ ಅನಾರಂಭ ಣೀಯ ಎಂಬ ಆಕ್ಷೇಪವನ್ನು ಪರಿಹರಿಸಲು ವೇದ ಪ್ರಮಾಣವಾದ್ದರಿಂದ ಎಂಬ ಹೇತು ಸೂಚಕವಾದ ಅತಃ ಶಬ್ದವನ್ನು ಪ್ರಯೋಗ ಮಾಡಿದ್ದಾರೆ.

೫) **ವೇದವು ಅನ್ವಿತವಾದ ಅರ್ಥವನ್ನು ತಿಳಿಸುವುದರಿಂದ.** ಪದಗಳ ಅರ್ಥವು ಮೊದಲೇ ತಿಳಿಯಲ್ಪಟ್ಟಿರುತ್ತದೆ. ವಾಕ್ಯಾರ್ಥವನ್ನು ಬೋಧಿಸಲು ಸಾಮಗ್ರಿ ಇಲ್ಲ. ಆದ್ದರಿಂದ ವೇದವು ಏನನ್ನೂ ಬೋಧಿಸುವುದಿಲ್ಲ ಆದ್ದರಿಂದ ಅಪ್ರಮಾಣ. ಅಂತಹ ವೇದದ ಅರ್ಥನಿರ್ಣಯಕ್ಕಾಗಿ ವಿಚಾರ ಅಸಂಗತ ಎಂಬ ಆಕ್ಷೇಪ ನಿರಾಕರಣೆಗಾಗಿ ವೇದವು (ಶಬ್ದವು) ಅನ್ವಿತವಾದ ಅರ್ಥವನ್ನು ತಿಳಿಸುತ್ತದೆ ಆದ್ದರಿಂದ ವಾಕ್ಯಾರ್ಥಬೋಧಕವಾಗಿದೆ ಎಂದು ಹೇಳಲು ಅತಃಶಬ್ದ ವು ಪ್ರಯೋಗಮಾಡಲ್ಪಟ್ಟಿದೆ.

**ಆಗ್ನೇಯಾದಿ ಯಾಗಗಳ ಫಲಸಾಧನತ್ವಕ್ಕಾಗಿ ಅಪೂರ್ವಗಳ ಕಲ್ಪನೆಯ ಉದಾಹರಣೆ**

ಜ್ಞಾನದಿಂದ ಬಂಧವು ನಿವೃತ್ತಿಯಾಗುವುದೆಂದು ಶ್ರುತಿಯಲ್ಲಿ ಹೇಳಿದ್ದಾರೆ. ಜ್ಞಾನದಿಂದ ನಿವೃತ್ತಿಯಾಗುವ ವಸ್ತು ಅಜ್ಞಾನ ಅಥವಾ ಅಜ್ಞಾನಕಾರ್ಯ ಎರಡರಲ್ಲೊಂದಾಗಿರಬೇಕು. ಆದ್ದರಿಂದ ಪ್ರಪಂಚವು ಅಜ್ಞಾನ ಕಾರ್ಯವೆಂದು ಸಿದ್ಧವಾಗುತ್ತದೆ. ಹೀಗೆ ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಞಾನ ನಿವರ್ತ್ಯತ್ವಾನ್ಯಥಾನುಪಪತ್ತಿಯಿಂದ ಬಂಧವು ಮಿಥ್ಯೆಯೆಂದು ಸಿದ್ಧವಾಗುತ್ತದೆಂದು ಅದ್ವೈತಿಗಳ ಅಭಿಪ್ರಾಯ (ಇದನ್ನು ಮುಂದೆ ಗರುಡ ಧ್ಯಾನದಿಂದ ಸತ್ಯವಾದ ವಿಷವು, ನಿವೃತ್ತಿಯಾಗುವಂತೆ ಸತ್ಯವಾದ ಬಂಧವೂ ಜ್ಞಾನದಿಂದ ನಿವೃತ್ತಿಯಾಗಬಹುದು ಎಂದು ಸುಧಾದಲ್ಲಿ ನಿರಾಕರಿಸಿದ್ದಾರೆ)

ಅದ್ವೈತಿಗಳು ಈ ತಮ್ಮ ವಿಷಯಕ್ಕೆ ದೃಷ್ಟಾಂತವಾಗಿ ಮೀಮಾಂಸಕರ ಅಪೂರ್ವ ಕಲ್ಪನೆಯನ್ನು ಉದಾಹರಿಸಿದ್ದಾರೆ. ಅಗ್ನಿಹೋತ್ರವನ್ನಿಟ್ಟವರು ಹುಣ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ತಲಾ ಮೂರು ಮೂರು ಯಾಗಗಳನ್ನು ಮಾಡಬೇಕು. ಅದಕ್ಕೆ ಪೂರ್ಣಮಾಸೇಷ್ಟಿ ದರ್ಶೇಷ್ಟಿಗಳೆನ್ನುತ್ತಾರೆ. ಹೀಗೆ ಆರು ಯಾಗಗಳನ್ನು ಮಾಡಿದಾಗಲೇ ಅವುಗಳಿಂದ ಪುಣ್ಯ (ಅಪೂರ್ವ) ಹುಟ್ಟುತ್ತದೆ. ಆ ಅಪೂರ್ವದಿಂದ ಯಜಮಾನ ಸತ್ತ ಮೇಲೆ ಸ್ವರ್ಗವುಂಟಾಗುತ್ತದೆ.

ಇಲ್ಲಿ ಆರು ಯಾಗಗಳನ್ನು ಮಾಡಿದ ಮೇಲೆಯೇ ಪ್ರಧಾನಾಪೂರ್ವ (ಸ್ವರ್ಗಸಾಧನಾಪೂರ್ವ) ಹುಟ್ಟುತ್ತದೆ. ಎಂದು ಶ್ರುತಿ ಹೇಳುತ್ತದೆ. ಆದರೆ ಆರು ಯಾಗಗಳನ್ನು ಒಟ್ಟಿಗೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಪೂರ್ಣಮಾಸದ ಯಾಗಗಳನ್ನು ಮಾಡುವಾಗ ಮೊದಲು ಮಾಡಿದ ದರ್ಶದ ಮೂರು ಯಾಗಗಳು ಇರುವುದಿಲ್ಲ. ಹೀಗೆ, ಈ ಆರು ಯಾಗಗಳು ಒಟ್ಟಾಗುವುದು ಸಾಧ್ಯವಿಲ್ಲವಾದ್ದರಿಂದ ದರ್ಶದ ಮೂರು ಯಾಗಗಳಿಂದ ಮೂರು ಉತ್ಪತ್ಯಪೂರ್ವಗಳು, ಹಾಗೆಯೇ ಪೂರ್ಣಮಾಸದಲ್ಲೂ ಮೂರು ಯಾಗಗಳಿಂದ ಮೂರು ಉತ್ಪತ್ಯಪೂರ್ವಗಳು ಹುಟ್ಟುತ್ತವೆ ನಂತರ ಮೊದಲಿಗೆ ಮಾಡಿದ ದರ್ಶದ ಮೂರು ಯಾಗಗಳಿಂದ ದರ್ಶ ಸಮುದಾಯಾಪೂರ್ವವು ಹುಟ್ಟುತ್ತದೆ. ನಂತರ ಮಾಡುವ ಪೂರ್ಣ ಮಾಸದ

ಮೂರು ಯಾಗಗಳ ಅಪೂರ್ವಗಳಿಂದಲೂ ಪೂರ್ಣಮಾಸಸಮುದಾಯ ಪೂರ್ವವು ಹುಟ್ಟುತ್ತದೆ. ಈ ಎರಡು ಸಮುದಾಯಾಪೂರ್ವಗಳಿಂದ ಪ್ರಧಾನಾಪೂರ್ವವು ಹುಟ್ಟುತ್ತದೆಂದು ಆರು ಅಪೂರ್ವಗಳಿಗೆ ಶ್ರುತವಾದ ಪ್ರಧಾನಾಪೂರ್ವಸಾಧನತ್ವಾನ್ಯಥಾನುಪಪತ್ತಿಯಿಂದ ಮಧ್ಯದಲ್ಲಿ ಎರಡು ಸಮುದಾಯಾ ಪೂರ್ವಗಳನ್ನು ಕಲ್ಪಿಸಲಾಗಿದೆ.

ಹೀಗೆ ಒಂಬತ್ತು ಅಪೂರ್ವಗಳನ್ನು ಅಂಗೀಕರಿಸುವುದು ಭಾಟ್ಟ ಮೀಮಾಂಸಕರ ಮತ.

ಪ್ರಾಭಾಕರ ಮೀಮಾಂಸಕರ ಪ್ರಕಾರ ಆರು ಯಾಗಗಳಿಂದ ಆರು ಉತ್ಪತ್ತ್ಯಪೂರ್ವಗಳು ಹುಟ್ಟುತ್ತವೆ. ತದನಂತರ ಅವುಗಳಿಂದ ಪ್ರಧಾನಾ ಪೂರ್ವ ಹುಟ್ಟುತ್ತದೆ. ಅದರಿಂದ ಸ್ವರ್ಗ ಹುಟ್ಟುತ್ತದೆ. ಹೀಗೆ ಎರಡು ಮತದಲ್ಲಿಯೂ ಪ್ರಧಾನಾಪೂರ್ವೋತ್ಪತ್ತಿಗಾಗಿ ಮಧ್ಯ ಬೇರೆ ಬೇರೆ ಅಪೂರ್ವಗಳನ್ನು ಅಂಗೀಕರಿಸಲಾಗಿದೆ. ಮತ್ತು ಯಾಗವು ಸ್ವರ್ಗಸಾಧನವೆಂದೇ ಶ್ರುತಿ ಹೇಳುತ್ತದೆ ಆದರೆ ಸ್ವರ್ಗವಾಗುವ ತನಕವೂ ನಿರಂತರವಾಗಿ ನಾವು ಯಾಗವನ್ನು ಮಾಡುತ್ತಿರುವುದಿಲ್ಲ. ಆದ್ದರಿಂದ ಶ್ರುತವಾದ ಯಾಗದ ಸ್ವರ್ಗಸಾಧನತ್ವದ ನಿರ್ವಾಹಕ್ಕಾಗಿ ಮಧ್ಯದಲ್ಲಿ ಅಪೂರ್ವವನ್ನಂಗೀಕರಿಸಲಾಗಿದೆ. ಹೀಗೆ ಶ್ರುತ ಜ್ಞಾನ ನಿವರ್ತ್ಯತ್ವಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಮಿಥ್ಯಾತ್ವವನ್ನಂಗೀಕರಿಸ 'ಬೇಕೆಂದು ಅದ್ವೈತಮತದ ಆಶಯ.

**ಧ್ಯಾನವೆಂದರೇನು?**

ಸತ್ಯವಾದ ವಿಷವೂ ಗರುಡ ಧ್ಯಾನದಿಂದ ನಿವೃತ್ತಿಯಾಗುತ್ತದೆ. ಆದ್ದರಿಂದ ಜ್ಞಾನದಿಂದ ನಿವೃತ್ತಿಯಾಗುವ ಬಂಧವೂ ಮಿಥ್ಯೆಯೇ ಆಗಬೇಕೆಂಬ ನಿಯಮವಿಲ್ಲ. ಸತ್ಯವಾದರೂ ನಿವೃತ್ತಿಯಾಗಬಹುದು ಎಂದು ಸತ್ಯತ್ವವನ್ನು ಸಾಧಿಸಿದ ಶ್ರೀಮಟ್ಟೀಕಾಕೃತ್ಪಾದರು ಧ್ಯಾನವೆಂದರೆ ಅದು ಜ್ಞಾನರೂಪವೆಂದು ವಿವರಿಸುತ್ತಾ ಮಾನಸವಾಸನಾಮಯವಸ್ತುವಿನ ಮಾನಸಾವಲೋಕನವೇ ಧ್ಯಾನ ಎಂದು ಹೇಳಿದ್ದಾರೆ. ಅಂದರೆ ಸಂಸ್ಕಾರ ಪರಿಣಾಮರೂಪವಸ್ತುವನ್ನು ಮನಸ್ಸಿನಿಂದ ನೋಡುವುದು. ಹೀಗೆ ಧ್ಯಾನವನ್ನು ಅವಲೋಕನ ರೂಪ ಎಂದು ಹೇಳಿದ್ದರಿಂದ 'ಧ್ಯಾನವು

ಸ್ಮರಣರೂಪ' ಎಂಬ ಮತವು ನಿರಸ್ತವಾಯಿತು. ಏಕೆಂದರೆ ಸ್ಮರಣೆಯಲ್ಲಿ ಪದಾರ್ಥಗಳು ಗೋಚರವಾಗುವಾಗ ಅತೀತದೇಶಕಾಲ ವಿಶಿಷ್ಟಗಳಾಗಿಯೇ ಗೋಚರಿಸುತ್ತವೆ. ಆ ದೇಶಕಾಲಗಳಲ್ಲಿ ದೇವದತ್ತನು ಹಾಗಿದ್ದನು ಇತ್ಯಾದಿ ರೂಪವಾಗಿ. ಆದರೆ ವಾಸನಾಮಯ ವಸ್ತುವನ್ನು ಮನಸಾ ಅವಲೋಕನ ಮಾಡುವಾಗ ಅತೀತ ದೇಶ ಕಾಲ ಸಂಬಂಧವು ತೋರುವುದಿಲ್ಲ. ವಸ್ತುವು ಸನ್ನಿಕೃಷ್ಟ ದೇಶ ಕಾಲ ಸಂಬದ್ಧವಾಗಿಯೇ ತೋರುತ್ತದೆ ಮತ್ತು ಸ್ಮೃತಿಯು ಸಂಸ್ಕಾರ ಜನ್ಯ. ಅವಲೋಕನವು ಸಂಸ್ಕಾರ ಜನ್ಯವಾಗಿರುವುದಿಲ್ಲ ಎಂದು ವ್ಯತ್ಯಾಸವಿದೆ.

## ಕೃಪಾಲು ಶಬ್ದ ವಿಚಾರ

ಅಷ್ಟಾಧ್ಯಾಯಿಯ ತೃತೀಯಾಧ್ಯಾಯದ್ವಿತೀಯಪಾದದಲ್ಲಿ 'ಸ್ಪೃಹಿ-ಗೃಹಿ-ಪತಿ-ದಯಿ-ನಿದ್ರಾ-ತಂದ್ರಾ-ಶ್ರದ್ಧಾ' ಇವುಗಳಿಗೆ ಮಾತ್ರ ಆಲುಚ್ ಪ್ರತ್ಯಯವನ್ನು ಹೇಳಿದ್ದಾರೆ ಹೊರತು ಕೃಪೂ (ಸಾಮರ್ಥ್ಯೇ) ಧಾತುವಿಗೆ ಹೇಳಿಲ್ಲವಾದ್ದರಿಂದ ಕೃಪಾಲು ಶಬ್ದ ಪ್ರಯೋಗ ಸರಿಯಲ್ಲ. ಆದರೆ ಸುಧಾದಲ್ಲಿ ಕೃಪಾಲುತ್ವಾದಿ ಗುಣವಾನ್ ಎಂದು ಪ್ರಯೋಗಿಸಿದ್ದು ಹೇಗೆ ಎಂದು ಪ್ರಶ್ನೆ.

ಇದಕ್ಕೆ ಹೀಗೆ ಉತ್ತರಿಸಬಹುದು - ಸ್ಪೃಹಿ ಇತ್ಯಾದಿ ಧಾತುಗಳಿಗೆ ಆಲುಚ್ ಬದಲಿಗೆ ಲುಷ್ ಪ್ರತ್ಯಯವನ್ನು ಹೇಳಿದ್ದರೂ ಕೂಡ ಸ್ಪೃಹಯಾಲು ಇತ್ಯಾದಿ ರೂಪಗಳನ್ನು ಸಿದ್ಧಗೊಳಿಸಲು ಬರುತ್ತಿತ್ತು. ಆದರೂ ಆಲುಚ್ ಪ್ರತ್ಯಯವನ್ನು ವಿಧಿಸಿದ್ದು ಸ್ಪೃಹಿ ಇತ್ಯಾದಿಗಳಲ್ಲದೆ ಬೇರೆ ಧಾತುಗಳಿಗೂ ಆಲುಚ್ ಪ್ರತ್ಯಯವನ್ನು ಸೇರಿಸಿ, ಶಯಾಲು ಇತ್ಯಾದಿ ರೂಪಗಳನ್ನು ಸಿದ್ಧಗೊಳಿಸುವ ಉದ್ದೇಶದಿಂದ ಎಂದು ಮಂಜರೀ ಗ್ರಂಥದಲ್ಲಿ ಹೇಳಿದ್ದರಿಂದ ಕೃಪೂ ಧಾತುವಿಗೂ ಆಲುಚ್ ಪ್ರತ್ಯಯವನ್ನು ಸೇರಿಸಿ ಕೃಪಾಲು ಎಂದು ಪ್ರಯೋಗಿಸಬಹುದು ಎಂದು.

ಆದರೆ ಇದು ಸರಿಯಲ್ಲ ಹೀಗೆ ಮಾಡಿದ ಪಕ್ಷದಲ್ಲಿ ಕೃಪೋ ರೋ ಲ: ಎಂಬ ಸೂತ್ರದಿಂದ ಕೃ ಎಂಬಲ್ಲಿರುವ ಋಕಾರಕ್ಕೆ ಲ ಕಾರ ಬರಬೇಕಾಗುತ್ತದೆ. ಆಗ ಕೃಪಾಲು ಎಂಬ ರೂಪ ವಾಗಲಾರದು ಮತ್ತು ಸಾಮರ್ಥ್ಯ ಎಂಬ

ಅರ್ಥವನ್ನು ಕೊಡುವ ಕೃಪೂ ಧಾತುವಿನಿಂದ ಕೃಪಾಲು ಶಬ್ದವನ್ನು ನಿಷ್ಪತ್ತಿಗೊಳಿಸಿದರೆ ದಯಾಮಯ ಎಂಬ ಅರ್ಥವು ಬರಲಾರದು. ಎಂದರೆ

-ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬೇಕು - ಇಲ್ಲಿ ಆಲು ಎಂಬುದು ಆಲುಚ್ ಪ್ರತ್ಯಯದ ರೂಪವಲ್ಲ. ಕಲಶಾರ್ಥಕವಾದ ಆಲು ಶಬ್ದ 'ಕರ್ಕರ್ಯಾಲುರ್ಗಲಂತಿಕಾ ' ಎಂದು ಅಮರಕೊಶದಲ್ಲಿದೆ. ಆದ್ದರಿಂದ ಕೃಪಾಲು ಎಂದರೆ ಕೃಪಾ ಕಲಶ ಎಂದರ್ಥ ಈ ಅರ್ಥದಲ್ಲಿ ಶಬ್ದ ಪ್ರಯೋಗಿಸಿದರೆ ಅಸಮಂಜಸವಾಗಲಾರದು. ಗೀತಾಭಾಷ್ಯಟೀಕೆಯಲ್ಲಿ ಹೀಗೆಯೇ ಕೃಪಾಲು ಶಬ್ದ ಪ್ರಯೋಗವನ್ನು ಸಮರ್ಥಿಸಿದ್ದಾರೆ.

ಅಥವಾ ಕೃಪಾಂ ಲಾತೀತಿ ಕೃಪಾಲು: ಎಂದೂ ಹೇಳಬಹುದು. ಅಂದರೆ ಕೃಪೆಯನ್ನು ಪಡೆದವನು ಎಂದರ್ಥ. ಲಾ (ಆದಾನೇ) ಧಾತುವಿಗೆ 'ಡು' ಪ್ರತ್ಯಯವನ್ನು ಸೇರಿಸಿದರೆ ಕೃಪಾಲು ಎಂದಾಗುತ್ತದೆ. 'ವಿಪ್ರ ಸಂಭ್ಯೋ ಡ್ವಸಂಜ್ಞಾಯಾಂ ' ಎಂಬಲ್ಲಿ ಭೂ ಧಾತುವಿಗೆ ಮಾತ್ರ ಡು ಪ್ರತ್ಯಯವನ್ನು ಹೇಳಿದ್ದರೂ' ಮಿತಡ್ವಾದಿಭ್ಯಶ್ಚ ಉಪಸಂಖ್ಯಾನಮ್' ಎಂಬಲ್ಲಿ ಇತರ ಧಾತುಗಳಿಗೂ ಹೇಳಿದ್ದರಿಂದ ಲಾ ಧಾತುವಿಗೂ ಡು ಪ್ರತ್ಯಯವನ್ನು ಸೇರಿಸಬಹುದು.

ಕೃಪಾ ಶಬ್ದವು ಕ್ರಪ ಕೃಪಾಯಾಂ ಎಂಬ ಧಾತುವಿನಿಂದ ಸಂಪ್ರಸಾರಣ (ಋ) ಬಂದು ನಿಷ್ಪನ್ನವಾದ ಶಬ್ದ ಎಂದಿಟ್ಟುಕೊಂಡರೆ ದಯಾಮಯ ಎಂಬರ್ಥವು ದೊರೆಯುತ್ತದೆ. ಮತ್ತು ಕೃಪೋರೋಲ: ಎಂಬಲ್ಲಿ ಕ್ರಪ ಧಾತುವನ್ನು ಗ್ರಹಣ ಮಾಡಿಲ್ಲ ಎಂದು ವೃತ್ತಿಯಲ್ಲಿ ಹೇಳಿರುವುದರಿಂದ ಲಕಾರ ಬರುವ ಪ್ರಸಕ್ತಿಯೂ ಇಲ್ಲ. ಹೀಗೆ ಅಮರವ್ಯಾಖ್ಯಾನ ಬಂದಿಘಟೀಯ ಮತ್ತು ದುರ್ಘಟ ವೃತ್ತ್ಯಾದಿಗಳಲ್ಲಿಯೂ ಸಮರ್ಥಿಸಿದ್ದಾರೆ

**ಅತಃ ಶಬ್ದವು ವಿಷಯ ಸಮರ್ಥನ ಪರ.**

ಅಥಾತೋ ಬ್ರಹ್ಮ ಜಿಜ್ಞಾಸಾ ಎಂಬ ಸೂತ್ರದಲ್ಲಿರುವ ಅತಃ ಎಂಬ ಶಬ್ದವು ವಿಷಯ ಸಮರ್ಥನ ಪರ ಎಂದು ಸುಧಾದಲ್ಲಿ ಹೇಳಿದ್ದಾರೆ - ಅದು ಹೇಗೆಂದರೆ- ಜಿಜ್ಞಾಸಾಕ್ಕೆ ವಿಷಯವೇ ಇಲ್ಲ ಎಂಬ ಶಂಕೆಯನ್ನು ನಿರಾಸಮಾಡುವ ಯುಕ್ತಿ ಪ್ರದರ್ಶನ ಮೂಲಕವಾಗಿ ಅದು ವಿಷಯ ಸಮರ್ಥನ ಪರವಾಗಿದೆ. ಆ ಶಂಕೆಯಾದರೂ ನಾಲ್ಕು ವಿಧವಾಗಿದೆ.

೧) ಜೀವನೂ ಬ್ರಹ್ಮನೂ ಒಂದೇ ಆದುದರಿಂದ, ಜೀವನಾದರೂ ಸ್ವ ಪ್ರಕಾಶ ಸಿದ್ಧನಾದುದರಿಂದ ವಿಚಾರಕ್ಕೆ ವಿಷಯವಿಲ್ಲ ಎಂಬುದು ಒಂದು. ಇದು ಪ್ರಮೇಯಾಶ್ರಿತ ಶಂಕೆ.

೨) ಶಬ್ದಕ್ಕೂ ಅರ್ಥಕ್ಕೂ ಸಂಬಂಧವೇ ಇಲ್ಲವಾದುದರಿಂದ ಶಬ್ದವೇ ಪ್ರಮಾಣವಲ್ಲ. ಶಬ್ದ ವಿಶೇಷರೂಪವಾದ ವೇದವೂ ಸುತರಾಂ ಅಲ್ಲ. ಹೀಗೆ ವಿಚಾರ ಅನುಗ್ರಾಹ್ಯವಾದ ಪ್ರಮಾಣವೇ ಇಲ್ಲ. ಎಂಬುದು ಎರಡನೆಯ ಶಂಕೆ. ಇದು ಪ್ರಮಾಣಾಶ್ರಿತ ಶಂಕೆ.

೩) ವಾಕ್ಯಾರ್ಥವನ್ನು ಬೋಧಿಸುವ ಉಪಾಯವೇ ಇಲ್ಲವಾದ್ದರಿಂದ ವೇದ ಪ್ರಮಾಣವಲ್ಲ. ಎಂಬುದು ಮೂರನೇ ಶಂಕೆ ಇದೂ ಕೂಡ ಪ್ರಮಾಣಾಶ್ರಿತ ಶಂಕೆ.

೪) ಶಬ್ದವು ಕಾರ್ಯಬೋಧಕವೇ ಹೊರತು ಸಿದ್ಧಾರ್ಥ ಬೋಧಕವಲ್ಲ. ಆದ್ದರಿಂದ ವೇದವು ಬ್ರಹ್ಮನ ವಿಷಯದಲ್ಲಿ ಪ್ರಮಾಣವಾಗಲಾರದು ಎಂಬುದು ನಾಲ್ಕನೆಯ ಶಂಕೆ. ಇದೂ ಕೂಡ ಪ್ರಮಾಣಾಶ್ರಿತ ಶಂಕೆ.

ಇವುಗಳಲ್ಲಿ ಮೊದಲನೆಯ ಪ್ರಮೇಯಾಶ್ರಿತ ಶಂಕೆಯನ್ನು ಓತತ್ವವಾಚೀ ಎಂಬಲ್ಲಿ ಓಂಕಾರ ಬ್ರಹ್ಮ ಶಬ್ದಗಳಿಗೆ ಗುಣ ಪೂರ್ತಿವಾಚಕತ್ವವನ್ನು ತೋರಿಸಿ ಬ್ರಹ್ಮನು ಗುಣಪೂರ್ಣ, ಜೀವನು ಅಲ್ಪಜ್ಞತ್ವಾದಿ ವಿರುದ್ಧ ಧರ್ಮ ಉಳ್ಳವನು. ಆದ್ದರಿಂದ ಜೀವನು ಬ್ರಹ್ಮನೂ ಭಿನ್ನ ಎಂದು ಸಮರ್ಥಿಸಿ ಪರಿಹರಿಸಿದ್ದಾರೆ

ಎರಡನೇ ಪ್ರಮಾಣಾಶ್ರಿತ ಶಂಕೆಯನ್ನು 'ಪ್ರತ್ಯಕ್ಷವಚ್ಚ' ಎಂಬಲ್ಲಿ ಅತಃ ಎಂಬುದಕ್ಕೆ ಶಬ್ದಸ್ಯ ಪ್ರಾಮಾಣ್ಯಾತ್ ಎಂದು ವ್ಯಾಖ್ಯಾನ ಮಾಡಿ ಶಬ್ದ ಪ್ರಾಮಾಣ್ಯ ಸಮರ್ಥನ ಮೂಲಕ ಪರಿಹರಿಸುವರು.

ಮೂರನೇ ಪ್ರಮಾಣಾಶ್ರಿತ ಶಂಕೆಯನ್ನು 'ಶಕ್ತಿಶ್ಚಾನ್ವಿತೇ' ಎಂಬಲ್ಲಿ ಅತಶ್ಶಬ್ದಕ್ಕೆ ವೇದಸ್ಯ ಅನ್ವಿತಾಭಿಧಾಯಿತ್ವಾತ್ ಎಂದು ವ್ಯಾಖ್ಯಾನ ಮಾಡಿ ಅನ್ವಿತಾಭಿಧಾನವಾದ ಸಮರ್ಥನೆಯ ಮೂಲಕ ಪರಿಹರಿಸಿರುವರು

ನಾಲ್ಕನೇ ಶಂಕೆಯನ್ನು 'ಕಾರ್ಯತಾ ಚ' ಎಂಬಲ್ಲಿ ಅತಃ ಎಂಬ ಶಬ್ದಕ್ಕೆ ವೇದಸ್ಯ ಸಿದ್ಧವಸ್ತುಪರತ್ವಾತ್ ಎಂದು ವ್ಯಾಖ್ಯಾನ ಮಾಡಿ ವೇದಗಳಿಗೆ ಸಿದ್ಧಾರ್ಥನಾದ ಬ್ರಹ್ಮನ ವಿಷಯದಲ್ಲಿ ಪ್ರಾಮಾಣ್ಯವಿದೆ ಎಂದು ಸಮರ್ಥಿಸಿ ಪರಿಹರಿಸುವರು.

ಹೀಗೆ ವಿಷಯ ಸಮರ್ಥನೆಗೆ ಹೇತು ಭೂತವಾದ ಈ ನಾಲ್ಕು ಯುಕ್ತಿಗಳಲ್ಲಿ ಮೂರು ಯುಕ್ತಿಗಳನ್ನು ಅತಶ್ಶಬ್ದದ ವ್ಯಾಖ್ಯಾನ ರೂಪವಾಗಿ ತೋರಿಸಲಾಗಿದೆ. ಆದ್ದರಿಂದ ಅತಶ್ಶಬ್ದವು ವಿಷಯ ಸಮರ್ಥನ ಪರ ಎಂದು ತಿಳಿಯಬೇಕು.

**ಜ್ಞಾನ ಪ್ರಾಮಾಣ್ಯಸ್ವತಸ್ತ್ವ ಪರಿಷ್ಕಾರ.**

'' ಪ್ರತ್ಯಕ್ಷಾನುಮಾನಾಗಮಾಃ ತಜ್ಜನಿತಂ ವಿಜ್ಞಾನಂ ಚ ಪ್ರಮಾಣಂ ತತ್ರ ಜ್ಞಾನಸ್ಯ ಯತ್ ಯಾಥಾರ್ಥ್ಯಲಕ್ಷಣಂ ಪ್ರಾಮಾಣ್ಯಂ ತಸ್ಯ ಜ್ಞಾನಜನಕ ಮಾತ್ರಾಧೀನಜನ್ಮತ್ವಂ ಸ್ವತಸ್ತ್ವಂ '' ಪ್ರತ್ಯಕ್ಷ ಅನುಮಾನ ಆಗಮಗಳು ಅವುಗಳಿಂದ ಬರುವ ಜ್ಞಾನವೂ ಪ್ರಮಾಣ. ಜ್ಞಾನದಲ್ಲಿರುವ ಪ್ರಮಾಣ್ಯಕ್ಕೆ ಸ್ವತಸ್ತ್ವವಿರುತ್ತದೆ. ಅಂದರೆ ಜ್ಞಾನದಲ್ಲಿ ಪ್ರಾಮಾಣ್ಯವು ಜ್ಞಾನಜನಕ ಮಾತ್ರದಿಂದ ಉತ್ಪತ್ತಿಯಾಗುವುದು ಎಂದು ಅಭಿಪ್ರಾಯ. ಇದು ಸುಧಾದಲ್ಲಿ ನಿರೂಪಿತವಾದ ಪ್ರಮೇಯ.

ಹೀಗೆ ಸ್ವತಸ್ತ್ವವನ್ನು ನಿರೂಪಣೆ ಮಾಡಿದರೆ ನಿತ್ಯ ಜ್ಞಾನಕ್ಕೆ ಜನಕವೇ ಇಲ್ಲದಿರುವುದರಿಂದ ಇಂತಹ ಸ್ವತಸ್ತ್ವವು ನಿತ್ಯಜ್ಞಾನಪ್ರಾಮಾಣ್ಯದಲ್ಲಿ ಬರುವುದಿಲ್ಲವೆಂದು ಆಕ್ಷೇಪ ಬಂದರೆ ಅದಕ್ಕೆ ಹೀಗೆ ಉತ್ತರಿಸಬೇಕು. ಸುಧಾದಲ್ಲಿ 'ತಜ್ಜನಿತವಾದ ಜ್ಞಾನವು ಪ್ರಮಾಣ 'ಎಂದು ಪೂರ್ವದಲ್ಲಿ ಹೇಳಿರುವುದರಿಂದ ಸುಧಾದಲ್ಲಿ ಬಂದಿರುವ ಸ್ವತಸ್ತ್ವನಿರೂಪಣೆಯು ಜನ್ಯಜ್ಞಾನಪ್ರಾಮಾಣ್ಯಕ್ಕ ಸಂಬಂಧಿಸಿದ್ದೆಂದು ತಿಳಿಯಬೇಕು.

'ಇದಂ ರಜತಂ' ಎಂಬ ಭ್ರಮಾತ್ಮಕ ಜ್ಞಾನವು ಬಂದಾಗ ಅಲ್ಲಿ ಜ್ಞಾನಜನಕ ಸಾಮಗ್ರಿಯು ಇದ್ದರೂ ಪ್ರಾಮಾಣ್ಯವು ಉತ್ಪತ್ತಿಯಾಗಿಲ್ಲ. ಆದ್ದರಿಂದ ಪ್ರಾಮಾಣ್ಯದ ಸ್ವತಸ್ತ್ವಕ್ಕೆ ಭಂಗ ಉಂಟಾಯಿತೆಂದರೆ ಇಲ್ಲಿ ಹೀಗೆ ಪರಿಷ್ಕಾರ ಮಾಡಬೇಕು ಪ್ರಾಮಾಣ್ಯಕ್ಕೆ ಸ್ವತಸ್ತ್ವ ಬರಬೇಕಾದರೆ ಜ್ಞಾನಜನಕ

ಇದ್ದಾಗ ಪ್ರಾಮಾಣ್ಯ ಹುಟ್ಟಲೇ ಬೇಕೆಂದು ಅಭಿಪ್ರಾಯವಲ್ಲ ಮತ್ತೇನೆಂದರೆ ಪ್ರಾಮಾಣ್ಯವು ಜ್ಞಾನಜನಕ ಮಾತ್ರದಿಂದ ಹುಟ್ಟುವ ಯೋಗ್ಯತೆಯನ್ನು ಪಡೆದಿರುತ್ತದೆ ಎಂದು ಅರ್ಥ. ಜ್ಞಾನಜನಕದಿಂದ ಪ್ರಾಮಾಣ್ಯವು ಉತ್ಪತ್ತಿಯಾದರೆ ಮಾತ್ರ ಅದಕ್ಕೆ ಸ್ವತಸ್ತ್ವ ಬಂದಂತಾಗುತ್ತದೆ ಎಂದು ಅಭಿಪ್ರಾಯವಿಟ್ಟುಕೊಂಡರೂ ಕೂಡ ದೋಷ ಬರುವುದಿಲ್ಲ. ಪ್ರಾಮಾಣ್ಯಕ್ಕೆ ವಿರೋಧಿಯಾದ ಸಾಮಗ್ರಿ ಇಲ್ಲದಿರುವಾಗ ಜ್ಞಾನಜನಕ ಸಾಮಗ್ರಿಯಿಂದ ಪ್ರಾಮಾಣ್ಯವು ಹುಟ್ಟುತ್ತದೆ. ಇದೇ ಅದರ ಸ್ವತಸ್ತ್ವ ಎಂದು ಭಾವ. ಈಗ ದೋಷವಿಲ್ಲ. ಏಕೆಂದರೆ ಭ್ರಮಸ್ಥಳದಲ್ಲಿ ಪ್ರಾಮಾಣ್ಯ ವಿರೋಧಿ ಸಾಮಗ್ರಿಯೇ ಇದೆ. ಆದ್ದರಿಂದ ಅಲ್ಲಿ ಪ್ರಾಮಾಣ್ಯ ಹುಟ್ಟದಿದ್ದರೂ ಅದರ ಸ್ವತಸ್ತ್ವಕ್ಕೇನೂ ಭಂಗವಿಲ್ಲ.

ಇಷ್ಟು ಪರಿಷ್ಕರಿಸಿದರೂ ಒಂದು ಶಂಕೆ ಬರಬಹುದು. ವಿರೋಧಿ ಸಾಮಗ್ರಿ ಇಲ್ಲದಿರುವಾಗ ಜ್ಞಾನಜನಕಸಾಮಗ್ರಿಗಳಲ್ಲಿ ಯಾವುದಾದ ರೊಂದು ಮಾತ್ರ ಇರುವಾಗ ಜ್ಞಾನಜನಕವಿದೆ. ವಿರೋಧಿ ಇಲ್ಲ ಆದರೂ ಪ್ರಾಮಾಣ್ಯ ಹುಟ್ಟಿಲ್ಲ ಆದ್ದರಿಂದ ಸ್ವತಸ್ತ್ವ ಬರಲಿಲ್ಲ ಎಂದು. ಅದರ ಪರಿಹಾರಕ್ಕಾಗಿ - ಜ್ಞಾನಜನಕ ಎಂಬ ಪದಕ್ಕೆ ಜ್ಞಾನ ಹುಟ್ಟಿಸುವ ಯೋಗ್ಯತೆಯುಳ್ಳದ್ದೆಂದು ಅರ್ಥ ಮಾಡದೇ ಜ್ಞಾನವನ್ನು ಹುಟ್ಟಿಸು ವಂತಹುದು ಎಂದು ಅರ್ಥ ಮಾಡಬೇಕು. ಕೇವಲ ಒಂದು ಪದಾರ್ಥ ಮಾತ್ರ ಇದ್ದರೆ ಅದು ಜ್ಞಾನಜನನಯೋಗ್ಯತೆ ಉಳ್ಳದ್ದಾಗುತ್ತದೆ ಹೊರತು ಹುಟ್ಟಿಸುವಂಥದ್ದಾಗುವುದಿಲ್ಲ. ಅಥವಾ ಮಾತ್ರ ಪದಕ್ಕೆ ಸಮಗ್ರ ಎಂದರ್ಥ. ಒಂದು ಸಾಧನ ಮಾತ್ರ ಇದ್ದಾಗ ಸಮಗ್ರ ಜನಕವಿಲ್ಲವಾದ್ದರಿಂದ ಪ್ರಾಮಾಣ್ಯ ಹುಟ್ಟದಿದ್ದರೂ ದೋಷ ಬರುವುದಿಲ್ಲ.

ಪ್ರಾಮಾಣ್ಯಕ್ಕೆ ಗುಣಜನ್ಯತ್ವವನ್ನು ಹೇಳುವ ತಾರ್ಕಿಕರೂ ಕೂಡ ಜ್ಞಾನ ಜನಕ ಸಾಮಗ್ರೀಜನ್ಯತ್ವವನ್ನೂ ಒಪ್ಪುತ್ತಾರಾದ್ದರಿಂದ ಸಿದ್ಧಸಾಧನತಾ ದೋಷ ಬರುತ್ತದೆ ಎಂದು ಆಕ್ಷೇಪಿಸಿದರೆ ಇದು ಸರಿಯಲ್ಲ. ಏಕೆಂದರೆ ಇಲ್ಲಿ ಸ್ವತಸ್ತ್ವವೆಂದರೆ ಕೇವಲ ಜ್ಞಾನಜನಕಸಾಮಗ್ರಿಯಿಂದ ಪ್ರಾಮಾಣ್ಯ ಉತ್ಪತ್ತಿಯಾಗುವುದು ಎಂದರ್ಥ. ತಾರ್ಕಿಕರು ಗುಣ ಜನ್ಯತ್ವವನ್ನೂ ಒಪ್ಪುವ

ವರಾದ್ದರಿಂದ ಇಂತಹ ಸ್ವತಸ್ತ್ವವು ಅವರಿಗೆ ಸಮ್ಮತವಲ್ಲ ಆದ್ದರಿಂದ ಸಿದ್ಧ ಸಾಧನತಾ ದೋಷ ಬರುವುದಿಲ್ಲ.

## ಅನ್ವಿತಾಭಿಧಾನವಾದ- ವಿರೋಧ ಪರಿಹಾರ

ಶ್ರೀಮನ್ನ್ಯಾಯಸುಧಾದಲ್ಲಿ ಮಧ್ವಸಿದ್ಧಾಂತದ ಒಂದು ಮುಖ್ಯ ಪ್ರಮೇಯವು ಹೀಗೆ ನಿರೂಪಿತವಾಗಿದೆ. ಯಾವ ಯಾವ ಪದಕ್ಕೆ ಯಾವ ಯಾವ ಅರ್ಥವಿದೆ ಎಂಬುದಾಗಿ ಪದ ಪದಾರ್ಥಗಳ ಸಂಗತಿಯನ್ನು ತಿಳಿಯುವ ಸಂದರ್ಭದಲ್ಲಿ ಘಟ ಮುಂತಾದ ಪದಗಳು 'ಸಾಮಾನ್ಯವಾಗಿ ಬೇರೆ ಯಾವುದೋ ಒಂದು ಪದಾರ್ಥದಿಂದ ಅನ್ವಿತವಾದ ಘಟ ಮುಂತಾದ ಪದಾರ್ಥಗಳನ್ನು ತಿಳಿಸುತ್ತವೆ.' ಎಂದು ಘಟಾದಿ ಪದಗಳಲ್ಲಿರುವ ಸಾಮಾನ್ಯಾನ್ವಿತ ಬೋಧಕತ್ವಶಕ್ತಿಯು ಗ್ರಹಿಸಲ್ಪಟ್ಟಿರುತ್ತದೆ. ಅದೇ ಘಟ ಪದವು ಒಂದು ವಾಕ್ಯದಲ್ಲಿ ಪದಾಂತರದ ಜೊತೆಗೆ ಪ್ರಯೋಗಿಸಲ್ಪಟ್ಟಾಗ ಆ ಪದಾಂತರ ಸಮಭಿವ್ಯಾಹಾರದಿಂದಾಗಿ ಸಾಮಾನ್ಯವು ವಿಶೇಷದಲ್ಲಿ ಪರ್ಯವಸಾನ ಹೊಂದುತ್ತದೆ. ಹೀಗೆ ಆನಯನಾದಿ ವಿಶೇಷಾನ್ವಿತ ಘಟವು ತಿಳಿಯಲ್ಪಡುತ್ತದೆ. ಹೊರತು ಪದಾಂತರ ಸಮಭಿವ್ಯಾಹಾರದಿಂದ ಘಟಪದದಲ್ಲಿ ಹೊಸ ಶಕ್ತಿಯೇನೂ ಉತ್ಪತ್ತಿಯಾಗುವುದಿಲ್ಲ ಎಂದು

ಆದರೆ ಪ್ರಮಾಣ ಪದ್ಧತಿಯಲ್ಲಿ ''ಪ್ರತ್ಯೇಕಂ ಸಾಮಾನ್ಯತೋ ಯೋಗ್ಯೇತರಾನ್ವಿತ ಸ್ವಾರ್ಥಾಭಿಧಾನಶಕ್ತೀನಿ ಪದಾನಿ ಪದಾಂತರಸನ್ನಿಧಾನಾ ಹಿತಶಕ್ತ್ಯಂತರಾಣಿ...... ವಿಶೇಷತೋಽಪಿ ಅನ್ವಿತಾನ್ ಸ್ವಾರ್ಥಾನ್ ಅಭಿದಧತಿ '' ಸಾಮಾನ್ಯವಾಗಿ ಇತರಾನ್ವಿತಾಭಿಧಾನ ಶಕ್ತಿಯುಳ್ಳ ಪದಗಳು ಪದಾಂತರಸಮಭಿವ್ಯಾಹಾರದಿಂದ ಆಹಿತವಾದ ಶಕ್ತ್ಯಂತರ ಉಳ್ಳವುಗಳಾಗಿ ವಿಶೇಷಾನ್ವಿತಸ್ವಾರ್ಥವನ್ನು ಬೋಧಿಸುತ್ತವೆ ಎಂಬುದಾಗಿ ಹೇಳಿದಂತೆ ಕಂಡು ಬರುತ್ತದೆ. ಅಲ್ಲಿ ಸ್ಪಷ್ಟವಾಗಿ ಪದಾಂತರ ಸಮಭಿವ್ಯಾಹಾರದಿಂದ ಹೊಸ ಶಕ್ತಿಯುಂಟಾಗುತ್ತದೆ ಎಂದು ಹೇಳಿದ್ದರಿಂದ ಈ ವಾಕ್ಯದ ವಿರೋಧ ಬರುತ್ತದೆ ಎಂದರೆ, ಇದು ಸರಿಯಲ್ಲ. ಏಕೆಂದರೆ ಪದ್ಧತಿಯಲ್ಲಿರುವ 'ಪದಾಂತರಸನ್ನಿಧಾನಾಹಿತಶಕ್ತ್ಯಂತರಾಣಿ 'ಎಂಬಲ್ಲಿ ಪದಾಂತರ ಸನ್ನಿಧಾನೇನ ಆಹಿತಂ ಶಕ್ತ್ಯಂತರಂ ಯೇಷಾಂ (ಪದಾಂತರ ಸನ್ನಿಧಾನದಿಂದ

ಹೊಸ ಶಕ್ತಿಯನ್ನು ಹೊಂದಿದ) ಎಂದು ಅರ್ಥವಲ್ಲ, ಮತ್ತೇನೆಂದರೆ, ಪದಾಂತರ ಸನ್ನಿಧಾನಮೇವ ಆಹಿತ ಶಕ್ತ್ಯಂತರಂ ಯೇಷಾಂ (ಪದಾಂತರ ಸಮಭಿವ್ಯಾಹಾರ ರೂಪವೇ ಆದ ಸಹಕಾರಿಯುಳ್ಳದ್ದಾಗಿ) ಎಂದು ಅರ್ಥ ಮಾಡಬೇಕು. ಆವಾಗ 'ಹೊಸ ಶಕ್ತಿಯುಂಟಾಗುವುದಿಲ' ಎಂಬ ಸುಧಾವಾಕ್ಯಕ್ಕೆ ವಿರೋಧ ಬರುವುದಿಲ್ಲ.

## ವಿರೋಧ ಪರಿಹಾರ - ಚತುರ್ದಶ ವಿದ್ಯಾಸ್ಥಾನಗಳು

ಏತತ್ ಸರ್ವಂ ತರ್ಕಶಾಸ್ತ್ರೇ ಬ್ರಹ್ಮ ತರ್ಕೇ ಹಿ ವಿಸ್ತರಾತ್ ।
ಉಕ್ತಂ ವಿದ್ಯಾ ಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ।

ಎಂಬ ಅನುವ್ಯಾಖ್ಯಾನ ಶ್ಲೋಕವನ್ನು ವಿವರಿಸುತ್ತಾ, ಶ್ರೀಮಜ್ಜಯ ತೀರ್ಥರು ವೇದಾ: ಸರ್ವಾಂಗಾನಿ ಸತ್ಯಮಾಯತನಂ ಎಂಬ ತಲವಕಾರೋಪನಿಷತ್ತಿನ ವಾಕ್ಯವನ್ನು ಉದಾಹರಿಸಿ ವ್ಯಾಖ್ಯಾನ ಮಾಡಿದ್ದಾರೆ. ವೇದಗಳೆಂದರೆ ನಾಲ್ಕು ವೇದಗಳು ಸರ್ವಾಂಗಾನಿ ಎಂದರೆ ಪುರಾಣ, ಸ್ಮೃತಿ, ಮತ್ತು ಬ್ರಹ್ಮ ತರ್ಕ ಸಹಿತವಾಗಿ ಷಡಂಗಗಳು ಸತ್ಯ ಎಂದರೆ ಮೀಮಾಂಸೆ ಹೀಗೆ ಒಟ್ಟು ಹದಿನಾಲ್ಕು ವಿದ್ಯಾ ಸ್ಥಾನಗಳು ಎಂದು.

ಆದರೆ ತಲವಕಾರ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಆ ವಾಕ್ಯಕ್ಕೆ

' ಋಗ್ಯಜುಸ್ಸಾಮಾಥರ್ವಾ: ಪಂಚರಾತ್ರಂಚ ಭಾರತಮ್ '
ಮೂಲ ರಾಮಾಯಣಂ ಚೈವ ಪುರಾಣಂ ಭಗವತ್ಪರಮ್ ।
ವೇದಾ ಇತ್ಯುಚ್ಚತೇ ಸದ್ಭಿ: ಶಿಕ್ಷಾದ್ಯಂ ಸ್ಮೃತಯಸ್ತಥಾ
ಅಂಗಾನಿ ಸತ್ಯಂ ಮೀಮಾಂಸಾ ತದ್ವಿದ್ಯಾಧ್ಯಯನಂ ತಥಾ । ಎಂದು

ವ್ಯಾಖ್ಯಾನ ಮಾಡಿದ್ದಾರೆ. ಆ ಭಾಷ್ಯದ ಪ್ರಕಾರ ವೇದ ಎಂಬುದರಿಂದ ನಾಲ್ಕು ವೇದಗಳು, ಪಂಚರಾತ್ರಾಗಮ, ಭಾರತ, ಮೂಲರಾಮಾಯಣ ಮತ್ತು ಪುರಾಣಗಳನ್ನೂ ಗ್ರಹಿಸಬೇಕು. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಶ್ಶಾಸ್ತ್ರ ಮತ್ತು ಜ್ಯೋತಿಷ ಈ ಆರು ವೇದಾಂಗಗಳು ಮತ್ತು ಸ್ಮೃತಿಗಳು ಅಂಗ ಎನಿಸುತ್ತವೆ. ಸತ್ಯ ಎಂದರೆ ಮೀಮಾಂಸೆ ಬ್ರಹ್ಮ ತರ್ಕವನ್ನು ಸೇರಿಸಿಲ್ಲ. ಆದ್ದರಿಂದ ಇಲ್ಲಿಯ ಸುಧಾ ಗ್ರಂಥಕ್ಕೆ ತಲವಕಾರ ಭಾಷ್ಯದಿಂದ ವಿರೋಧ ಬರುತ್ತದೆಂದು ಆಕ್ಷೇಪ.

ಇದಕ್ಕೆ ಸಮಾಧಾನ - ವೇದ ಶಬ್ದಕ್ಕೆ ತಲವಕಾರಭಾಷ್ಯದಲ್ಲಿ ಹೇಳಿದಂತೆ ವ್ಯಾಪಕವಾದ ಅರ್ಥವಿದ್ದರೂ ಅವುಗಳಲ್ಲಿ ಅನುಗ್ರಾಹ್ಯವಾದವುಗಳು ಋಗಾದಿ ನಾಲ್ಕು ವೇದಗಳು ಮಾತ್ರವಾದುದರಿಂದ ಇಲ್ಲಿ ವೇದ ಶಬ್ದದಿಂದ ನಾಲ್ಕನ್ನು ಮಾತ್ರ ಪರಿಗ್ರಹಿಸಿದ್ದಾರೆ. ಅಂಗವೆಂದರೆ ವೇದೋಪ ಬೃಂಹಕ ಎಂದು ಅರ್ಥವನ್ನಿಟ್ಟುಕೊಂಡು ಪುರಾಣವನ್ನು ಅಂಗದಲ್ಲಿ ಸೇರಿಸಿದ್ದಾರೆ. ತಲವಕಾರಭಾಷ್ಯದಲ್ಲಿ ಬ್ರಹ್ಮತರ್ಕವನ್ನು ಹೇಳದಿದ್ದರೂ ಲಕ್ಷಣಯಾ ಇಟ್ಟುಕೊಳ್ಳಬೇಕೆಂಬ ಅಭಿಪ್ರಾಯದಿಂದ ಅಥವಾ ಶಿಕ್ಷಾದ್ಯಂ ಎಂಬಲ್ಲಿರುವ ಆದ್ಯ ಪದದಿಂದ ಪರಿಗ್ರಹಿಸಬೇಕೆಂಬ ಅಭಿಪ್ರಾಯದಿಂದ ಇಲ್ಲಿ ಬ್ರಹ್ಮತರ್ಕವನ್ನು ಸೇರಿಸಿದ್ದಾರೆ. ಆದ್ದರಿಂದ ಯಾವ ವಿರೋಧವಿಲ್ಲ.

**ನಾರಾಯಣ ಶಬ್ದ**

ಶ್ರೀಮಟ್ಟೀಕಾಕೃತ್ಪಾದರು ನಾರಾಯಣ ಶಬ್ದ ನಿರ್ವಚನ ಮಾಡುತ್ತಾ ಇದು ನಞ್ ಸಮಾಸವೆಂಬುದನ್ನು ಸಮರ್ಥನೆ ಮಾಡಿ ಅನಂತರದಲ್ಲಿ ಅಥವಾ ಎಂದು ಪಕ್ಷಾಂತರವನ್ನಾಶ್ರಯಿಸಿ ''ಅ,ಮಾ,ನೋ,ನಾ: ಪ್ರತಿಷೇಧೆ:'' ಎಂಬ ಗಣ ಪಾಠದ ಪ್ರಕಾರ ಅ,ಮಾ,ನೋ ಮತ್ತು ನ ಈ ಅಕ್ಷರಗಳು ನಿಷೇಧ ವಾಚಕಗಳಾದ್ದರಿಂದ ನಾರಾಯಣ ಎಂಬಲ್ಲಿ 'ನ' ಪದದೊಂದಿಗೆ ಸಮಾಸವಾಗಿದೆಯೆಂದು ಭಾವಿಸಬಹುದು ಎಂದಿದ್ದಾರೆ. ಆದರೆ ಇಲ್ಲಿ ನಿಷೇಧಾರ್ಥಕ ಸಮಾಸವೆಂದು ಭಾವಿಸಿದರೆ ನಾರಾಯಣ ಶಬ್ದ ದೋಷ ನಿಷೇಧವನ್ನೂ ತಿಳಿಸಿದಂತಾಗುತ್ತದೆ ಹೊರತು ಗುಣ ಪೂರ್ಣತ್ವ ವಾಚಕವಾಗುವುದಿಲ್ಲ ಎಂದು ಪ್ರಶ್ನೆ ಬರುತ್ತದೆ - ಇದಕ್ಕೆ ಹೀಗೆ ಸಮಾಧಾನ - ನಾರ ಶಬ್ದವು ನಿಷೇಧವಾಚಕವಾದರೂ ಪ್ರಯೋಗಾನುಸಾರವಾಗಿ ಅದಕ್ಕೆ ಗುಣವಾಚಕತ್ವವನ್ನು ಕಲ್ಪಿಸಬೇಕು. ಅಥವಾ ನಾರ ಶಬ್ದಕ್ಕೆ 'ಗುಣ'ದಲ್ಲಿ ಲಕ್ಷಣಾ ವೃತ್ತಿಯನ್ನು ಅಂಗೀಕರಿಸಬೇಕು ಆಗ ನಾರಾಯಣ ಶಬ್ದವು ಗುಣ ಪೂರ್ಣತ್ವವನ್ನು ತಿಳಿಸುತ್ತದೆ.

ನಿಷೇಧಾರ್ಥಕವಾದ 'ನ' ಶಬ್ದವೇ ಇಲ್ಲ ಎಂದು ಚಿಂತಾಮಣಿಕಾರರು ಹೇಳಿದ್ದನ್ನು ತರ್ಕತಾಂಡವ ವಿವೃತಿಯಲ್ಲಿ ನಞ್‌ರ್ಥ ನಿರ್ಣಯ ವಾದದಲ್ಲಿ ನಿರಾಸ ಮಾಡಲಾಗಿದೆ. ರಾಘವೇಂದ್ರತೀರ್ಥರ ನ್ಯಾಯದೀಪದಲ್ಲಿ ಇಲ್ಲಿಯೂ ಶ್ರೀಮಜ್ಜಯತೀರ್ಥರು ಗಣ ಪಠಿತ ನ ಶಬ್ದ ಎಂದು

ಹೇಳುವುದರ ಮೂಲಕ ನಿರಾಸ ಮಾಡಿದ್ದಾರೆಂದು ಭಾವಿಸಬೇಕು ಏಕೆಂದರೆ 'ಚಾದಯ: ಅಸತ್ವೇ' ಎಂಬ ಸೂತ್ರದಲ್ಲಿ ಹೇಳಿದ ಚಾದಿ ಗಣದಲ್ಲಿ ನಞ್‌ನ್ನು ಪ್ರತ್ಯೇಕವಾಗಿ ಪಠಿಸಿ, ಅಮಾನೋನಾ: ಪ್ರತಿಷೇಧೇ ಎಂಬುದಾಗಿಯೂ ಪ್ರತ್ಯೇಕವಾಗಿ ಗಣ ಪಾಠ ಮಾಡಿದ್ದರಿಂದ ನಞ್‌ಗಿಂತ ಭಿನ್ನವಾದ 'ನ' ಶಬ್ದವಿದೆಯೆಂದು ತಿಳಿಯುತ್ತದೆ.

**ಸ್ರಷ್ಟೃತ್ವಾದಿಗಳು ಸಾರ್ವಕಾಲಿಕ**

ಸೃಷ್ಟಿ: ಸ್ಥಿತಿ: ಸಂಹೃತಿಶ್ಚ ನಿಯತಿರ್ಜ್ಞಾನಮಾವೃತಿ:।
ಬಂಧ ಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾ ಹರೇ: ಸದಾ ॥

ಸೃಷ್ಟಿ ಕರ್ತೃತ್ವಾದಿ ಧರ್ಮಗಳು ಪರಮಾತ್ಮನಲ್ಲಿ ಯಾವಾಗಲೂ ಇರುತ್ತವೆ. ಆ ಗುಣಗಳು ಸಾರ್ವಕಾಲಿಕ ಎಂದು ತಿಳಿಸಲು ಅನುವ್ಯಾಖ್ಯಾನದ ಶ್ಲೋಕದಲ್ಲಿ ಸದಾ ಎಂದು ಹೇಳಿದ್ದಾರೆ. ಶ್ರೀಮನ್ನ್ಯಾಯಸುಧಾದಲ್ಲಿ ಸದಾ ಪದವು ಸ್ರಷ್ಟೃತ್ವಾದಿ ಧರ್ಮಗಳಿಗೆ ಪರಸ್ಪರ ಅವಿರೋಧವನ್ನು ಸೂಚಿಸುತ್ತದೆ ಎಂದು ವ್ಯಾಖ್ಯಾನಿಸಿದ್ದಾರೆ.

ಇದರ ಅಭಿಪ್ರಾಯವೇನೆಂದರೆ - ಭಗವಂತನಲ್ಲಿ ಸೃಷ್ಟಿ ಕರ್ತೃತ್ವವಿರುವಾಗ ಅಂದರೆ ಭಗವಂತನು ಸೃಷ್ಟಿಮಾಡುವಾಗ ಅವನಲ್ಲಿ ಸ್ಥಿತಿ ಕರ್ತೃತ್ವವು ಇರುವುದಿಲ್ಲ. ಸ್ಥಿತಿ ಕಾಲದಲ್ಲಿ ಸೃಷ್ಟಿಸಂಹಾರಕರ್ತೃತ್ವಗಳಿರುವುದಿಲ್ಲ. ಸಂಹಾರ ಕಾಲದಲ್ಲಿ ಸೃಷ್ಟ್ಯಾದಿ ವ್ಯಾಪಾರವಿರುವುದಿಲ್ಲ. ಪರಸ್ಪರ ವಿರುದ್ಧವಾದ್ದರಿಂದ. ಆದ್ದರಿಂದ ಸೃಷ್ಟ್ಯಾದಿ ಕರ್ತೃತ್ವವನ್ನು ಭಿನ್ನಭಿನ್ನ ಕಾಲದಲ್ಲಿರುವ ಲಕ್ಷಣ ಎಂದು ಭಾವಿಸಬೇಕು. ಹೀಗೆ ರಾಮಾನುಜರು ಹೇಳುತ್ತಾರೆ.

ಇದು ಸರಿಯಲ್ಲ- ಆ ಸ್ರಷ್ಟೃತ್ವಾದಿ ಧರ್ಮಗಳಿಗೆ ಪರಸ್ಪರ ವಿರೋಧವಿಲ್ಲ. ಅವುಗಳು ಸಾರ್ವಕಾಲಿಕ ಎಂದು ಸೂಚಿಸಲು ಸದಾ ಎಂದು ಹೇಳಿದ್ದಾರೆ. ಅವಿರೋಧ ಪ್ರಕಾರವನ್ನು ಚಂದ್ರಿಕಾ ಗ್ರಂಥದಿಂದ ತಿಳಿಯಬೇಕು.

**ಜನ್ಮಾದಿ ಸೂತ್ರಕ್ಕೆ ನ್ಯಾಯಸೂತ್ರತ್ವ ಭಂಗವಿಲ್ಲ.**

ಬ್ರಹ್ಮ ಸೂತ್ರಗಳೆಲ್ಲವೂ ನ್ಯಾಯ ಸೂತ್ರಗಳೆಂದು ಪರಿಗಣಿಸಲ್ಪಟ್ಟಿವೆ. ನ್ಯಾಯ ಸೂತ್ರವೆಂದರೆ ಶ್ರುತ್ಯರ್ಥವಿಷಯದಲ್ಲಿ ಬಂದ ಸಂಶಯ ವಿಪರೀತ

ಜ್ಞಾನಗಳನ್ನು ನಿವಾರಿಸುವುದರ ಮೂಲಕ ಅದರ ನಿರ್ಣಯ ರೂಪ ಉಪಕಾರ ಜನಕವಾದದ್ದು ಎಂದರ್ಥ.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವಾದರೂ ಭಗವಂತನಲ್ಲಿರುವ ಜನ್ಮಾದಿಕಾರಣತ್ವ ರೂಪ ಲಕ್ಷಣವನ್ನು ನಿರೂಪಿಸತ್ತದೆಯೇ ಹೊರತು ಶ್ರುತ್ಯರ್ಥದಲ್ಲಿ ಬಂದಿರುವ ಸಂದೇಹವನ್ನು ಪರಿಹರಿಸುವುದರ ಮೂಲಕ ವೇದೋಪಕಾರಕವಾಗಿಲ್ಲ ಆದ್ದರಿಂದ ಅದಕ್ಕೆ ನ್ಯಾಯಸೂತ್ರತ್ವ ಹೇಗೆ? ಎಂದು ಆಕ್ಷೇಪಬರುತ್ತದೆ. ಅದರ ಪರಿಹಾರಕ್ಕಾಗಿಯೇ ಶ್ರೀಮಟ್ಟೀಕಾ ಕೃತ್ಪಾದರು 'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿ ರ್ಜ್ಞಾನಮಾವೃತಿಃ । ಬಂಧಮೋಕ್ಷವಪಿ ಹ್ಯಾಸು ಶ್ರುತಿಷೂಕ್ತಾ ಹರೇಃ ಸದಾ' ಎಂಬ ಅನುವ್ಯಾಖ್ಯಾನ ಶ್ಲೋಕಕ್ಕೆ ಹಿಂದೆ ಹೇಳಿದ ಯೋಜನೆಗಿಂತ ಭಿನ್ನವಾದ ಯೋಜನೆಯನ್ನು 'ಅಥವಾ' ಇತ್ಯಾದಿಯಾಗಿ ತೋರಿಸಿದ್ದಾರೆ. ಆಗ ನ್ಯಾಯಸೂತ್ರತ್ವಕ್ಕೆ ಹಾನಿ ಇಲ್ಲ.

ಅದು ಹೇಗೆಂದರೆ - ಜನ್ಮಾದಿ ಸೂತ್ರಕ್ಕೆ 'ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬುದೇ ವಿಷಯವಾಕ್ಯ. ಇಲ್ಲಿರುವ ಬ್ರಹ್ಮ ಪದವು ಗುಣಪೂರ್ತಿ ವಾಚಕವೆಂದಿಟ್ಟುಕೊಂಡು ಜೀವಾತಿರಿಕ್ತವಸ್ತುವೇ ಜಿಜ್ಞಾಸ್ಯ ಎಂದು ಪ್ರಥಮ ಸೂತ್ರದಲ್ಲಿ ಹೇಳಿದ್ದಾರೆ.ಆದರೆ ಬ್ರಹ್ಮ ಪದಕ್ಕೆ ಜೀವಬೋಧಕತ್ವವೂ ಇರುವುದರಿಂದ ಇಲ್ಲಿರುವ ಬ್ರಹ್ಮಪದವು ಗುಣಪೂರ್ತಿಪರವೋ ಅಥವಾ ಪ್ರಸಿದ್ಧ ಜೀವಪರವೋ ಎಂದು ಸಂದೇಹ.

ಲಾಘವವಿರುವದರಿಂದ ಪ್ರಸಿದ್ಧನಾದ ಜೀವನೇ ಬ್ರಹ್ಮಶಬ್ದಾರ್ಥ. ಹೇಗೆಂದರೆ ಜೀವನಂತೂ ಸ್ವರೂಪತಃ ಪ್ರಸಿದ್ಧ. ಬ್ರಹ್ಮಶಬ್ದಕ್ಕೆ ಜೀವನಲ್ಲಿ ಶಕ್ತಿಯೂ ಇದೆ. ಜೀವಪರಿತ್ಯಾಗಕ್ಕೆ ಕಾರಣವಿಲ್ಲವಾದುದರಿಂದ ತಾತ್ಪರ್ಯವೂ ಸಿದ್ಧವಾಗುತ್ತದೆ. ಜೀವನು ಸ್ವರೂಪತಃ ಪ್ರಸಿದ್ಧನಾಗಿದ್ದರೂ ದೇಹಕ್ಕಿಂತ ಅತಿ ವಿವಿಕ್ತನಾಗಿ ಪ್ರಸಿದ್ಧನಾಗಿಲ್ಲ ಆದ್ದರಿಂದ ವಿಚಾರ ವಿಷಯತ್ವವು ಬರುತ್ತದೆ. ಆದ್ದರಿಂದ ಬ್ರಹ್ಮ ಶಬ್ದವು ಜೀವ ಪರ ಎಂದು ಪೂರ್ವಪಕ್ಷ. ಇದಕ್ಕೆ ಉತ್ತರವಾಗಿ ಜನ್ಮಾದಿ ಸೂತ್ರ ಪ್ರವೃತ್ತವಾಗಿದೆ. ಇದರಿಂದ ಏನು ಸಿದ್ಧಾಂತವಾಯಿತೆಂದರೆ - ಜಿಜ್ಞಾಸಾವಿಧಾಯಕವಾದ 'ತದ್ವಿಜಿಜ್ಞಾಸಸ್ವ ಸೋಽನ್ವೇಷ್ಟವ್ಯಃ' ಇತ್ಯಾದಿ ಶ್ರುತಿಗಳಲ್ಲಿ ಜಿಜ್ಞಾಸ್ಯನಲ್ಲಿ

ಸ್ರಷ್ಟೃತ್ವಾದಿ ಲಕ್ಷಣಗಳು ಉಕ್ತವಾಗಿವೆ. ಆ ಲಕ್ಷಣಗಳು ಜೀವನಲ್ಲಿಲ್ಲವಾದ್ದರಿಂದ ಜೀವನು ಪ್ರಸಿದ್ಧನಾದರೂ ಈ ಬಾಧಕ ವಿರುವುದರಿಂದ ಆ ಅರ್ಥವನ್ನು ಬಿಟ್ಟು ಗುಣ ಪೂರ್ಣನಾದ ಬ್ರಹ್ಮನನ್ನೇ ಇಟ್ಟುಕೊಳ್ಳಬೇಕು ಎಂದು. ಹೀಗೆ ಜನ್ಮಾದಿ ಸೂತ್ರವೂ ಕೂಡ ಶ್ರುತ್ಯರ್ಥ ನಿರ್ಣಾಯಕವಾದುದರಿಂದ ನ್ಯಾಯಸೂತ್ರವೇ ಆಗಿದೆ.

**ಅಪಹತ ಪಾಪ್ಮಾ ಇತ್ಯಾದಿ ಪದಗಳ ಅರ್ಥ.**

ಜನ್ಮಾದ್ಯಷ್ಟಕರ್ತೃತ್ವವು ಪರಬ್ರಹ್ಮನ ಲಕ್ಷಣ ಎಂದು ಹೇಳಲಾಗಿದೆ - ಇಲ್ಲಿ ಸೃಷ್ಟಿಕರ್ತೃತ್ವ ಅಥವಾ ಪಾಲನ ಕರ್ತೃತ್ವ ಇವೇ ಮೊದಲಾದ ಒಂದೊಂದು ಲಕ್ಷಣವೂ ಕೂಡ ಪರಬ್ರಹ್ಮನಲ್ಲಿ ಅಸಾಧಾರಣವಾಗಿರುವಾಗ ಯಾವುದಾದರೂ ಒಂದು ಲಕ್ಷಣವನ್ನು ಹೇಳಿದ್ದರೂ ಸಾಕಾಗಿತ್ತು. ಸೂತ್ರದಲ್ಲಿ ಎಂಟು ಲಕ್ಷಣಗಳನ್ನು ಹೇಳಿದ್ದೇಕೆ ಎಂಬ ಪ್ರಶ್ನೆಗೆ 'ಸೃಷ್ಟಿಃ ಸ್ಥಿತಿಶ್ಚ' ಎಂಬ ಅನುವ್ಯಾಖ್ಯಾನ ಶ್ಲೋಕದಲ್ಲಿ ಹೀಗೆ ಉತ್ತರ ಕೊಟ್ಟಿದ್ದಾರೆ- ಜಿಜ್ಞಾಸಾವಿಧಾಯಕ ಶ್ರುತಿಗಳು ಅನೇಕ ಇವೆ. ಒಂದೊಂದು ಶ್ರುತಿಯಲ್ಲಿ ಒಂದೊಂದು ಲಕ್ಷಣವನ್ನು ಹೇಳಿದ್ದಾರೆ. ಆದ್ದರಿಂದ ಎಂಟು ಲಕ್ಷಣಗಳನ್ನು ಹೇಳಲಾಗಿದೆ ಎಂದು. ಯದ್ಯಪಿ ಜಿಜ್ಞಾಸಾ ಶ್ರುತಿಗಳು ಅನೇಕವಿದ್ದರೂ, ಒಂದೊಂದರಲ್ಲಿ ಒಂದೊಂದು ಲಕ್ಷಣ ಹೇಳಲ್ಪಟ್ಟಿದ್ದರೂ ಯಾವುದಾದರೂ ಒಂದು ಶ್ರುತಿಯಲ್ಲಿ ಹೇಳಲ್ಪಟ್ಟ ಒಂದು ಲಕ್ಷಣವನ್ನು ಹೇಳಿದರೂ ಬ್ರಹ್ಮನಿಗೆ ಇತರ ವ್ಯಾವೃತ್ತಿ ಸಿದ್ಧವಾಗುತ್ತದೆ ಆದರೂ, ಪ್ರತಿಯೊಂದು ಜಿಜ್ಞಾಸಾ ವಿಧಾಯಕ ಶ್ರುತಿಯಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯನಿಗೆ ಜೀವ ಭೇದ ಸಿದ್ಧವಾಗಬೇಕು, ಆ ಜಿಜ್ಞಾಸಾವಿಧಾಯಕ ಶ್ರುತಿಯಲ್ಲಿರುವ ಬ್ರಹ್ಮ ಶಬ್ದವೋ ಅಥವಾ ಆತ್ಮ ಶಬ್ದವೋ ಯಾವುದಿದ್ದರೂ ಅದು ವಿಷ್ಣು ಪರವೆಂದು ನಿರ್ಧಾರವಾಗಬೇಕು. ಅದಕ್ಕಾಗಿ ಪ್ರತಿಯೊಂದೂ ಶ್ರುತಿಯಲ್ಲಿಯೂ ಹೇಳಲ್ಪಟ್ಟ ಧರ್ಮಗಳನ್ನು ಇಲ್ಲಿ ಲಕ್ಷಣವನ್ನಾಗಿ ಹೇಳಿದ್ದಾರೆ.

ಶ್ರೀಮನ್ನ್ಯಾಯಸುಧಾದಲ್ಲಿ ಜಿಜ್ಞಾಸಾವಿಧಾಯಕ ಶ್ರುತಿಗಳನ್ನು ಸಂಗ್ರಹಿಸುವಾಗ 'ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕಃ ವಿಜಿಘತ್ಸಃ ಅಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಎಂಬ ಶ್ರುತಿಯನ್ನು ಸೇರಿಸಿದ್ದಾರೆ. ಈ ಶ್ರುತಿಯಲ್ಲಿ

ಅಪಹತ ಪಾಪ್ಮತ್ವ, ವಿಜರತ್ವ, ವಿಶೋಕತ್ವ, ವಿಮೃತ್ಯುತ್ವ, ಸತ್ಯಕಾಮತ್ವಾದಿ ಧರ್ಮಗಳು ನಿರೂಪಿತವಾಗಿವೆ. ಆದರೆ ಈ ಧರ್ಮಗಳಾವುವೂ ಸೃಷ್ಟಿಕರ್ತೃತ್ವವೇ ಮೊದಲಾದ ಎಂಟು ಲಕ್ಷಣಗಳಲ್ಲಿ ಸೇರಿದವುಗಳಲ್ಲ. ಹೀಗೆ ಎಂಟು ಲಕ್ಷಣಗಳಲ್ಲಿ ಸೇರಿದ ಯಾವ ಲಕ್ಷಣವೂ ಈ ಶ್ರುತಿಯಲ್ಲಿಲ್ಲದಿರುವಾಗ ಈ ಶ್ರುತಿಯನ್ನು ಉದಾಹರಿಸಿದ್ದು ಹೇಗೆ? ಮತ್ತು ಈ ಶ್ರುತಿಯಲ್ಲಿರುವ ಧರ್ಮವನ್ನು ಲಕ್ಷಣವನ್ನಾಗಿ ಏಕೆ ಹೇಳಲಿಲ್ಲ ಎಂಬ ಸಂದೇಹ ಉಂಟಾಗುತ್ತದೆ.

ಇದರ ಪರಿಹಾರಕ್ಕೆ ಆ ಶ್ರುತಿಯಲ್ಲಿರುವ ಪದಗಳಿಗೆ ಬೇರೆ ಅರ್ಥವನ್ನು ಮಾಡಬೇಕು (ಅಪಹತಂ ಪಾಪ್ಮ ಯೇನ ಸಃ ಅಪಹತಪಾಪ್ಮಾ) ಪಾಪವನ್ನು ಪರಿಹರಿಸುವವನು ಎಂದರ್ಥೈಸಬೇಕೇ ಹೊರತು ಪಾಪ ಇಲ್ಲದವನು ಎಂದು ಮಾತ್ರ ಅಲ್ಲ. ಇದರಂತೆಯೇ ವಿಜರಃ- ಜರಾ ಇಲ್ಲದಂತೆ ಮಾಡುವವನು. ವಿಶೋಕಃ- ಶೋಕ ಇಲ್ಲದಂತೆ ಮಾಡುವವನು. ಸತ್ಯಕಾಮಃ- ಆಶೆ ಈಡೇರುವಂತೆ ಮಾಡುವವನು. ವಿಮೃತ್ಯುಃ- ಮೃತ್ಯು ಇಲ್ಲದಂತೆ ಮಾಡುವವನು.ಎಂದು ಅರ್ಥೈಸಿದಾಗ ಈ ಎಲ್ಲ ಧರ್ಮಗಳು ಮೋಕ್ಷಪ್ರದತ್ವದಲ್ಲಿಯೇ ಪರ್ಯವಸಾನಹೊಂದುವುದರಿಂದ ಎಂಟು ಲಕ್ಷಣಗಳಲ್ಲಿ ಸೇರಿದ ಮೋಕ್ಷ ಪ್ರದತ್ವವನ್ನು ಇಲ್ಲಿ ಹೇಳಿದಂತಾಯಿತು. ಈ ಶ್ರುತಿಯನ್ನು ಉದಾಹರಿಸಿದ್ದೂ ಸರಿಯಾಗುತ್ತದೆ. ಮತ್ತು ಈ ಶ್ರುತಿಯಲ್ಲಿ ಹೇಳಲ್ಪಟ್ಟ ಧರ್ಮವನ್ನು ಬಿಡಲಾಗಿದೆ ಎಂಬ ಶಂಕೆಗೂ ಅವಕಾಶವಿಲ್ಲ.

**ಸಾಮಾನಾಧಿಕರಣ್ಯಮಾತ್ರಂ ಗೌಣಂ**

ತತ್ತ್ವಮಸಿ ಎಂಬ ಶ್ರುತಿಯಲ್ಲಿ ತತ್ ಪದಕ್ಕೆ ಸರ್ವಜ್ಞತ್ವಾದಿ ವಿಶಿಷ್ಟ ಬ್ರಹ್ಮ ಎಂದರ್ಥ. ತ್ವಂ ಪದಕ್ಕೆ ಅಲ್ಪಜ್ಞತ್ವಾದಿ ವಿಶಿಷ್ಟ ಜೀವ ಎಂದರ್ಥ. ಆದರೆ ಅದ್ವೈತವಾದದಲ್ಲಿ ಈ ಎರಡೂ ಪದಗಳಿಗೆ ಜಹದಜಹಲ್ಲಕ್ಷಣಾ ಸ್ವೀಕಾರ ಮಾಡಿ ಆ ವಾಕ್ಯವು ಚಿನ್ಮಾತ್ರೈಕ್ಯವನ್ನು ಬೋಧಿಸುತ್ತದೆ ಎನ್ನಲಾಗಿದೆ. ಇದನ್ನು ವಿಮರ್ಶಿಸುತ್ತಾ ಶ್ರೀಮದಾಚಾರ್ಯರು ಭೇದೇನೈವ ತು ಮುಖ್ಯಾರ್ಥ ಸಂಭವೇ ಲಕ್ಷಣಾ ಕುತ: ಎಂದಿದ್ದಾರೆ. ಇದಕ್ಕೆ ವ್ಯಾಖ್ಯಾನ ಮಾಡುತ್ತಾ ಶ್ರೀಮಜ್ಜಯತೀರ್ಥರು ಸಿಂಹೋ ದೇವದತ್ತ ಇತ್ಯಾದಿವತ್ ಸಾಮಾನಾಧಿ ಕರಣ್ಯಮಾತ್ರಂ ಗೌಣಮುಪಾದಾಯ...... ಎಂದು ಹೇಳಿದ್ದಾರೆ. ಆಪಾತತ:

ಈ ವ್ಯಾಕ್ಯಕ್ಕೆ ಹೀಗೆ ಅರ್ಥವಾಗುತ್ತದೆ. ತತ್ ತ್ವಮಸಿ ಎಂಬಲ್ಲಿ ತತ್ ಪದವು ಕರ್ತೃತ್ವಾದಿ ವಿಶಿಷ್ಟ ಬ್ರಹ್ಮ ಪರವೇ ಆಗಿದೆ. ಸಾಮಾನಾಧಿಕರಣ್ಯಕ್ಕೆ ಮಾತ್ರ ಅಂದರೆ ತ್ವಂ ಪದೋತ್ತರ ವಿಭಕ್ತಿಗೆ ಸಮಾನವಾದ ತತ್ ಪದೋತ್ತರ ವಿಭಕ್ತಿಗೆ ಮಾತ್ರ ಗೌಣೀ ವೃತ್ತಿಯನ್ನು ಆಶ್ರಯಿಸಬೇಕು ಅಂದರೆ ಅದು ಅಭೇದವನ್ನು ಭೋದಿಸದೇ ಸಾದೃಶ್ಯವನ್ನು ಭೋದಿಸುತ್ತದೆ ಎಂದು ಭಾವಿಸಬೇಕು ಎಂದು.

ಆದರೆ ಸಾಮಾನಾಧಿಕರಣ್ಯಮಾತ್ರಂ ಎಂಬ ಸುಧಾ ವಾಕ್ಯಕ್ಕೆ ಈ ಅರ್ಥವಲ್ಲ. ಚಂದ್ರಿಕಾದಲ್ಲಿ ಹೇಳಿದಂತೆ ಬೇರೆ ಅರ್ಥವನ್ನು ತಿಳಿಯಬೇಕು - ತತ್ ಪದಕ್ಕೆ ಜಹದಜಹಲ್ಲಕ್ಷಣಾ ಮಾಡದಂತೆ ಗೌಣೀ ವೃತ್ತಿಯನ್ನು ಆಶ್ರಯಿಸಿ ತತ್ ಸದೃಶ ಎಂದು ಅರ್ಥ ಮಾಡಬೇಕು. ಆಗ ಸಾಮಾನಾಧಿಕರಣ್ಯವು ಮುಖ್ಯಾಭೇದವನ್ನು ತಿಳಿಸದಂತೆ ಅಮುಖ್ಯ ಅಭೇದವನ್ನು ತಿಳಿಸುತ್ತದೆ. ತತ್ ಪದಕ್ಕೆ ಬ್ರಹ್ಮ ಎಂದು ಮಾತ್ರ ಅರ್ಥ ಮಾಡಿದ ಪಕ್ಷದಲ್ಲಿ ಸಾಮಾನಾಧಿಕರಣ್ಯವು ಜೀವನಲ್ಲಿ ಬ್ರಹ್ಮತ್ವೇನ ರೂಪೇಣ ಅಭೇದ ಎಂಬ ಮುಖ್ಯ ಅಭೇದ ಪರವಾಗುತ್ತಿತ್ತು ಆದರೆ ತತ್ ಪದಕ್ಕೆ ಬ್ರಹ್ಮ ಸದೃಶ ಎಂಬ ಅರ್ಥ ಮಾಡಿದ್ದರಿಂದ ಸಾಮಾನಾಧಿಕರಣ್ಯವು ಜೀವನಲ್ಲಿ ಬ್ರಹ್ಮ ಸದೃಶತ್ವೇನ ರೂಪೇಣ ಅಭೇದವನ್ನು ತಿಳಿಸುತ್ತದೆ. ಈ ಅಭೇದವಾದರೂ ಅಮುಖ್ಯ ಅಭೇದರೂಪವಾಗಿದೆ. ಈ ಅಭಿಪ್ರಾಯದಿಂದಲೇ ಸುಧಾದಲ್ಲಿ ಸಾಮಾನಾಧಿಕರಣ್ಯಮಾತ್ರಂ ಗೌಣಂ ಎಂದು ಹೇಳಲಾಗಿದೆ ಹೊರತು ಸಾಮಾನಾಧಿಕರಣ್ಯವು ಸಾದೃಶ್ಯಪರ ಎಂಬ ಅಭಿಪ್ರಾಯವಲ್ಲ.

### ವಿಶೇಷ ಲಕ್ಷಣ

ಮಾಯಾವಾದಿಗಳ ಪ್ರಕಾರ ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಎಂಬಲ್ಲಿರುವ ಸತ್ಯಾದಿ ಪದಗಳಿಗೆ ಪ್ರಯೋಜನವನ್ನಂಗೀಕರಿಸಲು ಬರುವುದಿಲ್ಲ. ಬ್ರಹ್ಮನನ್ನು ನಿರ್ವಿಶೇಷನೆಂದಂಗೀಕರಿಸಿರುವುದರಿಂದ ಸತ್ಯತ್ವಾದಿಗಳು ಬ್ರಹ್ಮನಲ್ಲಿ ಇಲ್ಲ. ಆದ್ದರಿಂದ ಸತ್ಯಾದಿ ಪದಗಳಿಗೆ ಸತ್ಯತ್ವಾದ್ಯಭಿಧಾಯಕತ್ವವಿಲ್ಲ. ಆದ್ದರಿಂದ ಸತ್ಯಾದಿ ಪದಗಳಿಗೆ ಪ್ರಯೋಜನವೇ ಇಲ್ಲದಂತಾಗುತ್ತದೆ. ಈ ವೈಯರ್ಥ್ಯ ಪರಿಹರಿಸಿಕೊಳ್ಳ ಬೇಕಾದರೆ ಮಾಯಾವಾದಿಗಳೂ ವಿಶೇಷವನ್ನು ಅಂಗೀಕರಿಸಬೇಕು.

ಅದರ ಲಕ್ಷಣವನ್ನು ಸುಧಾದಲ್ಲಿ ಭೇದವಿಲ್ಲದಿದ್ದಾಗಲೂ ಮುಖ್ಯವಾದ ಭೇದವ್ಯವಹಾರಕ್ಕೆ ಕಾರಣವಾದ ಪದಾರ್ಥವೇ ವಿಶೇಷ ಎಂದು ಹೇಳಿದ್ದಾರೆ. ಉದಾ - ಘಟ ಮತ್ತು ಅದರ ರೂಪಕ್ಕೇ (ರೂಪಸಾಮಾನ್ಯಕ್ಕೆ) ಭೇದವಿಲ್ಲದಿದ್ದರೂ ಘಟದ ರೂಪ ಎಂಬ ಮುಖ್ಯವಾದ ಭೇದವ್ಯವಹಾರವಿದೆ. ಘಟ ಮತ್ತು ಅದರ ರೂಪಗಳಲ್ಲಿ ವಿಶೇಷಗಳಿರುವುದರಿಂದಲೇ ಈ ವ್ಯವಹಾರವು ಯುಕ್ತವಾಗುತ್ತದೆ. ಆದ್ದರಿಂದ ವಿಶೇಷದಲ್ಲಿ ಈ ಲಕ್ಷಣಕ್ಕೆ ಸಮನ್ವಯವಾಗುತ್ತದೆ.

ಭೇದವಿಲ್ಲದಿದ್ದರೂ ಎಂಬ ಅಂಶವನ್ನು ಕೊಡದೆ ಕೇವಲ ಭೇದವ್ಯವಹಾರ ಕಾರಣವಾದದ್ದು ವಿಶೇಷ ಎಂದು ಲಕ್ಷಣ ಹೇಳಿದರೆ ಘಟ ಮತ್ತು ಪಟಗಳಲ್ಲಿರುವ ಭೇದವೂ ಭೇದ ವ್ಯವಹಾರ ನಿರ್ವಾಹಕವಾದ್ದರಿಂದ ಆ ಭೇದದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಭೇದವಿಲ್ಲದಿದ್ದಾಗ ಎಂಬ ಅಂಶವನ್ನು ಕೊಡಬೇಕು. ಘಟ ಮತ್ತು ಪಟಗಳಲ್ಲಿ ಮುಖ್ಯವಾದ ಭೇದವೇ ಇದೆಯಾದ್ದರಿಂದ ಈ ಲಕ್ಷಣವು ಘಟ ಪಟಗಳ ಭೇದದಲ್ಲಿ ಬರುವುದಿಲ್ಲ. ಭೇದವಿಲ್ಲದಿದ್ದಾಗ ಭೇದವ್ಯವಹಾರಕ್ಕೆ ಕಾರಣವಾದದ್ದು ವಿಶೇಷ ಎಂದಷ್ಟೇ ಲಕ್ಷಣ ಹೇಳಿದರೆ ರಾಹುವಿನ ತಲೆ (ರಾಹುವೆಂದರೆ ಕೇವಲ ತಲೆಯೇ. ಆದ್ದರಿಂದ ಈ ವ್ಯವಹಾರವು ಔಪಚಾರಿಕ - ಅಮುಖ್ಯವಾದದ್ದು) ಎಂಬ ಔಪಚಾರಿಕ ವ್ಯವಹಾರಕ್ಕೆ ಕಾರಣವಾದ ಪದಾರ್ಥ (ಲೋಕರೂಢಿ ಭ್ರಾಂತಿ ಮುಂತಾದವುಗಳಲ್ಲಿ) ದಲ್ಲಿ ಭೇದವ್ಯವಹಾರ ಕಾರಣತ್ವವಿರುವುದರಿಂದ ಅದರಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಮುಖ್ಯವಾದ ಭೇದವ್ಯವಹಾರಕ್ಕೆ ಕಾರಣವಾದದ್ದು ಎಂದು ಹೇಳಬೇಕು. ರಾಹುವಿನ ತಲೆ ಎಂಬ ಭೇದ ವ್ಯವಹಾರ ಅಮುಖ್ಯವಾದದ್ದು ಆದ್ದರಿಂದ ಅತಿವ್ಯಾಪ್ತಿಯಿಲ್ಲ.

ಕೇವಲ ವ್ಯವಹಾರಕಾರಣವಾದದ್ದು ವಿಶೇಷ ಎಂದಷ್ಟೇ ಲಕ್ಷಣ ಹೇಳಿದರೆ ಘಟ ವ್ಯವಹಾರಕ್ಕೆ ಕಾರಣವಾದ ಘಟತ್ವದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಭೇದವ್ಯವಹಾರ ಕಾರಣ ಎಂದು ಹೇಳಬೇಕು.

ಹೀಗೆ ಭೇದವಿಲ್ಲದಿದ್ದಾಗಲೂ ಮುಖ್ಯವಾದ ಭೇದ ವ್ಯವಹಾರಕ್ಕೆ ಕಾರಣವಾದ ಪದಾರ್ಥವೇ ವಿಶೇಷ ಎಂಬ ಲಕ್ಷಣಕ್ಕೆ ಎಲ್ಲೂ ಅತಿವ್ಯಾಪ್ತಿಯಿಲ್ಲ.

## ಸಮನ್ವಾಯಾಧಿಕರಣದ ಪೂರ್ವಪಕ್ಷ

ಜಗಜ್ಜನ್ಮಾದಿಕಾರಣತ್ವ ಎಂಬ ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ. ಏಕೆಂದರೆ ಜಗಜ್ಜನ್ಮಾದಿ ಕಾರಣತ್ವವು ಶಾಸ್ತ್ರದಿಂದಲೇ ತಿಳಿಯಲ್ಪಡುವುದಾದರೂ ಶಾಸ್ತ್ರಗಳೇ ಹರ ಹಿರಣ್ಯಗರ್ಭಾದಿಗಳಿಗೆ ಜಗಜ್ಜನ್ಮಾದಿ ಕಾರಣತ್ವವನ್ನು ಪ್ರತಿಪಾದಿಸುತ್ತವೆ. ಅಭಿಯುಕ್ತರು ಆ ಶಾಸ್ತ್ರಗಳನ್ನು ಶಿವಾದಿ ಪರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ ಜಗತ್‌ಕಾರಣತ್ವವು ಲಕ್ಷಣವಾಗಲಾರದು ಎಂದು ಶ್ರೀಸುಧಾಕಾರರು ಪೂರ್ವಪಕ್ಷವನ್ನು ಮಾಡಿಕೊಂಡಿದ್ದಾರೆ. ಆದರೆ ಸುಧಾಕಾರರು ಪ್ರದರ್ಶಿಸಿದ ಅತಿವ್ಯಾಪ್ತಿ ಎಂಬ ಪೂರ್ವಪಕ್ಷವನ್ನು ಕೂಡಿಸಬೇಕಾದರೆ ಈ ಅಂಶವನ್ನು ಸೇರಿಸಕೊಳ್ಳಬೇಕು.-

ಶಾಸ್ತ್ರವು ಶಿವಾದಿಗಳಿಗೆ ಜಗತ್‌ಕಾರಣತ್ವವನ್ನು ಹೇಳುತ್ತದೆ ಎನ್ನುವರಿಗೆ ಪ್ರತಿಯಾಗಿ ನಾರಾಯಣೋ ವಾ ಇದಮಗ್ರ ಆಸೀತ್ ಎಂಬ ಶಾಸ್ತ್ರವು ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಹೇಳುತ್ತದೆ. ಅಭಿಯುಕ್ತರು ಅದನ್ನು ವಿಷ್ಣುಪರವಾಗಿ ವ್ಯಾಖ್ಯಾನ ಮಾಡಿದ್ದಾರೆ ಎಂದು ಹೇಳಬಹುದು. ಆದ್ದರಿಂದ ಇಲ್ಲಿ ಪೂರ್ವಪಕ್ಷ ಮಾಡುವವರಿಗೆ ವಿಷ್ಣು ಜಗತ್‌ಕಾರಣ ಅಲ್ಲ ಎಂದು ಅಭಿಪ್ರೇತವಲ್ಲ. ಹೊರತು ವಿಷ್ಣುವಿಗೂ ಹರಹಿಹಣ್ಯಗರ್ಭಾದಿಗಳಿಗೂ ಶಾಸ್ತ್ರವು ಜಗತ್‌ಕಾರಣತ್ವವನ್ನು ಹೇಳುತ್ತಿರುವುದರಿಂದ ಬೇರೆ ಬೇರೆ ಕಾಲದಲ್ಲಿ ವಿಷ್ಣು ಶಿವಾದಿಗಳು ಜಗತ್‌ಕಾರಣರೆಂದು ಅಂಗೀಕರಿಸ ಬೇಕಾಗುತ್ತದೆ ಎಂದು.

ಹೀಗೆ ಕಾರಣತ್ವವು ವಿಷ್ಣುವಿನಲ್ಲಿಯೂ ಶಿವಾದಿಗಳಲ್ಲಿಯೂ ಬಂದದ್ದರಿಂದ ಅತಿವ್ಯಾಪ್ತಿ ಎಂದು ಹೇಳಿದ್ದು ಸಮಂಜಸವಾಗುತ್ತದೆ ಮತ್ತು ಸಿದ್ಧಾಂತದಲ್ಲಿ ವಿಷ್ಣುವೇ ಕಾರಣ ಎಂಬ ಅವಧಾರಣವೂ ಸಮಂಜಸ.

## ಸಂಶಬ್ದದಸ್ವಾರಸ್ಯ

ಓಂ ತತ್ತು ಸಮನ್ವಯಾತ್ ಓಂ ಎಂಬಲ್ಲಿ 'ಸಂ' ಎಂದರೆ ಸಮ್ಯಕ್ ಎಂದು ಅರ್ಥ. ಪ್ರವಿಚಾರಿತೇ ಎಂದು ಅಧ್ಯಾಹಾರ ಮಾಡಬೇಕು. ಆಗ

ಉಪಕ್ರಮಾದಿ ಲಿಂಗಗಳಿಂದ ಸರಿಯಾಗಿ ವಿಚಾರ ಮಾಡಿದಾಗ ವಿಷ್ಣುವೇ ಸರ್ವಶಾಸ್ತ್ರದ ಮುಖ್ಯಾರ್ಥ ಎಂದು ತಿಳಿಯುತ್ತದೆ ಎಂದು ಸೂತ್ರಾರ್ಥ. ವಿಚಾರಣೆ ಎಂದರೆ ಬಲಾಬಲ ನಿರ್ಣಯ ಎಂದರ್ಥ.

ಸರಿಯಾಗಿ ವಿಚಾರ ಮಾಡದಿದ್ದರೆ ಉಪಕ್ರಮಾದಿಲಿಂಗಗಳೂ ಕೂಡ ವ್ಯಭಿಚರಿತವಾಗುತ್ತವೆ. ಹೇಗೆಂದರೆ, ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ ಎಂಬಲ್ಲಿ ಉಪಕ್ರಮದಲ್ಲಿ ಪ್ರಾಣ ಪದವಿದೆ. ಆದರೂ ಇಲ್ಲಿ ಉಪಕ್ರಮವು ಇದು ಪ್ರಾಣವಿದ್ಯೆ ಎಂದು ಸಾಧಿಸಲು ಸಮರ್ಥವಾಗಿಲ್ಲ. ಹಾಗೆಯೇ ಪ್ವಯಾಮ್ಯಗ್ನಿಂ ಪ್ರಥಮಂ ಎಂಬ ವಾಕ್ಯದಲ್ಲಿ ಉಪಕ್ರಮದಲ್ಲಿ (ಆರಂಭದಲ್ಲಿ) ಅಗ್ನಿ ಪದವಿದೆ. ಆದರೂ ಇದು ಅಗ್ನಿ ವಿದ್ಯೆಯೆಂಬುದನ್ನು ಅದು ಸಾಧಿಸುವುದಿಲ್ಲ.

ಬ್ರಹ್ಮವಲ್ಲಿಯಲ್ಲಿ ''ತಸ್ಯೈಷ ಏವ ಶಾರೀರ ಆತ್ಮಾ ಯ: ಪೂರ್ವಸ್ಯ ''ಎಂಬಲ್ಲಿ ಉಪಸಂಹಾರದಲ್ಲಿ ಜೀವವಾಚಕ ಶಾರೀರ ಪದವಿದ್ದರೂ ಇಲ್ಲಿ ಉಪಸಂಹಾರವು 'ಬ್ರಹ್ಮವಲ್ಲಿಯು ಜೀವಪರ ' ಎನ್ನುವುದಕ್ಕೆ ಹೇತುವಾಗುವುದಿಲ್ಲ.

ಇತರ ವ್ಯಪದೇಶಾತ್ ಹಿತಾಕರಣಾದಿ ದೋಷ ಪ್ರಸಕ್ತಿ: ಎಂಬಲ್ಲಿ ಪೂರ್ವಪಕ್ಷದಲ್ಲಿ ಉದಾಹರಿಸಲ್ಪಟ್ಟ ''ಜೀವಾದ್ ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾ:'' ಎಂಬ ವಾಕ್ಯದಲ್ಲಿ ಜೀವ ಶಬ್ದದ ಅಭ್ಯಾಸ(ಆವೃತ್ತಿ) ಇದ್ದರೂ ಅದು ಆ ವಾಕ್ಯಕ್ಕೆ ಜೀವ ಪರತ್ವ ಸಾಧಕವಲ್ಲ.

''ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ'' ಎಂಬಲ್ಲಿ ಅಸತ್‌ನಿಂದ ಸನ್ನಾಮಕನಾದ ವಿಷ್ಣು ಜನಿಸಿದ ಎಂಬ ಅರ್ಥವನ್ನು ಹೇಳಿದರೆ ಅಪೂರ್ವತಾ ಬರುತ್ತದೆ. ಆದರೆ ಆ ಅಪೂರ್ವತಾ ಎಂಬುದು ಆ ಅರ್ಥಕ್ಕೆ ಸಾಧಕವಾದದ್ದು ಕಂಡಿಲ್ಲ.

'ಉದ್ಭಿದಾ ಯಜೇತ ಪಶುಕಾಮ: 'ಎಂಬಲ್ಲಿ ಪಶುಕಾಮ: ಎಂದು ಫಲವತ್ತ್ವ ಕಂಡಿದೆ. ಆದರೆ ಆ ಫಲವತ್ತ್ವವು ಆ ವಾಕ್ಯವು ಕಾಮ್ಯ ಕರ್ಮಪರ ಎಂಬುದಕ್ಕೆ ಹೇತುವಲ್ಲ. ಏಕೆಂದರೆ ''ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿ:'' ಎಂಬ ಬ್ರಹ್ಮ ಸೂತ್ರದಲ್ಲಿ ಕರ್ಮಾದಿಗಳು ಅಂತ:ಕರಣ

ಶುದ್ಧಿದ್ವಾರಾ ಜ್ಞಾನ ಪ್ರಯೋಜಕವಾದ್ದರಿಂದ ಜ್ಞಾನಾಂಗ ಎಂದು ಸಮರ್ಥಿಸಿದ್ದಾರೆ.

ಅದ್ವೈತಿಗಳಿಂದ ಅದ್ವೈತ ಪ್ರಕರಣ ಎಂದು ಪರಿಗಣಿಸಲ್ಪಟ್ಟ ಐತದಾತ್ಮ್ಯಮಿದಂ ಸರ್ವಂ ಎಂಬ ಪ್ರಕರಣದಲ್ಲಿ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ (ಪ್ರಾರಬ್ಧ ಕರ್ಮನಾಶವಾಗುವವರೆಗೆ ಮಾತ್ರ ವಿಲಂಬ. ಪ್ರಾರಬ್ಧನಾಶವಾದ ಕೂಡಲೇ ಮೋಕ್ಷ) ಎಂದು ಪ್ರಶಂಸೆ ಮಾಡಿದ್ದಾರೆ. ಇಂತಹ ಅರ್ಥವಾದ ವಾಕ್ಯವಿದ್ದರೂ ಕೂಡ ಆ ಪ್ರಕರಣವು ಐಕ್ಯಪರವಲ್ಲ.

ಹಾಗೆಯೇ, ಅಗ್ನಿಗಳು ಉಪಕೋಸಲನಿಗೆ ವಿದ್ಯೆಯನ್ನುಪದೇಶಿಸಿ 'ಇದನ್ನು ತಿಳಿದವನನ್ನು('ಉಪವಯಂ ತಂ ಭುಂಜಾಮ:') ಭೃತ್ಯರು ಯಾವಾಗಲೂ ಸೇವಿಸುತ್ತಾರೆ ಎಂದು ಪ್ರಶಂಸಿಸಿದ್ದಾರೆ ಮತ್ತು ಅಸ್ಮದ್ವಿದ್ಯಾ ಉಪದಿಷ್ಟಾ (ನಮ್ಮ ವಿದ್ಯೆಯನ್ನು ಉಪದೇಶಿಸಿದ್ದೇವೆ) ಎಂದಿದ್ದಾರೆ. ಇಲ್ಲಿ ಅರ್ಥವಾದವಿದ್ದರೂ ಅಸ್ಮದ್ವಿದ್ಯೆ ಎಂದರೆ ಅಗ್ನಿ ವಿದ್ಯೆಯನ್ನು ಇಟ್ಟುಕೊಂಡಿಲ್ಲ. ಏಕೆಂದರೆ ಮೇಲೆ ವಿವರಿಸಿದ ಎಲ್ಲ ಲಿಂಗಗಳೂ ದುರ್ಬಲ. ಆದ್ದರಿಂದ ಸಮನ್ವಯಾತ್ ಎನ್ನುವುದಕ್ಕೆ ಪ್ರಬಲವೆಂದು ನಿರ್ಣೀತವಾದ ಉಪಕ್ರಮಾದಿಗಳಿಂದ ವಿಷ್ಣುವೇ ಶಾಸ್ತ್ರ ಪ್ರತಿಪಾದ್ಯ ಎಂದು ಅರ್ಥ ಹೇಳಬೇಕು.

**ಮಂಡೂಕಪ್ಲುತಿ**

ಓಂ ತತ್ತು ಸಮನ್ವಯಾತ್ ಓಂ ಎಂಬ ಸೂತ್ರದಲ್ಲಿ ತತ್ ಪದವನ್ನು ಬಳಸಿದ್ದಾರೆ. ಈ ಪದ ಬೇಕಾಗಿಲ್ಲ. ಏಕಂದರೆ ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಯತ್ ಶಬ್ದವನ್ನು ಬಳಸಿರುವುದರಿಂದ ತತ್ ಶಬ್ದವನ್ನೂ ಇಟ್ಟುಕೊಳ್ಳಬೇಕೆಂದು ನಿಶ್ಚಿತವಾಗಿದೆ. (ಈ ಜಗತ್ತಿಗೆ ಜನ್ಮಾದಿಗಳು ಯಾವನಿಂದ ಆಗುವವೋ ಅವನೇ ಬ್ರಹ್ಮ ಎಂದು ಆ ಸೂತ್ರಕ್ಕೆ ಅರ್ಥ) ಅದೇ ತತ್ ಪದವನ್ನು ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಲ್ಲಿಟ್ಟುಕೊಳ್ಳದೇ ನೇರವಾಗಿ ಮಂಡೂಕಪ್ಲುತಿನ್ಯಾಯದಿಂದ (ಕಪ್ಪೆಯು ಹೇಗೆ ಒಂದಾದ ಮೇಲೊಂದು ಹೆಜ್ಜೆಯನ್ನಿಡದೆ ಹಾರಿ ಹಾರಿ ನಡೆಯುತ್ತದೊ ಅದೇ ಮಂಡೂಕಪ್ಲುತಿ) ಸಮನ್ವಯ ಸೂತ್ರದಲ್ಲಿಟ್ಟುಕೊಳ್ಳಬಹುದು. ಆದ್ದರಿಂದ

ತತ್ತು ಸಮನ್ವಯಾತ್ ಎಂಬಲ್ಲಿನ ತತ್ ಪದವು ವ್ಯರ್ಥವೆಂದು ಸುಧಾದಲ್ಲಿ ಪ್ರಶ್ನೆ ಮಾಡಿಕೊಂಡು ಉಪಕ್ರಮಾದಿಗಳ ವಿಚಾರ ಮಾಡಿದಾಗ ಬ್ರಹ್ಮನೇ ಶಾಸ್ತ್ರಗಮ್ಯವೆಂದು ತಿಳಿಸಲು ತು ಶಬ್ದ ಹಾಕಬೇಕು. ಇಲ್ಲಿ ತತ್ ಶಬ್ದವಿಲ್ಲದಿದ್ದರೆ ಕೇವಲ ತು ಶಬ್ದಕ್ಕೆ ಅನ್ವಯವಿಲ್ಲದಂತಾಗುತ್ತದೆ. ಆದ್ದರಿಂದ ತತ್ತು ಎಂದು ಹೇಳಿದ್ದಾರೆ ಎಂದು ಉತ್ತರ ಕೊಟ್ಟಿದ್ದಾರೆ.

ಇಲ್ಲಿ ಜನ್ಮಾದ್ಯಸ್ಯ ಯತಃ ಎಂಬಲ್ಲಿ ಇಟ್ಟುಕೊಳ್ಳುವ ತತ್ ಶಬ್ದಕ್ಕೆ ಶಾಸ್ತ್ರಯೋನಿತ್ವಸೂತ್ರದಲ್ಲೂ ಸಂಬಂಧವಿದೆ. ತತ್ ಶಬ್ದವನ್ನು ಷಷ್ಠೀ ವಿಭಕ್ತಿ ಸಹಿತವಾಗಿ ತಸ್ಯ ಶಾಸ್ತ್ರಯೋನಿತ್ವಾತ್ (ಆ ಬ್ರಹ್ಮನಿಗೇ ಶಾಸ್ತ್ರಯೋನಿತ್ವವಿದೆಯಾದ್ದರಿಂದ ಅವನೇ ಜಗತ್ ಕಾರಣ) ಎಂದೇ ಆ ಸೂತ್ರಕ್ಕೆ ಅರ್ಥವನ್ನು ಹೇಳಬೇಕು. ಆದ್ದರಿಂದ ಜನ್ಮಾದಿ ಸೂತ್ರದಲ್ಲಿರುವ ತತ್ ಶಬ್ದವನ್ನು ಶಾಸ್ತ್ರಯೋನಿತ್ವ ಸೂತ್ರ ಮತ್ತು ಸಮನ್ವಯ ಸೂತ್ರಗಳಲ್ಲಿ ಎರಡರಲ್ಲೂ ಅನುವೃತ್ತಿ ಮಾಡಿಕೊಳ್ಳಬಹುದು. ಹೀಗೆ ಮಂಡೂಕಪ್ಲುತಿನ್ಯಾಯವನ್ನಿಟ್ಟುಕೊಳ್ಳುವುದು ವ್ಯರ್ಥವೆನಿಸುತ್ತದೆ. ಆದರೆ ಜನ್ಮಾದಿ ಸೂತ್ರದಲ್ಲಿರುವ ಪ್ರಥಮಾ ವಿಭಕ್ತ್ಯಂತ ತತ್ ಪದಕ್ಕೆ ಶಾಸ್ತ್ರ ಯೋನಿತ್ವ ಸೂತ್ರದಲ್ಲಿ ಅನುವೃತ್ತಿಯಿಲ್ಲ (ಷಷ್ಠೀ ವಿಭಕ್ತ್ಯಂತವಾದದ್ದಕ್ಕೆ ಅಲ್ಲಿ ಅನುವೃತ್ತಿ) ಆದ್ದರಿಂದ ಪ್ರಥಮಾವಿಭಕ್ತ್ಯಂತವಾದ ತತ್ ಪದವನ್ನು ಮಂಡೂಕ ಪ್ಲುತಿಯಿಂದ ನೇರವಾಗಿ ಸಮನ್ವಯ ಸೂತ್ರದಲ್ಲಿ ತರಬಹುದೆಂದು ಆಶಂಕಿಸಲಾಗಿದೆ.

**ಓಂ ಈಕ್ಷತೇರ್ನಾಶಬ್ದಂ ಓಂ**

ಬ್ರಹ್ಮನಿಗೆ 'ಪುರಿಶಯಂ ಪುರುಷಮೀಕ್ಷತೇ' ಎಂದು ಜ್ಞಾನವಿಷಯತ್ವವನ್ನು ಹೇಳಿದ್ದಾರೆ. ಬ್ರಹ್ಮನು ಪ್ರತ್ಯಕ್ಷಾನುಮಾನ ಜನ್ಯ ಜ್ಞಾನವಿಷಯನಲ್ಲ. ಆಗಮದಿಂದಲೇ ವೇದ್ಯ. ಆದ್ದರಿಂದ ಬ್ರಹ್ಮನಿಗೆ ವಾಚ್ಯತ್ವವನ್ನು ಅಂಗೀಕರಿಸ ಲೇಬೇಕು. ಇದು ಈ ಸೂತ್ರದ ಅರ್ಥ.

ಇಲ್ಲಿ ಈಕ್ಷತೇರ್ವಾಚ್ಯಂ ಎಂದೇ ಹೇಳಬಹುದಾಗಿತ್ತು. ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ಅವಧಾರಣಾರ್ಥಕ ತು ಶಬ್ದವನ್ನು ಅನುವೃತ್ತಿ ಮಾಡಿದರೆ ಬ್ರಹ್ಮನು ವಾಚ್ಯನೇ ಆಗಿದ್ದಾನೆ ಎಂಬ ಅಭಿಪ್ರಾಯ

ಬರುತ್ತದೆ. ಹೀಗಿರುವಾಗ ಅಶಬ್ದಂ ನ ಎಂಬುದಾಗಿ ಎರಡು ನಿಷೇಧ ವಾಚಕಗಳಿಂದ ಏಕೆ ಹೇಳಿದ್ದಾರೆ ಎಂದು ಸಂದೇಹ.

ಇದಕ್ಕೆ ಪರಿಹಾರ - ಬ್ರಹ್ಮನು ಅವಾಚ್ಯನೆಂದು ಪೂರ್ವಪಕ್ಷಮಾಡುವಾಗ ಪೂರ್ವಪಕ್ಷಿಗಳು ಅಶಬ್ದಂ ಅಸ್ಪರ್ಶಂ ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ ಅದನ್ನು ಅನುಕರಣೆ ಮಾಡುವ ಉದ್ದೇಶದಿಂದ ಸೂತ್ರದಲ್ಲಿ ಅಶಬ್ದಂ ನ ಎಂದು ಹೇಳಿದ್ದಾರೆ ಮತ್ತು ತು ಶಬ್ದವನ್ನು ತತ್ ಪದದೊಂದಿಗೆ ಅನ್ವಯಿಸದೇ ವಾಚ್ಯಂ ಎನ್ನುವದರ ಜೊತೆಗೆ ಅನ್ವಯ ಮಾಡಿದರೆ ಅಧ್ಯಾಯ ಸಮಾಪ್ತಿ ಆಗುವವರೆಗೆ ಪ್ರತಿ ಅಧಿಕರಣದಲ್ಲಿ ತತ್ತು ಎಂಬ ಅನುವೃತ್ತಿ ಆಗದಿರುವ ಪ್ರಸಂಗವು ಬರುತ್ತದೆ. ಆದ್ದರಿಂದ ಅವಧಾರಣಾರ್ಥವಾಗಿ ಅಶಬ್ದಂ ನ ಎಂದು ಹೇಳಿದ್ದಾರೆ.

**ಕುಂಡಪಾಯಿನಾಮಯನಂ**

ಮುಖ್ಯಾರ್ಥ ತ್ಯಾಗವು ಲಜ್ಜಾ ಹೇತು ಆದ್ದರಿಂದ ವೇದಗಳಿಗೆ ಲಕ್ಷಣಯಾ ಶುದ್ಧ ಬ್ರಹ್ಮಮಾತ್ರಪರತ್ವವನ್ನು ಅಂಗೀಕರಿಸುವ ಮಾಯಾವಾದವು ಸರಿಯಲ್ಲವೆಂದು ಆಚಾರ್ಯರು ತಿಳಿಸಿದ್ದಾರೆ.

ಇಲ್ಲಿ ಅದ್ವೈತಿಗಳ ಪ್ರಶ್ನೆ ಹೀಗಿದೆ. ಮುಖ್ಯಾರ್ಥ ತ್ಯಾಗವೇ ಲಜ್ಜಾ ಹೇತುವಲ್ಲ. ಹಾಗೆ ಹೇಳಿದರೆ ಕುಂಡಪಾಯಿನಾಮಯನೇ ಮಾಸಮಗ್ನಿ ಹೋತ್ರಂ ಜುಹೋತಿ ಎಂಬಲ್ಲಿಯೂ ಅಗ್ನಿ ಹೋತ್ರ ಪದಕ್ಕೆ ಲಕ್ಷಣಾಸ್ವೀಕಾರ ಸರಿಯಲ್ಲವೆಂದಾಗುತ್ತದೆ. ಆದ್ದರಿಂದ ಮುಖ್ಯಾರ್ಥಕ್ಕೆ ಬಾಧವಿದ್ದರೆ ಅಮುಖ್ಯಾರ್ಥ ಸ್ವೀಕರಿಸುವುದು ಯುಕ್ತವೇ. ಪ್ರಕೃತದಲ್ಲಿ ಶ್ರುತಿಗಳಿಗೆ ಮುಖ್ಯಾರ್ಥ ಸ್ವೀಕರಿಸಿದರೆ ಶುದ್ಧ ಬ್ರಹ್ಮನಲ್ಲಿ ತಾತ್ಪರ್ಯ ಕೂಡುವುದಿಲ್ಲ. ಆದ್ದರಿಂದ ಅಮುಖ್ಯಾರ್ಥ ಸ್ವೀಕಾರ ಮಾಡಬೇಕು.

ಇದಕ್ಕೆ ಸುಧಾದಲ್ಲಿ ಶ್ರುತಿಗಳು ಶುದ್ಧಬ್ರಹ್ಮಪರವಲ್ಲವಾದ್ದರಿಂದ ಮುಖ್ಯಾರ್ಥ ಬಾಧವಿಲ್ಲ. ಆದ್ದರಿಂದ ಅಮುಖ್ಯಾರ್ಥ ಇಟ್ಟುಕೊಳ್ಳಬಾರದು ಎಂದು ಉತ್ತರಿಸಿದ್ದಾರೆ.

ಇಲ್ಲಿ ಕುಂಡಪಾಯಿನಾಮಯನೇ ಎಂಬ ವಾಕ್ಯದ ವಿಚಾರ ಹೀಗಿದೆ.

''ಕುಂಡಪಾಯಿನಾಂ ಅಯನಂ'' ಎಂಬುದು ಸೋಮಯಾಗದ ಪ್ರಭೇದ ಅದರಲ್ಲಿ ಒಂದು ಮಾಸದ ತನಕ ಅಗ್ನಿಹೋತ್ರ ಮಾಡಬೇಕೆಂದು ಹೇಳಲಾಗಿದೆ. ಇಲ್ಲಿ ಅಗ್ನಿಹೋತ್ರವೆಂದರೆ ಅಗ್ನಿಹೋತ್ರದಂತಿರುವ ಗೌಣವಾದ ಮತ್ತೊಂದು ಕರ್ಮ ಹೊರತು ನಿಯಮಿತವಾಗಿ ಪ್ರತಿದಿನ ಮಾಡುವ ಅಗ್ನಿಹೋತ್ರವಲ್ಲ. ಆದ್ದರಿಂದ ಇಲ್ಲಿ ಅಗ್ನಿಹೋತ್ರ ಪದಕ್ಕೆ ಲಕ್ಷಣಾದಿಂದ ಅರ್ಥ ಮಾಡಲಾಗಿದೆ. ಇದನ್ನು ಪೂರ್ವ ಮೀಮಾಂಸಾದ ೭-೩-೧ ಅಧಿಕರಣದಲ್ಲಿ ನಿರೂಪಣೆ ಮಾಡಲಾಗಿದೆ.

## ಸ್ವಾಪ್ಯಯಾತ್ ಸೂತ್ರ ವ್ಯರ್ಥವಲ್ಲ

''ಓಂ ಸ್ವಾಪ್ಯಯಾತ್ ಓಂ'' ಈ ಸೂತ್ರವು ನಿರ್ಗುಣ ಬ್ರಹ್ಮನಿಗೆ ವಾಚ್ಯತ್ವವನ್ನು ಸಮರ್ಥಿಸಲು ಪ್ರವೃತ್ತವಾಗಿದೆ ಎಂದು ಸುಧಾದಲ್ಲಿ ಹೇಳಲಾಗಿದೆ. ಆದರೆ ಇದು ತನಗೆ ತನ್ನಲ್ಲಿಯೇ ಲಯ ಹೇಳಿದ್ದರಿಂದ ಮತ್ತು ಪೂರ್ಣತ್ವವನ್ನು ಹೇಳಿದ್ದರಿಂದ ಪೂರ್ಣಮದಃ ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದವನು ಬ್ರಹ್ಮ ಎಂಬ ಪ್ರಮೇಯವನ್ನು ತಿಳಿಸುತ್ತದೆಯೇ ಹೊರತು ನಿರ್ಗುಣನಿಗೆ ವಾಚ್ಯತ್ವ ಸಾಧಕವಲ್ಲವಷ್ಟೇ. ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಶ್ರೀಮಜ್ಜಯತೀರ್ಥರು ಸ್ವಾಪ್ಯಯಾತ್ ಎಂಬ ಹೇತುವು ಪರಂಪರಾದಿಂದ ವಾಚ್ಯತ್ವಸಾಧಕ ಎಂದು ಅಭಿಪ್ರಾಯ ಪಟ್ಟು ಮಧ್ಯದಲ್ಲಿ ಶ್ರುತ್ಯುಕ್ತತ್ವಾಚ್ಚ ಎಂಬ ಮತ್ತೊಂದು ಹೇತುವನ್ನು ಅಧ್ಯಾಹಾರ ಮಾಡಿ ಅದರಿಂದ ವಾಚ್ಯತ್ವವನ್ನು ಸಾಧಿಸಿದ್ದಾರೆ.

ಸ್ವಾಪ್ಯಯಾತ್ ಎಂಬುದು ಶ್ರುತ್ಯುಕ್ತತ್ವವನ್ನೇ ಸಾಧಿಸುತ್ತದೆ ಆದ್ದರಿಂದ ಈಗಾಗಲೇ ವಾಚ್ಯತ್ವವನ್ನು ಬೇರೆ ಹೇತುಗಳಿಂದ ಸಮರ್ಥಿಸಿಯಾಗಿದೆ ಆದ್ದರಿಂದ ಈ ಸ್ವಾಪ್ಯಯಾತ್ ಎಂಬುದು ವಾಚ್ಯತ್ವ ಸಮರ್ಥಕವೆಂದಾದ ಪಕ್ಷದಲ್ಲಿ ಚ ಕಾರವನ್ನು ಹೇಳಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ

ಸ್ವಾಪ್ಯಯಾತ್ ಎಂಬ ಸೂತ್ರವು ಹೇತ್ವಂತರದಿಂದ ವಾಚ್ಯತ್ವಕ್ಕೆ ಉಪಪಾದಕ ಎಂಬ ಸುಧಾವಾಕ್ಯಕ್ಕೆ ಪೂರ್ಣಮದ: ಇತಿ ಶ್ರುತ್ಯುಕ್ತತ್ವಾಚ್ಚ ಎಂಬ ಹೇತ್ವಂತರದಿಂದ ವಾಚ್ಯತ್ವವನ್ನು ಸಾಧಿಸಲು ಸ್ವಾಪ್ಯಯಾತ್ ಸೂತ್ರವು ಸಹಾಯಕವಾಗಿದೆ ಎಂದು ಅರ್ಥ.

ಹೀಗೆ ಹೇಳಿದರೆ ''ಸ್ವಾಪ್ಯಯಾತ್'' ಎಂಬ ಸೂತ್ರ ವ್ಯರ್ಥವಾಗುತ್ತದೆ ಏಕೆಂದರೆ ಸ್ವಾಪ್ಯಯಾತ್ ಎಂಬ ಹೇತುವಿನ ಮೂಲಕ ಪೂರ್ಣಮದ: ಎಂಬ ಶ್ರುತಿ ಪ್ರತಿಪಾದ್ಯತ್ವವನ್ನು ಸಾಧಿಸಿ ವಾಚ್ಯತ್ವವನ್ನು ಸಮರ್ಥಿಸಬೇಕು. ಈ ಸಮರ್ಥನೆಯು'' ಈಕ್ಷತೇರ್ನಾಶಬ್ದಂ'' ಎಂಬ ಸೂತ್ರದಲ್ಲಿಯೇ ಬಂದಿದೆ. ಕೇವಲ ಶ್ರುತಿ ಜನ್ಯ ಜ್ಞಾನವಿಷಯನಾದ್ದರಿಂದ ಬ್ರಹ್ಮನು ವಾಚ್ಯ ಎಂದು ಅದರ ಅರ್ಥ. ಆದ್ದರಿಂದ ಇದು ವ್ಯರ್ಥ ಎಂದು ಶಂಕಿಸಿದರೆ.-

ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬೇಕು - ಈಕ್ಷತೇ: ಎಂಬ ಸೂತ್ರದಲ್ಲಿ ಯಾವ ಒಂದು ವಿಶೇಷಶ್ರುತಿಯನ್ನು ಉಲ್ಲೇಖ ಮಾಡದೇ ಸಾಮಾನ್ಯವಾಗಿ ಶ್ರುತಿ ಮಾತ್ರಜನ್ಯಜ್ಞಾನವಿಷಯನಾದ್ದರಿಂದ ಬ್ರಹ್ಮ ವಾಚ್ಯ ಎಂದು ಹೇಳಿದ್ದಾರೆ. ಇಲ್ಲಿಯಾದರೂ ಸ್ವಾಪ್ಯಯ ಮತ್ತು ಪೂರ್ಣತ್ವ ಎಂಬ ಎರಡು ಧರ್ಮಗಳಿಂದ ಕೂಡಿದ ವಿಶೇಷಶ್ರುತಿಪ್ರತಿಪಾದ್ಯತ್ವದಿಂದ ನಿರ್ಗುಣ ಆತ್ಮನೇ ವಾಚ್ಯನಾಗಿದ್ದಾನೆ ಎಂದು ಹೇಳಿದ್ದಾರೆ. ಈ ಪ್ರಕಾರವಾಗಿ ಸಾಮಾನ್ಯವಿಶೇಷ ರೂಪವಾದ್ದರಿಂದ ಪುನರುಕ್ತಿ ದೋಷವಿಲ್ಲ.

**ಈಕ್ಷತ್ಯಧಿಕರಣ ಪರಮತ ನಿರಾಸ**

ಈಕ್ಷತ್ಯಧಿಕರಣದಲ್ಲಿ ಅದ್ವೈತಮತರೀತ್ಯಾ ಸಾಂಖ್ಯ ಪರಿಕಲ್ಪಿತವಾದ ಪ್ರಧಾನವು ಜಗತ್ಕಾರಣ ಎಂದು ಪೂರ್ವಪಕ್ಷ. ಅದು ವೇದಾಂತ ವಾಕ್ಯ ಬೋಧಿತವಾದ ಜಗತ್ಕಾರಣವಾಗಲು ಶಕ್ಯವಿಲ್ಲ ಏಕೆಂದರೆ ಅದು ಶಬ್ದವಾಚ್ಯವೇ ಅಲ್ಲ ಎಂದು ಸಿದ್ಧಾಂತ. ಇದನ್ನು ಶ್ರೀಮಟ್ಟೀಕಾಕೃತ್ಪಾದರು ಸುಧಾದಲ್ಲಿ ನಿರಾಸಮಾಡಿ ಏಷಾದಿಕ್ ಎಂದು ಮಾರ್ಗಪ್ರದರ್ಶನ ಮಾಡಿದ್ದಾರೆ - ಅದೇ ಪ್ರಕಾರವನ್ನು ಅನುಸರಿಸಿ ಹೀಗೂ ನಿರಾಸಮಾಡಬಹುದು - ಸದೇವ ಸೋಮ್ಯ ಇದಮಗ್ರ ಆಸೀತ್ ಎಂಬ ವಾಕ್ಯ ಪ್ರತಿಪಾದ್ಯವು ಪ್ರಧಾನ ಅಲ್ಲವೆಂದು ನಿರಾಕರಿಸಿ ವಿಶಿಷ್ಟ ಬ್ರಹ್ಮನು ಜಗತ್ತಿಗೆ ಪರಿಣಾಮಿ ಕಾರಣ ಎಂಬುದು ಈ ವಾಕ್ಯ ಪ್ರತಿಪಾದ್ಯ ಎನ್ನುತ್ತೀರೋ? ಅಥವಾ ಕರ್ತೃತ್ವವು ಈವಾಕ್ಯದಿಂದ ಬೋಧ್ಯ ಎನ್ನುತ್ತೀರೋ? ಅಥವಾ ಶುದ್ಧ ಬ್ರಹ್ಮನು ಭ್ರಮಾಧಿಷ್ಠಾನ ವೆಂಬುದು ಈವಾಕ್ಯ ಬೋಧ್ಯವೋ? ಮೊದಲಿನ ಎರಡು ಪಕ್ಷಗಳನ್ನು ಅಂಗೀಕರಿಸಲು ಬರುವುದಿಲ್ಲ. ಸದೇವ ಎಂಬಲ್ಲಿ ಉಕ್ತವಾದ ಸತ್ವವು ವಿಶಿಷ್ಟನಲ್ಲಿ ಬರುವುದಿಲ್ಲ ಮತ್ತು ಅಖಂಡ ಬ್ರಹ್ಮನಲ್ಲೇ

ವೇದ ಸಮನ್ವಯವು ಹಿಂದಿನ ಸೂತ್ರದಲ್ಲಿ ಪ್ರತಿಜ್ಞಾತವಾಗಿದೆ. ಎರಡನೇ ಪಕ್ಷದಲ್ಲಿ ಮತ್ತೊಂದು ದೋಷವು ಬರುತ್ತದೆ - ಪ್ರಧಾನವು ಪರಿಣಾಮಿ ಎಂಬ ಪೂರ್ವಪಕ್ಷಕ್ಕೆ - ವಿಶಿಷ್ಟ ಬ್ರಹ್ಮನು ಕರ್ತೃ ಎಂಬುದು ಸಿದ್ಧಾಂತವಾಗುವುದಿಲ್ಲ. ಮೂರನೆಯ ಪಕ್ಷದಲ್ಲಿಯೂ ವೈಯಧಿಕರಣ್ಯ ದೋಷವೇ ಬರುತ್ತದೆ. ಪ್ರಧಾನವು ಪರಿಣಾಮಿ ಎಂದು ಹೇಳಿದಾಗ ಬ್ರಹ್ಮನು ಭ್ರಮಾಧಿಷ್ಠಾನ ಎಂಬುದು ಉತ್ತರವಾಗುವುದಿಲ್ಲ. ಎಂದು ಚಂದ್ರಿಕೆಯಲ್ಲಿ ಹೇಳಿದಂತೆ ತಿಳಿಯಬೇಕು.

## ಗುಣಪೂರ್ಣತ್ವ ವಿವಕ್ಷಿತ

ಪಂಚಾಧಿಕರಣಿಯಲ್ಲಿ ಬ್ರಹ್ಮನ ಲಕ್ಷಣ ಪ್ರಮಾಣಗಳನ್ನು ಹೇಳಲಾಗಿದೆ. ಅತಿವ್ಯಾಪ್ತಿನಿರಾಸ ಮತ್ತು ಪ್ರಮಾಣಕ್ಕೆ ಅನ್ಯಪರತ್ವ ಶಂಕಾನಿರಾಸವನ್ನೂ ಮಾಡಲಾಗಿದೆ. ಅಸಂಭಾವಿತತ್ವ ಶಂಕಾನಿರಾಸ ಕ್ಕಾಗಿ ಸಂಭಾವಕಯುಕ್ತಿಯನ್ನು ಹೇಳಲಾಗಿದೆ. ಆದರೂ ಉದಾಹರಣ ಪೂರ್ವಕವಾಗಿ ಸಮನ್ವಯವನ್ನು ವಿವರಿಸರಲು ಆನಂದಮಯಾದಿ ಅಧಿಕರಣಗಳು ಹೊರಟಿವೆ ಎಂದು ಸುಧಾದಲ್ಲಿ ಹೇಳಿದ್ದಾರೆ.

ಇಲ್ಲಿ ಬರುವ ಸಂಶಯವೇನೆಂದರೆ, ಈಕ್ಷತ್ಯಧಿಕರಣದಲ್ಲಿ ಕೇವಲ ಪ್ರಮಾಣದ ವಿಷಯದಲ್ಲಿ ಸುಭಾವಿತತ್ವವನ್ನು ಹೇಳಿದ್ದಾರೆಯೇ ಹೊರತು ಲಕ್ಷಣದ ವಿಷಯದಲ್ಲಿ ಸಂಭಾವಿತತ್ವವನ್ನು ಹೇಳಿಲ್ಲ. ಆದ್ದರಿಂದ ಸುಧಾದಲ್ಲಿ ಹೇಳಿದ ವಿಷಯವನ್ನು ಹೇಗೆ ಕೂಡಿಸಬೇಕು ಎಂದು. ಇದಕ್ಕೆ ಉತ್ತರ ಶ್ರೀಸುಧಾದಲ್ಲಿ ವಿವಕ್ಷಿತವಾದ ಲಕ್ಷಣ ಎಂದರೆ ಜನ್ಮಾದಿಕಾರಣತ್ವ ಲಕ್ಷಣವಲ್ಲ. ಬ್ರಹ್ಮ ಪದದಿಂದ ಸೂಚಿತವಾದ ಗುಣಪೂರ್ಣತ್ವ ಲಕ್ಷಣವನ್ನಿಟ್ಟುಕೊಳ್ಳಬೇಕು. ಆ ಲಕ್ಷಣವಾದರೂ ಸಂಭಾವಿತವೇ ಆಗಿದೆ ಎಂಬ ವಿಷಯವು ಜನ್ಮಾಧಿಕರಣದಲ್ಲಿ ಬಂದಿದೆ. ಭಗವಂತನಲ್ಲಿ ಜನ್ಮಾದಿಕಾರಣತ್ವ ಇದ್ದ ಪ್ರಯುಕ್ತ ಗುಣಪೂರ್ಣತ್ವ ಸಂಭಾವಿತವಾಗಿದೆ ಎಂದು. ಆದ್ದರಿಂದ ಸುಧಾದಲ್ಲಿ ಹೇಳಿದ್ದು ಸರಿಯಾಯಿತು.

ಅಥವಾ ಈಕ್ಷತ್ಯಧಿಕರಣದಲ್ಲಿಯೇ ಪ್ರಮಾಣವು ಸಂಭಾವಿತ ಎಂದು ಹೇಳಿದ್ದರಿಂದಲೇ ಆ ಪ್ರಮಾಣಕ್ಕೆ ವಿಷಯವಾದ ಜನ್ಮಾದಿಕಾರಣತ್ವ

ಲಕ್ಷಣವೂ ಸಂಭಾವಿತ ಎಂದು ಪರಂಪರಯಾ ಹೇಳಿದಂತಾಯಿತು. ಈ ರೀತಿಯಿಂದಲೂ ಸುಧಾ ವಾಕ್ಯವನ್ನು ಕೂಡಿಸಬಹುದು.

**ಯತಿಭಂಗವಿಲ್ಲ.**

ಏವಂ ಶಾಸ್ತ್ರಾವಗಮ್ಯತ್ವೇ ವಿಭಾಗೇನ ಸಮನ್ವಯಮ್ ।
ಆನಂದಮಯ ಇತ್ಯಾದಿನಾಧ್ಯಾಯೇನ ವದತ್ಯಜಃ ॥

ಎಂಬ ಅನುವ್ಯಾಖ್ಯಾನ ಶ್ಲೋಕದಲ್ಲಿ ಯತಿ ಭಂಗವಿದೆ ಎಂಬ ಶಂಕೆಯನ್ನು ಮಾಡಬಾರದು. ಏಕೆಂದರೆ 'ಸ್ವಾದಿಷ್ವಸರ್ವನಾಮಸ್ಥಾನೇ' ಎಂಬ ಸೂತ್ರದಿಂದ ಪದಸಂಜ್ಞೆಯು ಹೇಳಲ್ಪಟ್ಟಿದೆ. ಇದು ಸುಧಾದಲ್ಲಿರುವ ನಿರೂಪಣೆ

ಇದಕ್ಕೆ ಅರ್ಥವೇನೆಂದರೆ ಯತಿ ಎಂದರೆ ವಿಚ್ಛೇದ. 'ಶ್ಲೋಕದಲ್ಲಿ ನಿಯತವಾದ ಸ್ಥಳದಲ್ಲಿ ಪದವನ್ನು ಛೇದಿಸಿ ಓದಬೇಕು. ಅದಕ್ಕೆ ಯತಿ ಎನ್ನುತ್ತಾರೆ' ಎಂದು ದಂಡಿಯೂ ಹೇಳಿದ್ದಾನೆ. ಪಾದದ ಕೊನೆಯಲ್ಲಿ ಪದವು ಮುಗಿಯಬೇಕು. ಅದು ಯತಿ ಎನಿಸುತ್ತದೆ. ಆದರೆ ಮೇಲಿನ ಶ್ಲೋಕದಲ್ಲಿ ಇತ್ಯಾದಿನಾ ಎಂಬುದು ಒಂದು ಪದವಾಗಿದೆ. ಆದರೆ ಇತ್ಯಾದಿ ಎಂಬಲ್ಲಿಗೆ ಪಾದ ಮುಗಿಯುತ್ತದೆ. ಹೊರತು ಪದದ ಕೊನೆಯಲ್ಲಿ ಪಾದ ಕೊನೆಗೊಳ್ಳಲಿಲ್ಲ ಆದ್ದರಿಂದ ಯತಿ ಭಂಗ ಎಂದು ಸಂಶಯ ಬರುತ್ತದೆ.

ಇದಕ್ಕೆ ಟೀಕಾಕೃತ್ಪಾದರು ಕೊಟ್ಟಿರುವ ಉತ್ತರ -'ಸ್ವಾದಿಷು ಅಸರ್ವನಾಮಸ್ಥಾನೇ' ಎಂಬ ಸೂತ್ರದಲ್ಲಿ ಸು ಮೊದಲಾದ ಪ್ರತ್ಯಯಗಳು ಪರದಲ್ಲಿರುವಾಗ ಪೂರ್ವದಲ್ಲಿರುವ ಭಾಗವೂ ಪದವೆನಿಸುತ್ತದೆ ಎಂದು ಪಾಣಿನಿಮಹರ್ಷಿಗಳು ಹೇಳಿದ್ದಾರೆ. ಇತ್ಯಾದಿನಾ ಎಂಬಲ್ಲಿ ನಾ ಎಂಬುದು ಅಂತಹ ಪ್ರತ್ಯಯವಾಗಿದೆ. ಆದ್ದರಿಂದ ಪೂರ್ವದಲ್ಲಿರುವ 'ಇತ್ಯಾದಿ' ಎಂಬುದೂ ಕೂಡ ಪದವೇ ಆಗುತ್ತದೆ. ಆದ್ದರಿಂದ ಪದದ ಕೊನೆಯಲ್ಲೇ ಪಾದವು ಮುಗಿದದ್ದರಿಂದ ಯತಿ ಭಂಗವಿಲ್ಲ.

**ಅಭ್ಯುಪಗಮವಾದ**

..............................ಗುಣಿಸಾಮಾನ್ಯವಾಚಿನಾಮ್ ।
ಗುಣವಾಚಿನಾಂ ಚ ಪ್ರಥಮಂ ಆಹ ದೇವಃ ಸಮನ್ವಯಮ್ ॥

ಇಲ್ಲಿ ಗುಣಿ ವಾಚಕಶಬ್ದಗಳು ಆನಂದಮಯಾದಿ ಶಬ್ದಗಳು. ಗುಣವಾಚಕ ಶಬ್ದಗಳೆಂದರೆ 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ವಾಕ್ಯಗಳಲ್ಲಿ ಬಂದಿರುವ ಆನಂದಾದಿ ಶಬ್ದಗಳು ಎಂದು ಸುಧಾದಲ್ಲಿ ವಿವರಿಸಿದ್ದಾರೆ.

ಇದು ಅಭ್ಯುಪಗಮವಾದ . ಅಂದರೆ ಅವುಗಳು ಗುಣವಾಚಕ ಎಂಬ ಪಕ್ಷವನ್ನು ಒಪ್ಪಿ ಹೇಳಿದ ಮಾತು. ವಸ್ತುತಸ್ತು ''ನಾಮಗ್ರಹಣೇ ನಾಮೈಕ ದೇಶ ಗ್ರಹಣಂ'' ಎಂಬ ನ್ಯಾಯದಂತೆ ಆನಂದಾದಿ ಶಬ್ದಗಳೂ ಕೂಡ ಆನಂದಮಾಯಾದಿ ಶಬ್ದಗಳ ಏಕದೇಶ ಎಂದು ಇಟ್ಟುಕೊಂಡಾಗ ಅವುಗಳೂ ಗುಣವಾಚಕಗಳೇ ಆಗುತ್ತವೆ.

**ಆನಂದಮಯಾಧಿಕರಣ ವ್ಯರ್ಥವಲ್ಲ**

ಭಕ್ತಿ ಪಾದದಲ್ಲಿರುವ ಉಭಯವ್ಯಪದೇಶಾಧಿಕರಣದಲ್ಲಿ ಗುಣಗುಣಿಗಳಿಗೆ ಅಭೇದವನ್ನು ಸಮರ್ಥನೆ ಮಾಡುವುದರಿಂದ ಗುಣಿ ವಾಚಕಶಬ್ದಸಮನ್ವಯದಿಂದಲೇ ಗುಣವಾಚಕಶಬ್ದಗಳಿಗೂ ಬ್ರಹ್ಮನಲ್ಲಿ ಸಮನ್ವಯ ಸಿದ್ಧವಾಗುತ್ತಿರುವಾಗ ಆನಂದಮಯಾಧಿಕರಣದಲ್ಲಿ ಗುಣವಾಚಕ ಶಬ್ದಗಳ ಸಮನ್ವಯ ಮಾಡುವುದು ವ್ಯರ್ಥವಲ್ಲವೇ ? ಎಂದು ಸಂದೇಹ ಬರುತ್ತದೆ.

ಆದರೆ ಆನಂದಮಯಾಧಿಕರಣವು ಮುಖ್ಯವಾಗಿ ಗುಣವಾಚಕ ಶಬ್ದ ಸಮನ್ವಯ ಮಾಡಲು ಪ್ರವೃತ್ತವಾದದ್ದಲ್ಲ. ಗುಣಿ ವಾಚಕ ಶಬ್ದ ಸಮನ್ವಯವೇ ಈ ಅಧಿಕರಣದ ಮುಖ್ಯ ಉದ್ದೇಶ. ಗುಣಿ ವಾಚಕ ಶಬ್ದ ಸಮನ್ವಯ ಮಾಡಿದಾಗ ಅರ್ಥಾತ್ ಗುಣ ವಾಚಕ ಶಬ್ದವೂ ಸಮನ್ವಯವನ್ನು ಹೊಂದುತ್ತದೆ ಹೊರತು ಅದಕ್ಕಾಗಿಯೇ ಈ ಅಧಿಕರಣ ಪ್ರಾರಂಭವಾದದ್ದಲ್ಲ ಎಂದು ತಾತ್ಪರ್ಯ.

**ಆನಂದಮಯ ಶಬ್ದವೇ ಏಕೆ?**

ತೈತ್ತರೀಯೋಪನಿಷತ್ತಿನಲ್ಲಿ ಅನ್ನಮಯಾದಿ ಪ್ರಕರಣಗಳೇ ಮೊದಲಿರುವಾಗ ಈ ಸೂತ್ರದಲ್ಲಿ ಅನ್ನಮಯ ಶಬ್ದವನ್ನು ಬಿಟ್ಟು ಆನಂದಮಯ ಶಬ್ದವನ್ನೇ ಏಕೆ ಹೇಳಿದ್ದಾರೆ ಎಂದು ಸಂಶಯ ಬರುತ್ತದೆ. ಇದಕ್ಕೆ ಸುಧಾದಲ್ಲಿ ಒಂದು ಉತ್ತರವನ್ನು ಕೊಡಲಾಗಿದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ

ಸೂತ್ರದಲ್ಲಿ ಬ್ರಹ್ಮ ಜಿಜ್ಞಾಸೆ ಮಾಡಬೇಕೆಂದು ಹೇಳಿದ್ದಾರೆ. ಆದರೆ ಆನಂದಮಯ ಪ್ರಕರಣದಲ್ಲಿ ಆ ಬ್ರಹ್ಮನನ್ನು ಆನಂದಮಯನ ಪುಚ್ಛ ಎನ್ನಲಾಗಿದೆ. ಆದ್ದರಿಂದ ಆನಂದಮಯನ ಅವಯವ ಮಾತ್ರ ಬ್ರಹ್ಮ ಹೊರತು ಆನಂದಮಯ ಬ್ರಹ್ಮನಲ್ಲ ಎಂದು ಸಂಶಯ ಬರುತ್ತದೆ. ಆದ್ದರಿಂದ ಆನಂದಮಯನೂ ಬ್ರಹ್ಮನೇ ಎಂದು ಸಮರ್ಥಿಸುವುದು ಪ್ರಕೃತವಾಗಿದೆ. ಆದಕ್ಕಾಗಿ ಸೂತ್ರದಲ್ಲಿ ಆನಂದಮಯನಾಮ ವನ್ನೇ ಗ್ರಹಣ ಮಾಡಿದ್ದಾರೆ ಎಂದು.

ಇದು ಉಪಲಕ್ಷಣ. ಇನ್ನೊಂದು ಸಮಾಧಾನವನ್ನೂ ಹೇಳಬಹುದು. ಸರ್ವರಿಂದಲೂ ಅಪೇಕ್ಷಿತವಾದದ್ದು ಆನಂದ. ಅದಕ್ಕಾಗಿ ಬ್ರಹ್ಮನ ಆನಂದ ರೂಪವಾದ ಮಹಾಗುಣವನ್ನೇ ಉಪಾಸನೆ ಮಾಡಬೇಕು. ಅದಕ್ಕಾಗಿ ಮತ್ತು ಅಧ್ಯಾಯದ ಆದಿಯಲ್ಲಿ ಈ ಮಹಾಗುಣವನ್ನು ಕೀರ್ತನೆ ಮಾಡಿದ್ದರಿಂದ ಮಂಗಲ ರೂಪವೂ ಆಗುವ ಪ್ರಯುಕ್ತ ಇದನ್ನೇ ಗ್ರಹಣ ಮಾಡಿದ್ದಾರೆ.

**ಪರಮಾತ್ಮನಲ್ಲಿ ಅಂಗಾಂಗಿಭಾವವು ಸ್ಮೃತಿಸಿದ್ಧವಾಗಿದೆ**

**ಬ್ರಹ್ಮತಾಽವಯವೇಽಪಿ ಸ್ಯಾತ್ ತಥಾಽವಯವಿನಿ ಸ್ವತಃ ।**
**ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಽಖಿಲಾ ।**
**ದರ್ಶಿತಾ ಚೈವ ಪಾರ್ಥಾಯ ನಿಃಸೀಮಾಃ ಶಕ್ತಯೋಽಸ್ಯ ಹಿ ॥**

ಆನಂದಮಯನೂ ಬ್ರಹ್ಮ.. ಅವನೂ ಪೂರ್ಣ. ಭಗವಂತನ ಅವಯವ ಅವಯವಿಗಳ ವ್ಯಾಪ್ತತ್ವ ಅರ್ಜುನ ಪ್ರತ್ಯಕ್ಷ ಸಿದ್ಧವಾಗಿದೆ. ಪರಮಾತ್ಮನ ಅಚಿಂತ್ಯ ಶಕ್ತಿಯಿಂದ ಅವಯವ ಮತ್ತು ಅವಯವಿ ಎರಡೂ ಪೂರ್ಣ. ಎಂಬುದು ಯುಕ್ತವಾಗುತ್ತದೆ. 'ಶಿರೋ ನಾರಾಯಣಃ ಪಕ್ಷಃ' ಇತ್ಯಾದಿ ಭಾಷ್ಯೋಕ್ತ ಸ್ಮೃತಿಯಲ್ಲಿ ಭಗವದ್ರೂಪಗಳೇ ಅಂಗಾಂಗಿಭಾವವನ್ನು ಹೊಂದಿರುವುದು ಸಿದ್ಧವಾಗಿದೆ ಎಂಬುದನ್ನು ತೋರಿಸಲು ಅನುವ್ಯಾಖ್ಯಾನದಲ್ಲಿ ಹಿ ಎಂದು ಹೇಳಲಾಗಿದೆ.

ಅಂಗಾಂಗಿತ್ವೇನ ಭಗವಾನ್ ಸ್ವಾನಂದಾನುಭವೇ ಸ್ಥಿತಃ ।
ಸ ಏವ ವ್ಯೂಹ್ಯ ಚಾತ್ಮಾನಂ ಪೃಥಗ್ರೂಪ ಇವ ಸ್ಥಿತಃ ॥

ಭಗವಂತನು ಒಬ್ಬನೇ ಆದರೂ ಅವಯವ ಮತ್ತು ಅವಯವಿ ರೂಪಗಳಿಂದ ಸ್ವಾನಂದಾನುಭವದಲ್ಲಿ ಮಗ್ನನಾಗಿದ್ದಾನೆ. ಒಂದು

ರೂಪದಿಂದ ವಾಹನನಾಗಿ ಮತ್ತೊಂದು ರೂಪದಿಂದ ಅದನ್ನೇರಿದವನಾಗಿ ತಾನು ಬೇರೆಯೇ ಎಂಬಂತಿದ್ದಾನೆ. ಹೀಗೆ ನಾರಾಯಣ ವಾಸುದೇವಾದಿ ರೂಪಗಳಿಂದ ನಾನಾ ರತ್ನ ನಿರ್ಮಿತ ಪ್ರತಿಮೆಯಂತೆ ಪುಂಜೀಭೂತವಾದ ರೂಪವಿಶೇಷದಿಂದ ಅಂಗಾಂಗಿತ್ವವು ಸರಿಗೂಡುತ್ತದೆ.

**ನಾಮೈಕದೇಶವೂ ಬೋಧಕ**

ತೈತ್ತಿರೀಯದ ಬ್ರಹ್ಮವಲ್ಲಿಯಲ್ಲಿ ಹೇಳಲ್ಪಟ್ಟ ಅನ್ನಮಯಾದಿಗಳು ಭಗವದ್ರೂಪಗಳೇ ಆಗಿವೆ. ಏಕೆಂದರೆ ಮುಂಬರುವ ಭೃಗುವಲ್ಲಿಯು ಇದಕ್ಕೆ ಸಂವಾದಿಯಾಗಿದೆ.

ಇಲ್ಲಿ ಒಂದು ಸಂದೇಹ ಬರಬಹುದು - ಭೃಗುವಲ್ಲಿಯಲ್ಲಿ 'ಅನ್ನಂ ಪ್ರಾಣಂ ಚಕ್ಷುಃ' ಇತ್ಯಾದಿಯಾಗಿ ಅನ್ನಾದಿ ಶಬ್ದಗಳಿವೆಯೇ ಹೊರತು ಅನ್ನಮಯಾದಿ ಶಬ್ದಗಳಲ್ಲ. ಆದ್ದರಿಂದ ಭೃಗುವಲ್ಲಿಯ ಸಂವಾದ ಹೇಗೆ? ಎಂದು. ಇದಕ್ಕೆ ಸಮಾಧಾನ - ಭೃಗುವಲ್ಲಿಯಲ್ಲಿ ಬಂದಿರುವ 'ಅನ್ನ ಪ್ರಾಣ' ಇತ್ಯಾದಿ ಏಕದೇಶಕ್ಕೆ ಅನ್ನಮಯ ಪ್ರಾಣಮಯ ಇತ್ಯಾದಿ ಸಮಗ್ರ ಶಬ್ದಗಳಲ್ಲಿ ಲಕ್ಷಣಾ ಮಾಡಬೇಕು ಆದ್ದರಿಂದ ಅನ್ನಮಯಾದಿಗಳೇ ಅಲ್ಲಿಯೂ ಪ್ರಸ್ತುತವಾಗಿವೆ ಎಂದು.

ವ್ಯಾಕರಣ ಮಹಾಭಾಷ್ಯದ ಪಶ್ಪಶಾಹ್ನಿಕದ ಕೈಯಟ ಗ್ರಂಥದಲ್ಲಿ 'ಸಿದ್ಧೇ ಶಬ್ದಾರ್ಥಸಂಬಂಧೇ' ಎಂಬ ಭಾಷ್ಯ ವ್ಯಾಖ್ಯಾನ ಸಂದರ್ಭದಲ್ಲಿ - ಏಕದೇಶ ಮಾತ್ರ ಕೀರ್ತನದಿಂದ ಪ್ರತೀತವಾದ ಸಮಗ್ರ ಶಬ್ದವು ಅರ್ಥ ಬೋಧಕವಲ್ಲ. ಉಚ್ಚಾರಣ ಮಾಡಲ್ಪಟ್ಟರೆ ಮಾತ್ರ ಅರ್ಥ ಬೋಧಕ ಎಂದು ಹೇಳಲಾಗಿದೆ.

ಇದು ಸರಿಯಲ್ಲ ಏಕೆಂದರೆ ಶಬ್ದವು ಉಚ್ಚಾರಣೆ ಮಾಡಲ್ಪಡದಿದ್ದರೂ ಅದನ್ನು ಮಾನಸಿಕವಾಗಿ ಅನುಸಂಧಾನ ಮಾಡಿಕೊಂಡಾಗ ಅರ್ಥ ಪ್ರತೀತಿ ಉಂಟಾಗುವುದು ಅನುಭವಸಿದ್ಧವಾಗಿದೆ.

**ಆಕಾಶಾದಿ ಶಬ್ದಗಳು ವಿಷ್ಣು ಪರ**

ತೈತ್ತಿರೀಯ ಉಪನಿಷತ್ತಿನಲ್ಲಿ ''ಆತ್ಮನ ಆಕಾಶಃ ಸಂಭೂತ:। ಆಕಾಶಾತ್ ವಾಯು:। ವಾಯೋರಗ್ನಿ: । ಅಗ್ನೇರಾಪ: । ಅದ್ಭ್ಯ: ಪೃಥಿವೀ । ಪೃಥಿವ್ಯಾ ಓಷಧಯ: । ಓಷಧಿಭ್ಯೋ ಅನ್ನಂ । ಅನ್ನಾತ್ ಪುರುಷ: । ಸ ವಾ ಏಷ ಪುರುಷೋನ್ನರಸಮಯ:'' ಎಂಬಲ್ಲಿ ಆತ್ಮ, ಆಕಾಶ, ವಾಯು, ಅಗ್ನಿ,

ಅಪ್, ಪೃಥಿವಿ, ಓಷಧಿ, ಅನ್ನ, ಪುರುಷ ಈ ಶಬ್ದಗಳು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಆದ್ದರಿಂದ ಸವಾವಿಷ ಎಂಬಲ್ಲಿ ಪೂರ್ವೋಕ್ತನಾದ ವಿಷ್ಣುವನ್ನೇ ಪರಾಮರ್ಶ ಮಾಡಲಾಗಿದೆ. ಆದ್ದರಿಂದ ಅನ್ನರಸಮಯನೂ ವಿಷ್ಣುವೇ. 'ಆಕಾಶಃ ಸಂಭೂತ:' ಎಂಬಲ್ಲಿ ಹೇಳಲ್ಪಟ್ಟ ಉತ್ಪತ್ತಿಯಾದರೂ ಪ್ರಾದುರ್ಭಾವ ರೂಪವಾದುದೆಂದು ಭಾವಿಸಬೇಕು. ಇದನ್ನು ''ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇ:'' ಎಂಬ ಅಧಿಕರಣದಲ್ಲಿ ವಿವರಿಸಲಾಗುವುದು ಎಂದು ಸುಧಾದಲ್ಲಿದೆ. ಇದು ಉಪಲಕ್ಷಣ - ದ್ಯುಭ್ವಾದ್ಯಾಯತನಂ ಎಂಬ ಅಧಿಕರಣದಲ್ಲಿ ವಿಷ್ಣುವಿಗೂ ಪ್ರಾದುರ್ಭಾವರೂಪ ಉತ್ಪತ್ತಿಯನ್ನು ಉಪಪಾದಿಸಲಾಗುವುದು ಮತ್ತು 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಮಹಾಯೋಗ ಮತ್ತು ವಿದ್ವದ್ರೂಢಿಗಳಿಂದ ವಿಷ್ಣುವೇ ಆಕಾಶಾದಿ ಸಮಸ್ತಭೂತಭೌತಿಕಶಬ್ದಮುಖ್ಯಾರ್ಥ ಎಂದು ಉಪಪಾದಿಸಲಾಗುವುದು ಎಂಬುದಾಗಿಯೂ ಇಟ್ಟುಕೊಳ್ಳಬೇಕು.

## ಏಕವಾಕ್ಯತಾ (ಮೀಮಾಂಸಾ)

'ಅರ್ಥೈಕತ್ವಾತ್ ಏಕಂ ವಾಕ್ಯಂ ಸಾಕಾಂಕ್ಷಂ ಚೇತ್ ವಿಭಾಗೇ ಸ್ಯಾತ್' ಇದು (೨ನೇ ಅ. ಪ್ರಥಮ ಪಾದ) ಪೂರ್ವಮೀಮಾಂಸಾ ಸೂತ್ರ. ಇದರಲ್ಲಿ ಏಕವಾಕ್ಯತೆಯ ಲಕ್ಷಣವನ್ನು ಹೇಳಿದ್ದಾರೆ. ಒಂದು ವಿಷಯವನ್ನು ಪ್ರತಿಪಾದಿಸಲು ಎಷ್ಟು ಶಬ್ದಗಳು ಬೇಕಾಗುತ್ತವೋ ಆ ಶಬ್ದ ಸಮೂಹಕ್ಕೆ ಏಕವಾಕ್ಯ ಎನ್ನುತ್ತಾರೆ. ಇಷ್ಟು ಮಾತ್ರವಲ್ಲದೆ, ವಿಭಾಗೇ ಅಂದರೆ ಯಾವುದಾದರೂ ಒಂದು ಶಬ್ದವನ್ನು ತೆಗೆದಾಗ ಇತರ ಶಬ್ದಗಳು ಪರಿಪೂರ್ಣ ಅರ್ಥವನ್ನು ತಿಳಿಸಲು ಅಸಮರ್ಥವಾಗುವ ಪಕ್ಷದಲ್ಲಿ ಅಂತಹ ಶಬ್ದವನ್ನು ಒಳಗೊಂಡ ಶಬ್ದ ಸಮೂಹವು ಏಕವಾಕ್ಯವೆನಿಸುವುದು. ಉದಾಹರಣೆಗೆ - 'ಘಟ: ಅಸ್ತಿ' ಎಂಬ ವಾಕ್ಯವು ಒಂದು ವಿಷಯವನ್ನು ಪ್ರತಿಪಾದಿಸುತ್ತದೆ. ಮತ್ತು ಈ ಎರಡು ಶಬ್ದಗಳಲ್ಲಿ ಯಾವುದನ್ನು ತೆಗೆದರೂ ಪರಿಪೂರ್ಣ ಅರ್ಥ ದೊರೆಯುವುದಿಲ್ಲ. ಆದ್ದರಿಂದ ಆ ಎರಡೂ ಶಬ್ದಗಳನ್ನೊಳಗೊಂಡ ವಾಕ್ಯವು ಏಕವಾಕ್ಯ ಎನಿಸಿದೆ.

ಇಲ್ಲಿ 'ಒಂದೇ ವಿಷಯವನ್ನು ಪ್ರತಿಪಾದಿಸುವ ವಾಕ್ಯ' ಎಂದು ಇಷ್ಟು ಮಾತ್ರ ಹೇಳಿದರೆ 'ಘಟ: ಅಸ್ತಿ ಘಟ: ಅಸ್ತಿ' ಎಂಬುದೂ ಕೂಡ ಒಂದೇ

ವಿಷಯವನ್ನು ಪ್ರತಿಪಾದಿಸುವುದರಿಂದ ಏಕ ವಾಕ್ಯ ಎಂದಾಗಬೇಕಾಗುತ್ತದೆ ಆದ್ದರಿಂದ (ವಿಭಾಗೇ ಸತಿ ಸಾಕಾಂಕ್ಷಂ ಚೇತ್) 'ಯಾವುದಾದರೂ ಒಂದು ಶಬ್ದ ಇಲ್ಲದಿದ್ದಾಗ ಉಳಿದದ್ದು ಅಪೂರ್ಣವಾದರೆ ಮಾತ್ರ' ಎಂಬ ಅಂಶವನ್ನೂ ಲಕ್ಷಣದಲ್ಲಿ ಸೇರಿಸಬೇಕು. ಘಟ: ಅಸ್ತಿ ಘಟ: ಅಸ್ತಿ ಎಂಬಲ್ಲಿ ಒಂದು ವಾಕ್ಯವನ್ನು ತೆಗೆದರೂ ಉಳಿದಿರುವ ಇನ್ನೊಂದು ವಾಕ್ಯವು ಅಭಿಪ್ರೇತ ವಿಷಯವನ್ನು ತಿಳಿಸಲು ಅಸಮರ್ಥವೇನೂ ಆಗುವುದಿಲ್ಲ. ಆದ್ದರಿಂದ ಎರಡು ಸಲ ಪ್ರಯೋಗಿಸಲ್ಪಟ್ಟ ಘಟೋಽಸ್ತಿ ಎಂಬ ವಾಕ್ಯಕ್ಕೆ ಏಕವಾಕ್ಯತಾ ಬರುವುದಿಲ್ಲ.

ವಿಭಾಗೇ ಸತಿ ಸಾಕಾಂಕ್ಷಂ ಏಕವಾಕ್ಯಂ ಎಂಬುದಾಗಿ ಮಾತ್ರ ಹೇಳಿದರೆ 'ಅಷ್ಟವರ್ಷಂ ಬ್ರಾಹ್ಮಣಂ ಉಪನಯೀತ ತಮಧ್ಯಾಪಯೀತ ' ಎಂಬ ಈ ಎರಡು ವಾಕ್ಯಗಳಿಗೆ ಏಕವಾಕ್ಯತಾ ಬರಬೇಕಾಗುತ್ತದೆ. ಏಕೆಂದರೆ ಇದರಲ್ಲಿ ಅಷ್ಟವರ್ಷಂ ಬ್ರಾಹ್ಮಣಂ ಉಪನಯೀತ ಎಂಬ ವಾಕ್ಯವನ್ನು ತೆಗೆದರೆ ಕೇವಲ ತಮಧ್ಯಾಪಯೀತ ಎಂಬ ವಾಕ್ಯವು ಅರ್ಥವನ್ನು ತಿಳಿಸುವುದಿಲ್ಲ. ಅಲ್ಲಿ 'ತಂ' (ಅವನನ್ನು) ಎಂದರೆ ಯಾರನ್ನು ಗ್ರಹಿಸಬೇಕೆಂದು ತಿಳಿಯುವುದಿಲ್ಲ ಅದಕ್ಕಾಗಿ ಮೊದಲಿನ ವಾಕ್ಯವೂ ಬೇಕಾಗುತ್ತದೆ ಆದ್ದರಿಂದ ಲಕ್ಷಣದಲ್ಲಿ 'ಒಂದು ವಿಷಯವನ್ನು ತಿಳಿಸುವಂತಹ ವಾಕ್ಯ' ಎಂದು ಸೇರಿಸಬೇಕು. ಪ್ರಕೃತದಲ್ಲಿಯಾದರೂ ಏಕವಾಕ್ಯತಾ ಇಲ್ಲ. ಏಕೆಂದರೆ ಒಂದೊಂದು ವಾಕ್ಯವು ಉಪನಯನ ಅಧ್ಯಾಪನ ರೂಪ ಭಿನ್ನ ವಿಷಯವನ್ನು ಬೋಧಿಸುತ್ತಿದೆ.

## ಶ್ರೀಶ್ಚ ತೇ ಲಕ್ಷ್ಮೀಶ್ಚ ಪಾಠಭೇದ

ಪ್ರಾಣಶಬ್ದವಾಚ್ಯನೂ ವಿಷ್ಣುವೇ. ಅವನಲ್ಲೇ ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ (ಶ್ರೀ ಮತ್ತು ಲಕ್ಷ್ಮೀ ಇಬ್ಬರೂ ನಿನ್ನ ಪತ್ನಿಯರು) ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಶ್ರೀಲಕ್ಷ್ಮೀಪತಿತ್ವ ಲಿಂಗ ಇದೆ. ಬೇರೆ ಪ್ರಾಣನಲ್ಲಿ ಇಲ್ಲ ಎಂದು 'ಅತಃ ಏವ ಪ್ರಾಣಃ' ಎಂಬ ಸೂತ್ರದಲ್ಲಿ ತೀರ್ಮಾನಿಸಲಾಗಿದೆ.

ಇಲ್ಲಿ ತೈತ್ತರೀಯ ಶ್ರುತಿಯಲ್ಲಿ ಬಂದ 'ತದ್ವೈ ತ್ವಂ ಪ್ರಾಣೋ ಅಭವಃ' (ಆದ್ದರಿಂದಲೇ ನೀನು ಪ್ರಾಣ) ಎಂಬ ಶ್ರುತಿಯಲ್ಲಿರುವ

ಪ್ರಾಣಶಬ್ದವು ವಿಷ್ಣುಪರವೆಂದು ಸಿದ್ಧಪಡಿಸಲಿಕ್ಕಾಗಿ ಅಲ್ಲಿಯೇ ಮುಂದೇ ತೈತ್ತಿರೀಯ ಶ್ರುತಿಯಲ್ಲಿರುವ ಶ್ರೀಶ್ಚ ತೇ ಎಂಬ ಶ್ರುತಿಯನ್ನು ಕೊಟ್ಟಿದ್ದಾರೆ.

ಆದರೆ ತೈತ್ತರೀಯ ಶ್ರುತಿಯಲ್ಲಿ ಹ್ರೀಶ್ಚ ತೇ ಲಕ್ಷ್ಮೀಶ್ಚ ಎಂಬುದಾಗಿ ಹ್ರೀ ಶಬ್ದ ಘಟಿತವಾಗಿ ಪಾಠವಿದೆ. ಶ್ರೀಶ್ಚ ಎಂಬುದಾಗಿ ಪಾಠವಿಲ್ಲ. ಆದ್ದರಿಂದ ಹೀಗೆ ಉದಾಹರಿಸಿದ್ದು ಸಮಂಜಸವಲ್ಲವೆಂಬ ಶಂಕೆ ಬರಬಹುದು. ಆದರೂ ತೈತ್ತಿರೀಯ ಶಾಖೆಯ ವಾಕ್ಯದ ಸಮಾನಾರ್ಥವುಳ್ಳ ಬೇರೊಂದು ಶಾಖೆಯ ಶ್ರೀಶ್ಚ ತೇ ಎಂಬ ವಾಕ್ಯವನ್ನೇ ಭಾಷ್ಯದಲ್ಲಿ ಉದಾಹರಿಸಲಾಗಿದೆ. ಇಲ್ಲಿ ಸುಧಾದಲ್ಲೂ ಅದನ್ನೇ ತೋರಿಸಿದ್ದಾರೆ ಎಂದಿಟ್ಟುಕೊಂಡಾಗ ವಿರೋಧವಿಲ್ಲ.

**ಅತ್ಯರ್ಥ ವಿಸ್ತರಂ**

ಭಾಷ್ಯವು ಅತ್ಯಂತ ವಿಸ್ತಾರವಾದ ಅರ್ಥವುಳ್ಳದ್ದೆಂದು 'ಭಾಷ್ಯಂ ಚಾತ್ಯರ್ಥ ವಿಸ್ತರಂ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಇಲ್ಲಿರುವ 'ಅತ್ಯರ್ಥವಿಸ್ತರಂ' ಶಬ್ದಕ್ಕೆ ಅತಿ ಶಯಿತವಾದ ಅರ್ಥದಿಂದ ವಿಸ್ತಾರ ವುಳ್ಳದ್ದು ( ಅತಿಶಯಿತೇನ ಅರ್ಥೇನ ವಿಸ್ತರೋ ಯಸ್ಯ ತತ್) ಎಂದು ವಿಗ್ರಹ ತೋರಿಸಿದ್ದಾರೆ.

ಇಲ್ಲಿ ಅತಿಶಯಿತೇನಾರ್ಥೇನ ವಿಸ್ತರೋ ಯಸ್ಯ ತತ್ ಎಂಬ ವಿಗ್ರಹದಿಂದ ತಿಳಿದು ಬರುವ ಅರ್ಥವನ್ನು ಈ ಅತ್ಯರ್ಥ ವಿಸ್ತರಂ ಎಂಬ ಸಮಾಸ ಹೊಂದಿದ ಪದವು ತಿಳಿಸುತ್ತಿರುವುದರಿಂದ ಅತ್ಯರ್ಥವಿಸ್ತರಂ ಎಂಬಲ್ಲಿ (ವ್ಯಧಿಕರಣಬಹುವ್ರೀಹಿ) ಸಮಾಸವು ಯುಕ್ತವಾಗಿದೆ.

ಕೃತ್ತದ್ಧಿತ ಸಮಾಸಗಳು ಅರ್ಥವತ್ತಾದ ಶಬ್ದಗಳ ಮೇಲೆಯೇ ಬರುತ್ತವೆ. ಏಕೆಂದರೆ ಕೃತ್ತದ್ಧಿತ ಸಮಾಸಗಳು ಅಭಿಧಾನ ರೂಪವಾದ ವುಗಳು. ಅವು ಎಲ್ಲ ಶಬ್ದಗಳ ಮೇಲೆ ಬರುವುದಿಲ್ಲವೆಂದು 'ಅಕರ್ತರಿ ಚ ಕಾರಕೇ' ಎಂಬ ಸೂತ್ರದ ಪಾತಂಜಲ ಮಹಾಭಾಷ್ಯದಲ್ಲಿ ಹೇಳಲಾಗಿದೆ.

ಅನರ್ಥಕವಾದ ಶಬ್ದದ ಮೇಲೆ ಪ್ರತ್ಯಯಗಳು ಬರುವುದಿಲ್ಲ. ಆದ್ದರಿಂದ ಗ್ರಾಮಂ ಗಚ್ಛತಿ ಎಂಬರ್ಥದಲ್ಲಿ ಗ್ರಾಮಗಾಮೀ ಎಂದು ರೂಪವಾಗುತ್ತದೆ. ಇಲ್ಲಿ ಕರ್ಮಣ್ಯಣ್ ಎಂಬುದರಿಂದ ಅಣ್ ಪ್ರತ್ಯಯ

ಬಂದಿದ್ದರೆ ಅದರಿಂದ ಆಗುವ ರೂಪದಿಂದ ಯಾವ ಅರ್ಥವೂ ತಿಳಿಯುವುದಿಲ್ಲವಾಗಿ ನಿರರ್ಥಕವಾಗುತ್ತಿತ್ತು ಆದ್ದರಿಂದ ಅಣ್ ಪ್ರತ್ಯಯ ಬರುವುದಿಲ್ಲ.

ಆದ್ದರಿಂದಲೇ ಕೃತಃ ಕಟಃ ಎಂಬರ್ಥದಲ್ಲಿ ಘಞ್ ಪ್ರತ್ಯಯ ಬರುವುದಿಲ್ಲ. ಬಂದಿದ್ದರೆ ಕಾರಃ ಕಟಃ ಎಂದಾಗಿ ಏನೂ ತಿಳಿಯುತ್ತಿರಲಿಲ್ಲ ಎಂದು ಮಹಾಭಾಷ್ಯದಲ್ಲಿ ಹೇಳಿದ್ದಾರೆ.

ಸಾರ್ಥಕ ಶಬ್ದದ ಮೇಲೆಯೇ ಪ್ರತ್ಯಯ ಬರುವುದರಿಂದಲೇ ಆವಿಕ ಶಬ್ದದಿಂದ ಅವಿವಿಕಾರ ಎಂಬರ್ಥ ಗೊತ್ತಾಗುವುದರಿಂದ ಅವಿಕ ಶಬ್ದದ ಮೇಲೆ ಅಣ್ ಪ್ರತ್ಯಯ ಬರುತ್ತದೆ. ಆದ್ದರಿಂದಲೇ ಆವಂ ಶಬ್ದದಿಂದ ಅವಿವಿಕಾರವು ತಿಳಿಯುವುದಿಲ್ಲವಾದ್ದರಿಂದ ಅವೇರ್ವಿಕಾರ ಎಂಬರ್ಥದಲ್ಲಿ ಆವಂ ಎಂದು ಅಣ್ ಪ್ರತ್ಯಯ ಬರುವುದಿಲ್ಲ.

ಆದ್ದರಿಂದಲೇ ಪಂಚಭಿರ್ಭುಕ್ತಮಸ್ಯ ಎಂಬ ವ್ಯಧಿಕರಣ ಸ್ಥಲದಲ್ಲಾಗಲೀ ಪಂಚ ಭುಕ್ತವಂತೋಽಸ್ಯ ಎಂಬ ಸಮಾನಾಧಿಕರಣಸ್ಥಲದಲ್ಲಾಗಲೀ ಸಮಾಸವಾಗುವುದಿಲ್ಲ. ಏಕೆಂದರೆ ಸಮಸ್ತವಾದ ಪಂಚಭುಕ್ತಂ ಎಂಬ ಸಮಾಸ ರೂಪದಿಂದ ಈ ಎರಡೂ ಅರ್ಥಗಳು ತಿಳಿಯುವುದಿಲ್ಲ. ಎಂದು 'ಅನೇಕ ಮನ್ಯಪದಾರ್ಥೇ' ಸೂತ್ರದ ಮಹಾಭಾಷ್ಯದಲ್ಲಿ ಹೇಳಿದ್ದಾರೆ.

ಆದರೆ ಅತ್ಯರ್ಥ ವಿಸ್ತರಂ ಎಂಬ ಸಮಾಸ ರೂಪದಿಂದ ವಿಗ್ರಹ ವಾಕ್ಯಬೋಧ್ಯ ಅರ್ಥವು ತಿಳಿಯುತ್ತದೆ ಆದ್ದರಿಂದ ಸಮಾಸವಾಗುತ್ತದೆ.

**ಓಂ ಅಂತರ ಉಪಪತ್ತೇ: ಓಂ**

'ಅಂತ:ಸ್ಥಿತ್ವಾ ರಮಣ ಕೃತ್' ಎಂಬುದಾಗಿ ಶ್ರೀಮದಾಚಾರ್ಯರು ಅಂತರ ಶಬ್ದವನ್ನು ಅಂತ: + ರ ಎಂದು ವಿಭಾಗಿಸಿ ಕಣ್ಣಿನೊಳಗಿದ್ದು ಸುಖವನ್ನು ಅನುಭವಿಸುವವನು (ವಿಷ್ಣು) ಎಂದು ಅರ್ಥಮಾಡಿದ್ದಾರೆ. ಆದರೆ ಇತರ ಮತಾನುಯಾಯಿಗಳು 'ಅಂತರಕ್ಷಣಿ ಪುರುಷ:' ಎಂಬಲ್ಲಿರುವುದು ಅಂತ: ಶಬ್ದವಲ್ಲ ಕಿಂತು 'ಅನ್ಯೋಽಂತರ ಆತ್ಮಾ' ಎಂಬಲ್ಲಿರುವಂತೆ ಅಂತರ ಶಬ್ದವೇ ಇದೆ. ಅದಕ್ಕಾನುಸಾರವಾಗಿ ಸೂತ್ರದಲ್ಲಿಯೂ ಅಂತರ ಶಬ್ದ ಬಂದಿದೆ ಆದ್ದರಿಂದ ಅಂತ:+ರ

(ರಮಣಕೃತ್) ಎಂದು ವಿಭಾಗಿಸಿ ಅರ್ಥಮಾಡಿದ್ದು ಸರಿಯಲ್ಲ.ಎಂದು ಆಕ್ಷೇಪಿಸಿದ್ದಾರೆ. ಶ್ರುತಿಯಲ್ಲಿರುವುದು ಅಂತರ ಶಬ್ದವೇ ಆಗಿದ್ದರೆ ಅಂತರ ಅಕ್ಷಣಿ ಎಂದಿರಬೇಕಾಗಿತ್ತು. ಎಂಬುದಾಗಿ ಅವರೇ ಪ್ರಶ್ನೆ ಮಾಡಿಕೊಂಡು 'ಸೇದುರಾಜ' ಎಂಬಲ್ಲಿ ಹೇಗೆ ಸಃ ಇತ್ ಉ ಎಂಬುದು ಸೇದು ಎಂದಾಗಿದೆಯೋ ಮತ್ತು ಹಾರ: ಇತ್ವಾ ಎಂಬುದು ಹಾರೇತ್ವಾ ಎಂದಾಗಿದೆಯೋ ಅದರಂತೆ ಅಂತರಃ ಅಕ್ಷಣಿ ಎಂಬುದು ಅಂತರಕ್ಷಣಿ ಎಂದಾಗಿದೆ. ಎಂದು ಸಮಾಧಾನ ಹೇಳಿದ್ದಾರೆ.

ಆದರೆ ಇದು ಸರಿಯಲ್ಲ. ಸೂತ್ರದಲ್ಲಿರುವ ಅಂತರ ಎಂಬುದನ್ನು ಅಂತ: ಶಬ್ದಸಮಾನಾರ್ಥಕ ಎಂದಿಟ್ಟುಕೊಂಡರೆ ಅಂತಸ್ತದ್ಧರ್ಮ... ಎಂಬಲ್ಲಿ ಹೇಳಿದಂತೆ ಅಂತ: ಎಂಬುದನ್ನು ಬಿಟ್ಟು ಅಂತರ: ಎಂದು ಹೇಳಿದಕ್ಕೆ ಹೆಚ್ಚಿನ ಅರ್ಥವೇನೂ ದೊರೆಯುವುದಿಲ್ಲ. ಅಂತ:+ರ ಎಂದು ವ್ಯಾಖ್ಯಾನಿಸಿದರೆ ವಿಶೇಷಾರ್ಥವಿದೆ. ಮತ್ತು ಪರಭಾಷ್ಯದ ರೀತ್ಯಾ ಅಂತಪ ತದ್ಧರ್ಮೋಪದೇಶಾತ್ ಎಂಬಲ್ಲಿ ಅಂತರಕ್ಷಣಿ ಎಂಬುದನ್ನೆ ಉದಾಹರಿಸಿದ್ದರಿಂದ ಅಲ್ಲಿಯೂ ಶ್ರುತ್ಯನುಸಾರಿಯಾಗಿ ಅಂತರ: ಎಂದೇ ಹೇಳಬೇಕಾಗಿತ್ತು. ಎಂದು ಅನುಪಪತ್ತಿ ಬರುತ್ತದೆ.

ಸೂತ್ರದಲ್ಲಿರುವ ಅಂತರ ಶಬ್ದವನ್ನು ಅಂತ: ರಮಣಕೃತ್ ಎಂದೇ ವ್ಯಾಖ್ಯಾನ ಮಾಡುವುದಾದರೆ ಶ್ರುತಿಯಲ್ಲಿಯೂ ಅಂತರ: ಅಕ್ಷಣಿ ಎಂದೇ ಪದಚ್ಛೇದ ಮಾಡಿ ಅಂತ:ಸ್ಥಿತಿ ರೂಪವಾದ ಭಾವಲಿಂಗ ಮತ್ತು ರಮಣರೂಪವಾದ ಕ್ರಿಯಾಲಿಂಗ ಸಮನ್ವಯವನ್ನು ಮಾಡಬಹುದು. ಅದನ್ನು ಬಿಟ್ಟು ರಮಣ ಕೃತ್ ಎಂಬುದು ಏಷ ಆತ್ಮಾ ಎಂಬಲ್ಲಿರುವ ಆತ್ಮ ಶಬ್ದದ ವ್ಯಾಖ್ಯಾನವೆಂದು ಏಕೆ ಹೇಳಬೇಕು ಎಂಬ ಆಕ್ಷೇಪವೂ ಸರಿಯಲ್ಲ ಏಕೆಂದರೆ ಅಂತರಕ್ಷಣಿ ಎಂಬಲ್ಲಿ ಅಂತರ: ಎಂದು ಪದಚ್ಛೇದ ಮಾಡುವುದಾದರೆ ಅಂತರಾದಿತ್ಯೇ ಇತ್ಯಾದಿ ಎಲ್ಲಾ ಸ್ಥಳದಲ್ಲಿಯೂ ಹಾಗೆಯೇ ಮಾಡಬೇಕಾಗುತ್ತದೆ. ಮತ್ತು ಆತ್ಮ ಶಬ್ದದ ವ್ಯಾಖ್ಯಾನವೇ ರಮಣ ಕೃತ್ ಎಂದು ಹೇಳಲು ಬರುವಾಗ ಶ್ರುತಿಯಲ್ಲಿ ಅಂತರ: ಎಂಬ ಪದಚ್ಛೇದದ ಕ್ಲಿಷ್ಟ ಕಲ್ಪನೆಯು ಸರಿಯಲ್ಲ.

## ಗೌರವ ಲಾಘವ ವಿಚಾರ

ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ ಇಲ್ಲಿ ಸುಖವಿಶಿಷ್ಟ ಪದದ ಬದಲಿಗೆ ಸುಖಿ ಶಬ್ದವನ್ನೇ ಪ್ರಯೋಗಿಸಿದ್ದರೆ ಲಘುವಾಗುತ್ತಿತ್ತು ಎಂದು ಶಂಕೆ ಮಾಡಿ ಇದರ ಪರಿಹಾರಕ್ಕಾಗಿಯೇ ಶ್ರೀಮದಾಚಾರ್ಯರು ವಿಶಿಷ್ಟಸುಖವತ್ತ್ವಾಚ್ಚ ಎಂದು ವ್ಯಾಖ್ಯಾನ ಮಾಡಿದ್ದಾರೆ ಎಂದು ಶ್ರೀಮಜ್ಜಯತೀರ್ಥರು ಹೇಳಿದ್ದಾರೆ ಅಂದರೆ ಸುಖವಿಶಿಷ್ಟ ಶಬ್ದವು ಸುಖಿ ಎಂಬರ್ಥದಲ್ಲಿ ಹೇಳಿದ್ದಲ್ಲ. ವಿಶಿಷ್ಟಸುಖ (ಪೂರ್ಣಸುಖ) ವುಳ್ಳವನು ಎಂಬಅರ್ಥದಲ್ಲಿ ಬಂದಿದೆ. ಆದ್ದರಿಂದ ಗೌರವ ಇಲ್ಲ ಎಂಬ ಅಭಿಪ್ರಾಯ.

ಆದರೆ ಸುಖವಿಶಿಷ್ಟ ಎಂಬುದಕ್ಕೆ ಸುಖವುಳ್ಳವನು ಎಂಬ ಅರ್ಥವನ್ನು ಇಟ್ಟುಕೊಂಡರು ಗೌರವವಿಲ್ಲ. ಏಕೆಂದರೆ ಸುಖಿ ಮತ್ತು ಸುಖವಿಶಿಷ್ಟ ಎಂಬ ಶಬ್ದಗಳು ಪರ್ಯಾಯ ಪದಗಳು ಪರ್ಯಾಯ ಪದಗಳಲ್ಲಿ ಗೌರವ ಲಾಘವ ಚಿಂತೆ ಸಲ್ಲದು ಎಂದು ಪರಿಭಾಷೆಯಿದೆ. ಆದ್ದರಿಂದ ಲಾಘವ ಶಂಕೆ ಮಾಡಿದ್ದು ಹೇಗೆ ಸಮಂಜಸ? ಎಂದರೆ

ಇದಕ್ಕೆ ಸಮಾಧಾನ - ರೂಢವಾದ ಪರ್ಯಾಯ ಶಬ್ದಗಳಲ್ಲಿ ಮಾತ್ರ ಗೌರವ ಲಾಘವ ಚಿಂತೆ ಕೂಡದು ಎಂದು ಪರಿಭಾಷೆಯ ಅರ್ಥ. ಪ್ರಕೃತದಲ್ಲಿ ಸುಖಿ ಶಬ್ದವು ರೂಢಿಯುಳ್ಳದ್ದಾದರೂ ಸುಖವಿಶಿಷ್ಟ ಶಬ್ದವು ಯೌಗಿಕ ವಾದ್ದರಿಂದ ಗೌರವ ಲಾಘವ ಚಿಂತೆ ಮಾಡಿ ಶಂಕೆ ಮಾಡಿದ್ದು ಯುಕ್ತವೇ ಆಗಿದೆ.

## ಸಮಾಸ ವಿಗ್ರಹಗಳು ಸಮಾನಾರ್ಥಕ (ಅದೃಶ್ಯತ್ವಾಧಿಕರಣ)

ಅನ್ಯೋನ್ಯಾಭಾವ, ಪೃಥಕ್ತ್ವ ಮತ್ತು ಸ್ವರೂಪ ಭೂತವಾದ ಭೇದ ಇವುಗಳು ಬೇರೆ ಬೇರೆ ಅಲ್ಲ. ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ. ಇದನ್ನು ಸಮರ್ಥಿಸುತ್ತಾ ಶ್ರೀಮಜ್ಜಯತೀರ್ಥರು ಬೇರೆ ಎಂಬ ಪಕ್ಷದಲ್ಲಿ ಈ ಅನುಪಪತ್ತಿಯನ್ನು ತೋರಿಸುತ್ತಾರೆ - ಅನಶ್ವ ಎಂಬಲ್ಲಿ ನಞ್‌ಗೆ ಅನ್ಯೋನ್ಯಾಭಾವವು ಅರ್ಥ. ಆದ್ದರಿಂದ ಅಶ್ವಾದನ್ಯ: ಎಂಬಲ್ಲಿಯೂ ಅನ್ಯ ಪದಕ್ಕೆ ಅನ್ಯೋನ್ಯಾಭಾವವೆಂದೇ ಅರ್ಥ ಹೇಳಬೇಕಾಗುತ್ತದೆ. ಸಮಾಸ

ಮತ್ತು ವಿಗ್ರಹ ವಾಕ್ಯಗಳಿಗೆ ಸಮಾನಾರ್ಥಕತ್ವ ನಿಯಮವಿರುವುದರಿಂದ. ಆಗ ಅಶ್ವಾತ್ ಎಂಬಲ್ಲಿ ಪಂಚಮಿ ಅನುಪಪನ್ನ ವಾಗುತ್ತದೆ ಪೃಥಗರ್ಥಕ ಶಬ್ದವಿದ್ದಾಗ ಮಾತ್ರ ಪಂಚಮೀಬರುತ್ತದೆ ಅದರ ಪರಿಹಾರಕ್ಕಾಗಿ ಅನ್ಯ ಪದಕ್ಕೂ ನಞ್‌ಗೂ ಪೃಥಕ್ತ್ವ ಎಂದು ಅರ್ಥ ಹೇಳಿ ಪೃಥಕ್ತ್ವಕ್ಕೆ ನಿಷೇಧರೂಪತ್ವವನ್ನು ಹೇಳಬೇಕು ಎಂದು.

ಇಲ್ಲಿ ಹೇಳಿದಂತೆ ವಿಗ್ರಹವಾಕ್ಯ ಸಮಾಸಗಳಿಗೆ ಸಮಾನಾರ್ಥಕತ್ವ ಏಕೆಂದರೆ - ಪಾಣಿನಿ ಮಹರ್ಷಿಗಳು 'ಅವ್ಯಯಂ ವಿಭಕ್ತಿ....' ಇತ್ಯಾದಿ ಐದು ಸೂತ್ರಗಳಿಂದ ನಿತ್ಯ ಸಮಾಸವನ್ನು ಹೇಳಿ ಅನಂತರ ವಿಭಾಷಾ ಅಪ - ಪರಿ - ಬಹಿ... ಇತ್ಯಾದಿಯಾಗಿ ಅನೇಕ ಸೂತ್ರಗಳಿಂದ ವೈಕಲ್ಪಿಕ ಸಮಾಸವನ್ನು ಹೇಳಿದ್ದಾರೆ. ಆ ಎಲ್ಲಾ ಸೂತ್ರಗಳಿಗೂ ವಿಭಾಷಾ ಎಂದು ಅನುವೃತ್ತಿ ಮಾಡಿದ್ದಾರೆ. ಇದರ ಉದ್ದೇಶವೇನೆಂದರೆ ಲೋಕದಲ್ಲಿ ರಾಜಪುರುಷ: ಎಂದು ಪ್ರಯೋಗ ಮಾಡಬಹುದು. ರಾಜ್ಞ: ಪುರುಷ: ಎಂದು ವಿಗ್ರಹವನ್ನೂ ಮಾಡಬಹುದು. ಸಮಸ್ತಪದದಿಂದ ವಿಗ್ರಹವಾಕ್ಯವು ನಿವೃತ್ತಿಯಾಗ ಬಾರದು. ಈ ಉದ್ದೇಶದಿಂದಲೇ ವಿಕಲ್ಪ ಹೇಳಿದ್ದಾರೆ. ಇದರಿಂದ ಸಮಾನಾರ್ಥಕತ್ವ ಸಿದ್ಧವಾಗುತ್ತದೆ. ಸಮಾಸವಿಗ್ರಹಗಳಿಗೆವಿಭಿನ್ನಾರ್ಥತ್ವ ಇದ್ದ ಪಕ್ಷದಲ್ಲಿ ಸಮಾಸದಿಂದ ವಿಗ್ರಹಕ್ಕೆ ನಿವೃತ್ತಿಯ ಪ್ರಶ್ನೆಯೆ ಬರುವುದಿಲ್ಲ. ಆಗ ವಿಕಲ್ಪ ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ಸಮಾನಾರ್ಥತ್ವವಿದೆ ಎಂದು ಸಿದ್ಧವಾಗುತ್ತದೆ.

'ಸಮರ್ಥಪದವಿಧಿ:' ಎಂಬ ಸೂತ್ರ ವ್ಯಾಖ್ಯಾನ ಮಾಡುವಾಗ ವಾರ್ತಿಕ, ಭಾಷ್ಯ, ಕೈಯಟ ಪದಮಂಜರಿಗಳಲ್ಲಿ ಸಮಾಸವಿಗ್ರಹಗಳಿಗೆ ಭಿನ್ನಾರ್ಥತ್ವವನ್ನು ಹೇಳಿ ವಿಭಾಷಾ ಪದ ವ್ಯರ್ಥ ಎಂದು ಹೇಳಿದ್ದಾರೆ. ಇದು ಸರಿಯಲ್ಲ. 'ರಾಜಪುರುಷಮಾನಯ' ಎಂದರೂ 'ರಾಜ್ಞ: ಪುರುಷ ಮಾನಯ' ಎಂದು ಹೇಳಿದರೂ ಸಮಾನವಾದ ಕಾರ್ಯವೇ ಕಂಡಿದೆ. ಮತ್ತು ಎರಡಕ್ಕೂ ಸಮಾನಾರ್ಥಕತ್ವವು ಅನುಭವವಸಿದ್ಧ ವಾಗಿದೆ.

ಇಷ್ಟು ಮಾತ್ರ ವ್ಯತ್ಯಾಸ - ರಾಜಪುರುಷ ಎಂಬಲ್ಲಿ ರಾಜ ಸಂಬಂಧಿ ಪುರುಷ ಎಂದರ್ಥ 'ಋದ್ಧಸ್ಯ ರಾಜ್ಞ: ಪುರುಷ' ಎಂಬಲ್ಲಿಯೂ ರಾಜ್ಞ: ಪುರುಷ ಎಂಬುದಕ್ಕೆ ಅಷ್ಟೇ ಅರ್ಥ. ಆದರೆ ಋದ್ಧ ಪದದ ಅರ್ಥವು

ರಾಜನಲ್ಲಿ ಅನ್ವಯವಾಗುತ್ತದೆ ಸಮಾಸದಲ್ಲಿ ಮಾತ್ರ ಬಹಿರ್ಭೂತಪದಾರ್ಥದ ಅನ್ವಯ ಮಾಡುವಂತಿಲ್ಲ. ಕೇವಲ ಈ ವ್ಯತ್ಯಾಸದಿಂದ ಸಮಾಸವು ವಿಗ್ರಹಕ್ಕೆ ಅನಿವರ್ತಕ ಎಂದು ಹೇಳುವುದಾದರೆ, ಇಂತಹ ವ್ಯತ್ಯಾಸ ಉಪಕುಂಭಮ್ ಎಂಬಲ್ಲಿಯೂ ತೋರಿಸಬಹುದಾದ್ದರಿಂದ ಅದೂ ವಿಗ್ರಹಕ್ಕೆ ಅನಿವರ್ತಕವಾಗಿ ವೈಕಲ್ಪಿಕವಾಗಬೇಕಾಗುತ್ತದೆ.

ಮೀಮಾಂಸಕರೂ ಕೂಡ 'ಯಜತಿಷು ಯೇ ಯಜಾಮಹಂ ಕರೋತಿ ನಾನುಯಾಜೇಷು' ಎಂಬಲ್ಲಿ ಸಮಾಸವಿಗ್ರಹಗಳಿಗೆ ಸಮಾನಾರ್ಥಕವನ್ನೇ ಇಟ್ಟುಕೊಂಡು ಅನುಯಾಜಭಿನ್ನ ಎಂದು ಪರ್ಯುದಾಸಾರ್ಥಕತ್ವವನ್ನು ಸ್ವೀಕರಿಸಿದ್ದಾರೆ.

**ವೈಶ್ವಾನರಃ ಸಾಧಾರಣ ಶಬ್ದವ್ಯಪದೇಶಾತ್**

ಇಲ್ಲಿ ವೈಶ್ವಾನರ ನಾಮವನ್ನು ಸಮನ್ವಯ ಮಾಡಿದ್ದಾರೆ. ಇದು ಲಿಂಗ ಪಾದ ಆದ್ದರಿಂದ ಈ ಅಧಿಕರಣ ಇಲ್ಲಿ ಸೇರುವಂತಿಲ್ಲ. ಈ ಅಧಿಕರಣದಲ್ಲಿ ಲಿಂಗ ಸಮನ್ವಯವನ್ನೂ ಮಾಡಿದ್ದರಿಂದ ನಾಮ (ಪೂರ್ವ) ಪಾದದಲ್ಲಿಯೂ ಸೇರುವಂತಿಲ್ಲ. ಇದು ಅನ್ಯತ್ರ ಪ್ರಸಿದ್ಧ ಶಬ್ದವಾದ್ದರಿಂದ ಈ ಎರಡೂ ಪಾದ ಬಿಟ್ಟು ಬೇರೆ ಕಡೆ ಸೇರಿಸುವಂತಿಲ್ಲ. ಪೂರ್ಣವಾಗಿ ಕೈ ಬಿಟ್ಟರೆ ಸಮನ್ವಯವೇ ಸಿದ್ಧವಾಗುವುದಿಲ್ಲ ಎಂದು ಶಂಕೆ ಮಾಡಿಕೊಂಡು ಈ ಒಂದು ನಾಮ ಸಮನ್ವಯದಿಂದ ಅಧಿಕ ಲಿಂಗ ಸಮನ್ವಯವಾಗುವುದರಿಂದ ಇಲ್ಲಿ ಸೇರಿಸಿದ್ದಾರೆಂದು ಸುಧಾದಲ್ಲಿದೆ. ಇಲ್ಲಿ ಶಂಕೆಯನ್ನು ಮಾಡಿಕೊಳ್ಳುವಾಗ 'ಇದನ್ನು ಪೂರ್ಣವಾಗಿ ಕೈಬಿಟ್ಟರೆ ಸಮನ್ವಯವೇ ಸಿದ್ಧವಾಗುವುದಿಲ್ಲ' ಎಂದು ಹೇಳಿದ್ದಾರೆ. ಇದು ಹೇಗೆ? 'ವೈಶ್ವಾನರಃ' ಎಂಬುದು ಅಗ್ನಿದೇವತಾ ವಾಚಕವೆಂದು ಇಟ್ಟುಕೊಂಡರೆ ಆಧಿದೈವಿಕ ಶಬ್ದ ಸಮನ್ವಯ ಪರವಾದ 'ಅಂತಸ್ತದ್ಧರ್ಮೋಪದೇಶಾತ್' ಎಂಬುದರಿಂದ ಸಮನ್ವಯವಾಗುತ್ತದೆ. ಜಡವಾದ ಅಗ್ನಿವಾಚಕವೆಂದು ಭಾವಿಸಿದರೆ. ಆಕಾಶಾದಿಕರಣನ್ಯಾಯದಿಂದ ಸಮನ್ವಯವಾಗುತ್ತದಷ್ಟೇ? ಎಂದರೆ ಇದಕ್ಕೆ ಹೀಗೆ ಸಮಾಧಾನವನ್ನು ಹೇಳುತ್ತಾರೆ -

ಈ ಅಧಿಕರಣವನ್ನು ಪೂರ್ಣವಾಗಿ ಕೈಬಿಟ್ಟರೆ ಸಮನ್ವಯಾಸಿದ್ಧಿ ಪ್ರಸಂಗ ಎಂದರೆ ಆಸಂದಾಮಯಾಧಿಕರಣದಿಂದ ಆರಂಭಿಸಿ ಇದರ

ಹಿಂದಿನ ಅದೃಶ್ಯತ್ವಾಧಿಕರಣದವರೆಗೆ ಯಾವ ನಾಮ ಲಿಂಗಗಳೂ ಸಮನ್ವಯವಾಗಲಿಕ್ಕಿಲ್ಲ ಎಂದರ್ಥ. ಏಕೆಂದರೆ 'ಸರ್ವಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದರೆ ಲೋಕದ ವ್ಯವಹಾರ ಹೇಗೆ?' ಎಂಬ ಪ್ರಶ್ನೆಗೆ ಉತ್ತರಿಸಿದ ಮೇಲಷ್ಟೇ ಸಮನ್ವಯ ಸಿದ್ಧಿ. ಆ ಉತ್ತರವಾದರೂ ಈ ಅಧಿಕರಣದಲ್ಲೇ ಬರುವುದರಿಂದ ಈ ಅಧಿಕರಣವಿಲ್ಲದಿದ್ದರೆ ಎಲ್ಲ ಶಬ್ದಗಳ ಸಮನ್ವಯ ಸಿದ್ಧಿಸುವುದಿಲ್ಲ ಎಂದರ್ಥ. ಆದ್ದರಿಂದ ಸಧಾದಲ್ಲಿ ಶಬ್ದವಿಶೇಷವನ್ನು ನಿರ್ದೇಶಿಸದೆ, ಕೇವಲ ಸಮನ್ವಯಾಸಿದ್ಧಿ ಎಂದೇ ಹೇಳಿದ್ದಾರೆ.

**ಓಂ ನಾನುಮಾನಮತಚ್ಛಬ್ದಾತ್ ಓಂ -**

ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ ಇತ್ಯಾದಿ ವಾಕ್ಯದಲ್ಲಿ ಪ್ರತಿಪಾದಿತವಾದ ದ್ಯು ಭೂ ಇತ್ಯಾದಿ ಲೋಕಾಧಾರನು ವಿಷ್ಣುವೇ ಹೊರತು ರುದ್ರನಲ್ಲ. ರುದ್ರವಾಚಕವಾದ ಭಸ್ಮಧರ ಇತ್ಯಾದಿ ಯಾವ ಶಬ್ದಗಳೂ ಇಲ್ಲವಾದ್ದರಿಂದ. ಎಂಬುದಾಗಿ ಈ ಸೂತ್ರದ ಅರ್ಥ. ಇಲ್ಲಿ ಅತಚ್ಛಬ್ದಾತ್ ಎಂಬಲ್ಲಿರುವ ನಞ್ ಗೆ ಎರಡು ಅರ್ಥಗಳು ಸಂಭಾವಿತ. ಪ್ರಸಜ್ಯ ಪ್ರತಿಷೇಧ ಮತ್ತು ಪರ್ಯುದಾಸ ಎಂದು. ನಞಗೆ ಕ್ರಿಯಾಪದದ ಜೊತೆಗೆ ಅನ್ವಯ ಮಾಡಿದರೆ ಅದು ಪ್ರಸಜ್ಯ ಪ್ರತಿಷೇಧ ಉದಾಹರಣೆಗೆ ಶ್ರಾದ್ಧಂ ನ ಭುಂಕ್ತೇ ಇತಿ ಅಶ್ರಾದ್ಧಭೋಜೀ ಇಲ್ಲಿ ಶ್ರಾದ್ಧದ ಊಟವನ್ನು ಮಾಡುವುದಿಲ್ಲ ಎಂದು ಕ್ರಿಯಾಪದದ ಜೊತೆಗೆ ಅನ್ವಯ ಇರುವುದರಿಂದ ಇದು ಪ್ರಸಜ್ಯ ಪ್ರತಿಷೇಧ.

ನಞಗೆ ಸಮಾಸದಲ್ಲಿ ಉತ್ತರಪದದ ಜೊತೆಗೆ ಅನ್ವಯ ಮಾಡಿದರೆ ಅದು ಪರ್ಯುದಾಸ ಎಂದೆನಿಸುತ್ತದೆ. ಅಘಟಃ ಎಂಬ ಸಮಸ್ತಪದದಲ್ಲಿ ನಞಗೆ ಘಟಪದದೊಂದಿಗೆ ಅನ್ವಯ. ಘಟಕ್ಕಿಂತ ಭಿನ್ನವಾದುದು ಎಂದರ್ಥ ಇದು ಪರ್ಯುದಾಸಕ್ಕೆ ಉದಾಹರಣೆ.

ಪ್ರಕೃತದಲ್ಲಿ ಅತಚ್ಛಬ್ಧಾತ್ ಎಂಬಲ್ಲಿರುವ ನಞಗೆ ತಚ್ಛಬ್ದ ಇಲ್ಲ ಎಂದು ಕ್ರಿಯಾಪದದ ಜೊತೆಗೆ ಅನ್ವಯ ವಿವಕ್ಷಿತವಾಗಿರುವುದರಿಂದ ಉತ್ತರ ಪದವಾದ ತಚ್ಛಬ್ದದ ಜೊತೆಗೆ ಅನ್ವಯ ವಿವಕ್ಷಿತವಲ್ಲವಾದ್ದರಿಂದ ನಞ್‌ಗೂ ತಚ್ಛಬ್ದಕ್ಕೂ ಸಮಾಸ ಮಾಡುವುದು ಹೇಗೆ ಎಂದು ಪ್ರಶ್ನೆ. ಇದಕ್ಕೆ

'ಛಂದೋವತ್ ಸೂತ್ರಾಣಿ ಭವಂತಿ' ಸೂತ್ರಗಳು ವೇದ ತುಲ್ಯವಾಗಿರುತ್ತವೆ ಎಂದು ಸಮಾಧಾನ. ಎಂಬುದಾಗಿ ಸುಧಾಕಾರರು ಹೇಳಿದ್ದಾರೆ. ಅಂದರೆ ಈ ಸೂತ್ರವು ವೇದ ಸದೃಶವಾದ್ದರಿಂದ 'ನಞ್ 'ಗೂ 'ತಚ್ಛಬ್ದ' ಕ್ಕೂ ಸಾಮರ್ಥ್ಯವಿಲ್ಲದಿದ್ದರೂ ಸಮಾಸ ಮಾಡಬಹುದೆಂದು ಅಭಿಪ್ರಾಯ.

ಯದ್ಯಪಿ ಛಂದೋವತ್ ಸೂತ್ರಾಣಿ ಭವಂತಿ ಎಂಬುದು ಸೂತ್ರವಾಗಲೀ ವಾರ್ತಿಕವಾಗಲೀ ನ್ಯಾಯವಾಗಲೀ ಅಲ್ಲ ಆದರೂ ವೃದ್ಧಿರಾದೈಚ್ ಎಂಬ ಸೂತ್ರದಲ್ಲಿ ಐಚ್ ಎಂಬಲ್ಲಿ ಚೋ: ಕು: ಎಂಬ ಸೂತ್ರದಿಂದ ಕ್ ಬಂದು ಐಕ್ ಎಂದಾಗಬೇಕಿತ್ತು ಎಂದು ಆಶಂಕೆ. ಮಾಡಿಕೊಂಡು ಭಾಷ್ಯಕಾರರು ಛಂದೋವತ್ ಸೂತ್ರಾಣಿ ಭವಂತಿ ಎಂದು ಹೇಳಿದ್ದಾರೆ. ಕೈಯಟ ದಲ್ಲಿಯೂ ಕೂಡ ಭಾಷ್ಯಕಾರರ ಇಷ್ಟಿ ಎಂದಿದ್ದಾರೆ. ಅಂದರೆ ಇಷ್ಟ ಪ್ರಯೋಗ ಸಿದ್ಧ್ಯರ್ಥಕವಾದ ವಾಕ್ಯ. ವಾರ್ತಿಕ ಕಾರರ ಇಷ್ಟಿ ಮತ್ತು ಉಪ ಸಂಖ್ಯಾನ ಗಳಂತೆ (ಉಪಸಂಖ್ಯಾನ ಎಂದರೆ ಸ್ವೀಕಾರ ಪರಿಗ್ರಹ) ಭಾಷ್ಯಕಾರರ ಇಷ್ಟಿಯೂ ನಿರ್ಣಾಯಕವಾದುದರಿಂದ ಸುಧಾಕಾರರು ಅದನ್ನು ಹೇಳಿದ್ದಾರೆ.

''ಅಕರ್ತರಿ ಚ ಕಾರಕೇ ಸಂಜ್ಞಾಯಾಮ್'' ಎಂಬ ಪಾಣಿನಿ ಸೂತ್ರದಲ್ಲಿ ಅಕರ್ತರಿ ಎಂಬುದು ಪರ್ಯುದಾಸ ಎಂದು ಭಾವಿಸಿದರೆ ಕರ್ತೃಭಿನ್ನಕಾರಕೇ ಎಂದೇ ಅರ್ಥವಾಗುತ್ತದೆ. ಏಕೆಂದರೆ 'ನಞಿ ವ ಯುಕ್ತಂ ತದ್ಭಿನ್ನೇ ತತ್ಸದೃಶೇ ವರ್ತತೇ ತಥಾ ಹ್ಯರ್ಥಗತಿ:' ನಞನಿಂದ ಕೂಡಿದ ಪದವು ತದ್ಭಿನ್ನ ಮತ್ತು ತತ್ಸದೃಶವಾದುದನ್ನು ತಿಳಿಸುತ್ತದೆ ಎಂದು ಪರಿಭಾಷೆಯು ಹೇಳುತ್ತದೆ. ಉದಾಹರಣೆ - ಅಬ್ರಾಹ್ಮಣ ಎಂದರೆ ಬ್ರಾಹ್ಮಣ ಭಿನ್ನ ಮತ್ತು ಬ್ರಾಹ್ಮಣ ಸದೃಶ ಎಂದೇ ಅರ್ಥ. ಅದರಂತೆ ಪ್ರಕೃತದಲ್ಲಿಯೂ ಅಕರ್ತರಿ ಎಂಬ ಪದದಿಂದ ಕರ್ತೃ ಭಿನ್ನ ಮತ್ತು ಕರ್ತೃ ಸದೃಶವಾದ ಕಾರಕ ಎಂದೇ ಅರ್ಥವಾಗುವಾಗ ಪುನ: ಕಾರಕೇ ಎಂದು ಹೇಳುವುದು ವ್ಯರ್ಥವಾಗುತ್ತದೆ. ಆದರೂ ಸೂತ್ರದಲ್ಲಿ ಕಾರಕೇ ಎಂದು ಗ್ರಹಣ ಮಾಡಿದ್ದರಿಂದ ಇದು ಪರ್ಯುದಾಸವಲ್ಲ ಪ್ರಸಜ್ಜ್ಯ ಪ್ರತಿಷೇಧ ಎಂದು ತಿಳಿಯುತ್ತದೆ ಆದರೂ ಅಕರ್ತರಿ ಎಂದು ಸಮಾಸವಾಗಿದೆ. ಆದ್ದರಿಂದ ಪ್ರಸಜ್ಯ

ಪ್ರತಿಷೇಧಾರ್ಥವಿದ್ದಾಗಲೂ ನಞ್‌ಸಮಾಸವಾಗಬಹುದೆಂದು ತಿಳಿಯುತ್ತದೆ. ಆದುದರಿಂದ ಅತಚ್ಛಬ್ದಾತ್ ಎಂಬ ಸಮಾಸ ಸಾಧು.

ಯದ್ಯಪಿ ಭಾಷ್ಯದಲ್ಲಿ ಅಕರ್ತರಿ ಎಂಬಲ್ಲಿ ಪರ್ಯುದಾಸವನ್ನೇ ಆಶ್ರಯಿಸಿ ಕಾರಕ ಪದವನ್ನೇ ವ್ಯರ್ಥಎಂದು ಹೇಳಿದ್ದಾರೆ. ಆದರೂ ವೃತ್ತಿಯಲ್ಲಿ ಹೇಳಿದ ಪ್ರಕಾರವನ್ನಾಶ್ರಯಿಸಿ ಸುಧಾದಲ್ಲಿ ಅತಚ್ಛಬ್ದಾತ್ ಎಂಬುದು ಪ್ರಸಜ್ಜ್ಯ ಪ್ರತಿಷೇಧ ವೆಂದು ಹೇಳಿದ್ದಾರೆ.

ಭಾಷ್ಯಕಾರರ ಮತವನ್ನವಲಂಭಿಸಿ ಪ್ರಸಜ್ಜ್ಯ ಪ್ರತಿಷೇಧವನ್ನು ಸಮರ್ಥಿಸುವುದಾದರೆ ಹೀಗೆ ಸಮರ್ಥಿಸಬೇಕು - ಸಮರ್ಥ: ಪದವಿಧಿ: ಎಂಬ ಸೂತ್ರ ವ್ಯಾಖ್ಯಾನ ಮಾಡುವಾಗ ಭಾಷ್ಯಕಾರರು ''ಸುಡ ನಪುಂಸಕಸ್ಯ'' ಎಂಬ ಸೂತ್ರದಲ್ಲಿರುವ ಅನಪುಂಸಕಸ್ಯ ಎಂಬಲ್ಲಿ ನಞ್‌ಗೆ ಪ್ರಸಜ್ಜ್ಯ ಪ್ರತಿಷೇಧಾರ್ಥವನ್ನೇ ಅವಲಂಬಿಸಿ ಆ ಜ್ಞಾಪಕದಿಂದ 'ಅಸೂರ್ಯಂಪಶ್ಯಾಃ' ಎಂಬುದನ್ನು ನಿರ್ವಾಹ ಮಾಡಿದ್ದರಿಂದ 'ಸುಡನಪುಂಸಕಸ್ಯ' ಎಂಬುದನ್ನು ಉದಾಹರಿಸಬೇಕು.

ಅಥವಾ ಭಾಷ್ಯಕಾರರು 'ಅಸೂರ್ಯಂ ಪಶ್ಯಾಃ' ಎಂಬುದನ್ನು ನಿರ್ವಾಹ ಮಾಡಲು ಅನಪುಂಸಕಸ್ಯ ಎಂದು ಉದಾಹರಿಸಿದ್ದು ಸರಿಯಲ್ಲ. ಏಕೆಂದರೆ ಅನಪುಂಸಕಸ್ಯ ಎಂಬುದನ್ನು ಪರ್ಯುದಾಸ ಎಂದಿಟ್ಟುಕೊಂಡರೂ ಯಾವ ಬಾಧಕವಿಲ್ಲ. ಆದ್ದರಿಂದ ಭಾಷ್ಯಕಾರರಾದರೂ ಅಕರ್ತರಿ ಎಂಬಲ್ಲಿ ಕಾರಕಗ್ರಹಣ ಜ್ಞಾಪಕದಿಂದಲೇ ಸಮರ್ಥಸಬೇಕು ಎಂದು ತಿಳಿಸಲು ಸುಧಾಕಾರರು ಅಕರ್ತರಿ ಎಂಬ ಸೂತ್ರವನ್ನು ಉದಾಹರಿಸಿದ್ದಾರೆ.

ಅಥವಾ ''ಅವ್ಯಯಂ ವಿಭಕ್ತಿ... ''ಎಂಬ ಸೂತ್ರದಿಂದ ಅರ್ಥಾಭಾವ ಎಂಬ ಅರ್ಥದಲ್ಲಿ 'ಮಕ್ಷಿಕಾಣಾಂ ಅಭಾವ: ನಿರ್ಮಕ್ಷಿಕಂ' 'ವಿವಾದಸ್ಯ ಅಭಾವ: ಅವಿವಾದಂ 'ಎಂದು ಸಮಾಸಮಾಡುವಂತೆ ತಚ್ಛಬ್ದಸ್ಯ ಅಭಾವ: ಅತಚ್ಛಬ್ದಂ ಎಂದು ಅವ್ಯಯೀ ಭಾವ ಸಮಾಸ ಮಾಡಬೇಕು.

ಯದ್ಯಪಿ ಅವ್ಯಯೀಭಾವ ಸಮಾಸಮಾಡಿದರೆ ಅವ್ಯಯೀಭಾವಶ್ಚ ಎಂಬ ಸೂತ್ರದಿಂದ ಅವ್ಯಯತ್ವವು ಬಂದು 'ನಾವ್ಯಯೀಭಾವಾದತೋಮ್

ತ್ವಪಂಚಮ್ಯಾ:' ಎಂಬ ಸೂತ್ರದಿಂದ ಅಮ್ ಆದೇಶ ಬಂದು ಅವಿವಾದಂ ಎಂದು ಆಗುವಂತೆ ಅತಚ್ಛಬ್ದಂ ಎಂದಾಗಬೇಕಾಗಿತ್ತು. ಎಂದು ಪ್ರಶ್ನೆ ಬರುತ್ತದೆ ಆದರೆ ಅಪಂಚಮ್ಯಾ: ಎಂದು ಪಂಚಮಿಗೆ ಅಮ್ ಬರುವುದಿಲ್ಲ ಎಂದು ಹೇಳಿದ್ದರಿಂದ ಇಲ್ಲಿಯಾದರೂ ಪಂಚಮಿ ಇರುವುದರಿಂದ ಅಮ್ ಆದೇಶ ಬಂದಿಲ್ಲವೆಂಬ ಸಮಾಧಾನವನ್ನು ಚಂದ್ರಿಕಾದಲ್ಲಿ ಹೇಳಿದಂತೆ ತಿಳಿಯಬೇಕು. ಅತದ್ಧರ್ಮಾಭಿಲಾಪಾತ್ ಎಂಬಲ್ಲಿಯೂ ಹೀಗೆ ತಿಳಿಯಬೇಕು.

**ಸಂಪ್ರಸಾದಾತ್- ಸುಖಾತ್**

''ಓಂ ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್ ಓಂ'' ಎಂಬ ಸೂತ್ರದಲ್ಲಿ ಪೂರ್ಣ ಸುಖರೂಪನಾದ್ದರಿಂದ ವಿಷ್ಣುವೇ ಭೂಮನೆಂದು ತೀರ್ಮಾನಿಸಲಾಗಿದೆ. ಇಲ್ಲಿರುವ ಸಂಪ್ರಸಾದ ಶಬ್ದವು ಸುಖವಾಚಕವಾಗಿದೆ.

ಹಾಗಾದರೆ ಸುಖಾತ್ ಎಂದು ಹೇಳದೆ ಸಂಪ್ರಸಾದ ಶಬ್ದವನ್ನೇಕೆ ಹೇಳಿದರು? ಎಂಬ ಪ್ರಶ್ನೆಗೆ ಚಂದ್ರಿಕಾದಲ್ಲಿ ನೀಡಿದ ಸಮಾಧಾನ ಹೀಗೆ-

ಸಮ್ಯಕ್ ಪ್ರಸೀದತಿ ಅನೇನ ಇತಿ ಸಂಪ್ರಸಾದಃ -ಸುಖಂ ಎಂಬ ವ್ಯುತ್ಪತ್ತಿಯಿಂದ ಸಂಪ್ರಸಾದವೆಂದರೆ ಸುಖ. ಪೂರ್ಣಸುಖವಿರುವುದರಿಂದಲೇ ವಿಷ್ಣುವು ಸಂಪೂರ್ಣ ಪ್ರಸನ್ನನಾಗಿದ್ದಾನೆ. ಆದ್ದರಿಂದ ಪ್ರಸಾದಕ್ಕೆ ಕಾರಣವಾದ ಸುಖವು ಕರಣವ್ಯುತ್ಪತ್ತಿಯಿಂದ ಸಂಪ್ರಸಾದವೆನಿಸಿದೆ.

ಸಂಪೂರ್ಣ ಪ್ರಸನ್ನನಾಗಬೇಕಾದರೆ ದುಃಖವು ಸ್ವಲ್ಪವೂ ಇರಬಾರದು. ಆದ್ದರಿಂದ ವಿಷ್ಣುವಿನಲ್ಲಿ ದುಃಖವಿಲ್ಲವೆಂದು ತೋರಿಸಲಿಕ್ಕಾಗಿ ಪ್ರಸಾದ ಕಾರಣ ಸುಖವನ್ನು ಸಂಪ್ರಸಾದ ಶಬ್ದದಿಂದ ನಿರ್ದೇಶಿಸಲಾಗಿದೆ. ಮತ್ತು ಹೇಗೆ ಜ್ಞಾನವಿದ್ದರೆ ದುಃಖವಿರಬೇಕೆಂಬ ನಿಯಮವಿಲ್ಲವೋ ಹಾಗೇ ಪ್ರಸಾದ ಕಾರಣವಾದ ಸುಖವಿದ್ದಾಗ ದುಃಖವಿರಬೇಕೆಂಬ ನಿಯಮವಿಲ್ಲ. ಆದ್ದರಿಂದಲೇ ಮುಕ್ತಿಯಲ್ಲಿ ಮನುಷ್ಯರಿಗೆ ಕೇವಲ ಸುಖವಿದೆ ದುಃಖವಿಲ್ಲ. ಹೀಗೆ ಈ ಎರಡು ಕಾರಣಗಳಿಂದ ವಿಷ್ಣುವಿನಲ್ಲಿ ಸ್ವಲ್ಪವೂ ದುಃಖವಿಲ್ಲವೆಂದು ತೋರಿಸಲಿಕ್ಕಾಗಿ ಸಂಪ್ರಸಾದ ಶಬ್ದ ಪ್ರಯೋಗಿಸಿದ್ದಾರೆ.

## ಪ್ರಥಮಾಧ್ಯಾಯ ಮೂರನೇ ಪಾದದ ನ್ಯಾಯಮಾಲಾ

ಮೂರನೇ ಪಾದದಲ್ಲಿ ಎಲ್ಲ ಅಧಿಕರಣಗಳ ವಿಷಯಗಳನ್ನು ಹಾಗೂ ಪೂರ್ವಪಕ್ಷ ಸಿದ್ಧಾಂತಗಳನ್ನು ಅನುವ್ಯಾಖ್ಯಾನದಲ್ಲಿ

'ಲಿಂಗಂ ಸಾಧಾರಣಂ ಶಬ್ದೌ ಸ್ಥಾನಂ ಲಿಂಗಮನುಗ್ರಹ: ।
ಪುನಶ್ಶಬ್ದಾ ಲಿಂಗ ಶಬ್ದೌ ವಿಚಾರ್ಯಾದ್ವಿಸ್ಥಿತಾ ಇಹ ।

ಬಾಹುಲ್ಯಂ ಲಿಂಗಶಬ್ದಾನಾಂ ಅನುಕ್ತಿಶ್ಚ ವಿರುದ್ಧತಾ।
ಅದೃಷ್ಟಿರನ್ವಯಾಭಾವ: ವಿಪರೀತ ಶ್ರುತಿ ಭ್ರಮಃ ।
ಲಿಂಗಾವಕಾಶ ರಾಹಿತ್ಯ ಭ್ರಮಸ್ತಾದೃಗ್ಬ್ಯಯಂ ತಥಾ ।
ಬಹುತಾದೃಕ್ತ್ವ ಮುಕ್ತಸ್ಯ ವಿರೋಧೋರ್ಥಾತ್ ತಥಾಗತಿ: ।
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯ: ।
ತಾ ಏವ ಬಲವತ್ಯಸ್ತು ಗತ್ಯಂತರ ವಿವರ್ಜಿತಾ:।
ಸಿದ್ಧಾಂತಯುಕ್ತಯೋ ಜ್ಞೇಯಾ ದೃಶ್ಯಂತೇ ತಾಶ್ಚ ಸರ್ವಶ: ।

ಇದರ ಪ್ರಕಾರ ವಿಷಯ ಪೂರ್ವಪಕ್ಷ ಸಿದ್ಧಾಂತಗಳು ಹೀಗಿವೆ.

೧)ಈ ಪಾದದ ಮೊದಲನೆಯ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಎಂಬ ಅಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವನ್ನು ಸಮನ್ವಯ ಮಾಡಲಾಗಿದೆ. ಇದನ್ನೇ ಲಿಂಗಂ ಎಂದು ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.

ಈ ಅಧಿಕರಣದ ಪೂರ್ವಪಕ್ಷ - 'ಯಸ್ಮಿನ್ ದ್ಯೌ: ಪೃಥಿವೀ ಚಾಂತರಿಕ್ಷಂ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶ ಮತ್ತು ಪೃಥಿವೀಗಳಿಗೆ ಆಶ್ರಯನು' ರುದ್ರ ಅಥವಾ ಜೀವ ಆಗಬೇಕು. ಅವರಲ್ಲೇ 'ರುದ್ರೋ ಮಾವಿಶಾಂತಕ' 'ಪ್ರಾಣೇಶ್ವರ: ಕೃತ್ತಿವಾಸಾ:' ಇತ್ಯಾದಿ ಶ್ರುತಿಗಳು ಹಾಗೂ ಬಹುಧಾ ಜಾಯಮಾನತ್ವ ಮೊದಲಾದ ಲಿಂಗಗಳು ಕಂಡು ಬರುತ್ತವೆ. ಆದ್ದರಿಂದ ಅವರೇ ದ್ಯುಭ್ವಾದ್ಯಾಶ್ರಯರು ಹೀಗೆ ಪೂರ್ವಪಕ್ಷಕ್ಕೆ ಕಾರಣವಾದ ಯುಕ್ತಿಯು 'ಲಿಂಗಶಬ್ದಾನಾಂ ಬಾಹುಲ್ಯಂ' ಎಂದು ಹೇಳಲ್ಪಟ್ಟಿದೆ. ಸಿದ್ಧಾಂತ- ದ್ಯುಭ್ವಾದ್ಯಾಶ್ರಯನು ಪರಮಾತ್ಮನೇ. ಅದಕ್ಕೆ ಕಾರಣವೂ ಶ್ರುತಿಲಿಂಗಗಳೇ. ಅಲ್ಲಿಯೇ ಶ್ರುತಿಯಲ್ಲಿ 'ಜಾನಥ ಆತ್ಮಾನಂ' ಎಂದು ಆತ್ಮ ಶಬ್ದವಿರುವುದರಿಂದ ನಿರವಕಾಶ ಆತ್ಮ ಶಬ್ದವಾಚ್ಯನು ಪರಮಾತ್ಮನೇ

ಎಂಬುದಾಗಿ ಹೇಳಬೇಕು. ಹಾಗೂ ಪ್ರಾಣಗ್ರಂಥಿತ್ವ ಹಾಗೂ ಪ್ರಾಣೇಶ್ವರತ್ವ ಹಾಗೂ ಲೋಕಾಯತನತ್ವ ಮೊದಲಾದ ಲಿಂಗಗಳೂ ವಿಷ್ಣುವಿನಲ್ಲೇ ಇವೆಯೆಂದು 'ಸರ್ವೇ ವಾ ಏತೇ ಪ್ರಾಣಾಶ್ಚ' ಮುಂತಾದ ಶ್ರುತಿಗಳಿಂದ ಗೊತ್ತಾಗುತ್ತದೆ. ಕೃತ್ತಿವಾಸಾ: ಪಿನಾಕೀ ಮೊದಲಾದ ಶಬ್ದಗಳೂ ಪರಮಾತ್ಮನಲ್ಲಿ ಸಾವಕಾಶವಾಗಿವೆ. ಆದ್ದರಿಂದ ಬಹುಲವಾದ ನಿರವಕಾಶ ಶ್ರುತಿ ಲಿಂಗಗಳಿಂದ ದ್ಯುಭ್ವಾದ್ಯಾಶ್ರಯ ವಿಷ್ಣುವೇ. ಹೀಗೆ ಶ್ರುತಿಲಿಂಗ ಗಳಿಂದಲೇ ನಿರ್ಣಯವಿರುವುದರಿಂದ ಈ ರೀತಿ ಪೂರ್ವಪಕ್ಷ ಯುಕ್ತಿಗಳನ್ನು ಸರಿಯಾಗಿ ವಿಚಾರ ಮಾಡಿದಾಗ ಅವುಗಳೇ ಪ್ರಬಲವಾದ್ದರಿಂದ ಸಿದ್ಧಾಂತಕ್ಕೆ ಸಾಧಕವಾಗುವವೆಂದು ಗೊತ್ತಾಗುತ್ತದೆ'. ಎಂದು ಅನುವ್ಯಾಖ್ಯಾನದಲ್ಲಿ ಪ್ರತ್ಯೇಕವಾಗಿ ಸಿದ್ಧಾಂತ ಯುಕ್ತಿಗಳ ನಿರ್ದೇಶವನ್ನು ಮಾಡಿಲ್ಲ.

೨) ಎರಡನೆಯ 'ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಎಂಬ ಅಧಿಕರಣದ ವಿಷಯವನ್ನು 'ಶಬ್ದೌ' (ಭೂಮಶಬ್ದ) ಎಂದು ನಿರ್ದೇಶಿಸಿದ್ದಾರೆ. (ದ್ವಿವಚನವು ಮುಂದಿನ ಅಕ್ಷರಾಧಿಕರಣದಲ್ಲೂ ಶಬ್ದವೇ ಎಂದು ಸೂಚಿಸಲು) ಈ ಅಧಿಕರಣದ ಪೂರ್ವಪಕ್ಷ - 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಪ್ರಾಣನು ಆಶಾಕ್ಕಿಂತಲೂ ಉತ್ತಮ ಎಂದು ಹೇಳಿ 'ಯೋವೈ ಭೂಮಾ ತತ್‌ಸುಖಂ' ಎಂದು ಯಾವನು ಭೂಮನೋ ಅವನೇ ಸುಖರೂಪಿಯೆಂದು ಹೇಳಿದ್ದಾರೆ. ಆದ್ದರಿಂದ ಪ್ರಾಣನೇ ಭೂಮಾ. ಈ ಪೂರ್ವಪಕ್ಷಕ್ಕೆ ಯುಕ್ತಿ 'ಅನುಕ್ತಿ' ಎಂದು ಹೇಳಲ್ಪಟ್ಟಿದೆ. ಚಶಬ್ದದಿಂದ ಉತ್‌ಕ್ರಮಣಲಿಂಗ. ಪ್ರಾಣನಿಗಿಂತ ದೊಡ್ಡವರನ್ನು ಹೇಳದಿರುವುದೇ ಅನುಕ್ತಿ. ಸಿದ್ಧಾಂತ - ಪೂರ್ಣಸುಖರೂಪತ್ವ ಹಾಗೂ ಸರ್ವೋತ್ತಮತ್ವಗಳು ವಿಷ್ಣುವಿಗೇ ಕೂಡುವುದರಿಂದ ಅವನೇ ಭೂಮ. ಪ್ರಾಣನಲ್ಲ. ಏಕೆಂದರೆ ಅವನಿಗೆ ವಿಷ್ಣುವಿಗಿಂತ ಉತ್ತಮತ್ವವನ್ನು ಹೇಳಿಲ್ಲ. ಆದ್ದರಿಂದ ಅನುಕ್ತಿಯೆಂಬ ಪೂರ್ವಪಕ್ಷಯುಕ್ತಿಯಿಂದಲೇ ಪರಮಾತ್ಮನಲ್ಲಿ ಭೂಮ ಶಬ್ದ ಸಮನ್ವಯವಾಗುತ್ತದೆ.

೩) ಮೂರನೆಯ 'ಅಕ್ಷರಮಂಬರಾಂತಧೃತೇ:' ಎಂಬ ಅಧಿಕರಣದಲ್ಲಿ ಅಕ್ಷರ ಶಬ್ದದ ಸಮನ್ವಯವು 'ಶಬ್ದೌ' ಎಂದು ಸೂಚಿತವಾಗಿದೆ. ಇಲ್ಲಿನ ಪೂರ್ವಪಕ್ಷ - 'ಅದೃಷ್ಟಂ ದ್ರಷ್ಟೃ ಅಶ್ರುತಂ' ಎಂದು ಹೇಳಲ್ಪಟ್ಟಿರುವ

ಅಕ್ಷರವು ಪ್ರಕೃತಿಯೇ. ಪ್ರಕೃತಿಯು ಅತ್ತೃವಲ್ಲವಾದ್ದರಿಂದ 'ನ ತದಶ್ನಾತಿ ಕಿಂಚನ' ಎಂದು ಹೇಳಲ್ಪಟ್ಟ ಅತ್ತೃತ್ವಾಭಾವವು ಅದರಲ್ಲಿ ಕೂಡುತ್ತದೆ. ಆದರೆ ಪರಮಾತ್ಮನು 'ಅತ್ತಾ' ಎಂದು 'ಅತ್ತಾ ಚರಾಚರಗ್ರಹಣಾತ್' ಎಂಬ ಅಧಿಕರಣದಲ್ಲಿ ನಿರ್ಣಯಯಿಸಿವುದರಿಂದ ಅವನಲ್ಲಿ ಅದು ಕೂಡುವುದಿಲ್ಲ. 'ಅತ್ತೃತ್ವದ ಅಭಾವವು' 'ವಿರುದ್ಧತಾ' ಎಂದು (ಅತ್ತೃಗೆ ಅತ್ತೃತ್ವಾಭಾವವು ವಿರುದ್ಧವೆಂದು) ಸೂಚಿತವಾಗಿದೆ. ಸಿದ್ಧಾಂತ - ಪರಮಾತ್ಮನೇ ಅಕ್ಷರ. 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬಲ್ಲಿ ಹೇಳಲ್ಪಟ್ಟ ಆಕಾಶಾದಿಧಾರಕತ್ವವು ಅವನಲ್ಲಿ ಕೂಡುವುದೆಂದು 'ಯ ಉ ತ್ರಿಧಾತು ಪೃಥಿವೀಂ' ಇತ್ಯಾದಿ ಶ್ರುತಿಗಳಿಂದ ಮೊದಲೇ ಸಿದ್ಧವಾಗಿದೆ. ಅತ್ತೃತ್ವ ಅತ್ತೃತ್ವಾಭಾವಗಳು ಪರಸ್ಪರ ವಿರುದ್ಧವಾಗಿ ಕಾಣಿಸಿದರೂ ವಸ್ತುತ: ಅವುಗಳಲ್ಲಿ ವಿರೋಧವಿಲ್ಲ. 'ನ ತದಶ್ನಾತಿ' ಎಂದು ಹೇಳಿದ್ದು ಅಶನವನ್ನು ಅವಲಂಬಿಸಿಲ್ಲ ಎಂಬ ಅಭಿಪ್ರಾಯದಿಂದ. ಆದ್ದರಿಂದ ವಿರೋಧವಿಲ್ಲ. ವಿರುದ್ಧವಾದ ಲಕ್ಷಣಗಳಿಂದ ಬ್ರಹ್ಮನು ಕೂಡಿರಬಹುದು. ಆಕಾಶಾದಿಧಾರ ಕತ್ವವು 'ಯ ಉ ತ್ರಿಧಾತು' ಮೊದಲಾದ ಶ್ರುತಿಗಳಿಂದ ಬ್ರಹ್ಮನಲ್ಲೇ ಇದೆಯೆಂದು ನಿಶ್ಚಿತವಾಗಿರುವುದರಿಂದ, ಪ್ರಕೃತಿಯಲ್ಲಿ ಅದು ಕೂಡುವುದಿಲ್ಲ. (ವಿರುದ್ಧವಾಗಿದೆ) ಇದು ಪ್ರಕೃತಿಗೆ ವಿರುದ್ಧವಾಗಿರುವುದ ರಿಂದ ಈ ವಿರುದ್ಧತ್ವ ಯುಕ್ತಿಯೂ ಬ್ರಹ್ಮನಿಗೇ ಅಕ್ಷರತ್ವ ಸಾಧಕವಾಗಿದೆ.

೪) ನಾಲ್ಕನೆಯ ಸದಧಿಕರಣದಲ್ಲಿ (ಈಕ್ಷತಿ ಎಂಬ) ಸೃಷ್ಟಿ ಸ್ಥಾನ (ಅನೇಕ ಪ್ರಕರಣಗಳ ಸಮೂಹವೇ ಸ್ಥಾನ)ದ ಸಮನ್ವಯವು 'ಸ್ಥಾನಂ' ಎಂಬುದರಿಂದ ಸೂಚಿತವಾಗಿದೆ. ಇಲ್ಲಿ 'ಬಹು ಸ್ಯಾಂ ಪ್ರಜಾಯೇಯ' (ನಾನು ಬಹಳ ರೂಪದಿಂದ ಹುಟ್ಟಬೇಕು) ಎಂಬ ಶ್ರುತಿಯಲ್ಲಿ ಸತ್ ಪದಾರ್ಥಕ್ಕೆ ಪರಿಣಾಮವನ್ನು ಹೇಳಲಾಗಿದೆ. ಅದು ಅವಿಕಾರನಾದ ಪರಮಾತ್ಮನಿಗೆ ಕೂಡುವುದಿಲ್ಲ. ಆದ್ದರಿಂದ 'ಸತ್' ಪರಮಾತ್ಮನಲ್ಲ ಎಂಬ ಪೂರ್ವಪಕ್ಷಕ್ಕೆ 'ಅದೃಷ್ಟಿ:' ಎಂಬ ಪದದಿಂದ ಸೂಚಿತವಾದ 'ಒಂದು ಇನ್ನೊಂದಾಗಿ ಪರಿಣಾಮ ಹೊಂದುವುದರ ಅದರ್ಶನ (ಕಾಣದಿರುವಿಕೆ) ವೆಂಬ ಯುಕ್ತಿಯು ಆಧಾರವಾಗಿದೆ. ಸಿದ್ಧಾಂತ - ಪರಮಾತ್ಮನೇ ಸತ್. 'ತದೈಕ್ಷತ' ಎಂದು ಸತ್ ಪದಾರ್ಥಕ್ಕೆ ಈಕ್ಷಣವನ್ನು ಹೇಳಿದ್ದಾರೆ. ಆ ಈಕ್ಷಣವು

'ನಾನ್ಯೋತೋಸ್ತಿ ದ್ರಷ್ಟಾ' ಎಂಬ ಶ್ರುತಿಯ ಪ್ರಕಾರ ಪರಮಾತ್ಮನಿಗೇ ಉಪಪನ್ನವಾಗುತ್ತದೆ. ಪರಮಾತ್ಮನು ಸ್ವಯಂ ಬಹುರೂಪನಾದರೂ ಅವನಿಗೆ ವಿಕಾರವಿಲ್ಲ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಯು ಇದಕ್ಕೆ ಆಧಾರ. ಆದ್ದರಿಂದ ಅದೃಷ್ಟಿಯೂ ಪ್ರಕೃತಿಯಲ್ಲಿ ಈಕ್ಷಣ (ಜ್ಞಾನ)ದ ಕಾಣದಿರುವಿಕೆಯೂ ಸಿದ್ಧಾಂತಕ್ಕೇ ಸಾಧಕವಾಗಿದೆ.

೫) ಐದನೆಯ ದಹರಾಧಿಕರಣದಲ್ಲಿ 'ದಹರ ಉತ್ತರೇಭ್ಯ:' ಎಂಬಲ್ಲಿ ಹೃತ್ಪದ್ಮಸ್ಥತ್ವಲಿಂಗದ ಸಮನ್ವಯವನ್ನು 'ಲಿಂಗಂ' ಎಂದು ಸೂಚಿಸಿದ್ದಾರೆ. ಇಲ್ಲಿ 'ಬ್ರಹ್ಮಪುರೇ ದಹರಂ ಪುಂಡರೀಕಂ ದಹರೋಸ್ಮಿನ್ ಅಂತರ ಆಕಾಶ:' ಎಂಬಲ್ಲಿ ಹೇಳಲ್ಪಟ್ಟ ಆಕಾಶವು ವಿಷ್ಣುವಾದರೆ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ ಬ್ರಹ್ಮ ವಿದ್ಯತೆ ಎಂದು ಹೇಳದೇ 'ಯಾವಾನ್ವಾಯಮಾಕಾಶ:' ಎಂಬ ಉತ್ತರ ಸರಿಯಾಗುವುದಿಲ್ಲ. ಹೀಗೆ ಈ ಪೂರ್ವಪಕ್ಷಕ್ಕೆ 'ಅನ್ವಯಾಭಾವ:' ಎಂದುಹೇಳಲ್ಪಟ್ಟ ವಾಕ್ಯಗಳ ಅನ್ವಯ ಸರಿಹೋಗುವುದಿಲ್ಲ. ಎಂಬುದು ಆಧಾರವಾದ ಯುಕ್ತಿ. ಸಿದ್ಧಾಂತ - ಹೃತ್ಪದ್ಮಸ್ಥನು ವಿಷ್ಣುವೇ. ಅವನಲ್ಲೇ ಅಪಹತಪಾಪ್ಮತ್ವಾದಿಗಳು ಯುಕ್ತವಾಗಿವೆ. ಆದ್ದರಿಂದ ಆಕಾಶವನ್ನು ಇಟ್ಟುಕೊಳ್ಳಲು ಬರುವುದಿಲ್ಲ. 'ಕಿಂ ತದತ್ರ ವಿದ್ಯತೇ' (ಅಲ್ಲಿ ಯಾವುದು ಇದೆ) ಎಂಬ ಪ್ರಶ್ನೆಗೆ ಬ್ರಹ್ಮನಿದ್ದಾನೆ ಎಂದು ಉತ್ತರ ಹೇಳದಿದ್ದರೂ ಮೊದಲೇ ಬಂದಿರುವ ಬ್ರಹ್ಮಪುರ ಪದದಿಂದಲೇ ಅದು ಗೊತ್ತಾಗುತ್ತದೆ. ಆಕಾಶದ ಪಕ್ಷದಲ್ಲೇ 'ಬ್ರಹ್ಮಪುರ' ಪದದ ಅನ್ವಯವಿಲ್ಲದಿರುವುದರಿಂದ ಹೊರಗಿನ ಆಕಾಶ ಹಾಗೂ ಹೃತ್‌ಪದ್ಮದ ಒಳಗಿನ ಆಕಾಶಗಳು ಒಂದೇ ಪರಿಮಾಣದ್ದಾಗಿರಲು ಸಾಧ್ಯವಿಲ್ಲವಾದ್ದರಿಂದ ಆ ವಾಕ್ಯಕ್ಕೂ ಪೂರ್ವಪಕ್ಷದಲ್ಲಿ ಅನ್ವಯವಿಲ್ಲವಾದ್ದರಿಂದ. 'ಅನ್ವಯಾಭಾವ' ಯುಕ್ತಿಯಿಂದ ಬ್ರಹ್ಮನೇ ಹೃತ್‌ಪದ್ಮಸ್ಥನು ಎಂದು ಗೊತ್ತಾಗುತ್ತದೆ.

೬) ಆರನೆಯ ಅನುಕೃತ್ಯಧಿಕರಣದಲ್ಲಿ 'ಅನುಗ್ರಹ' ಎಂಬ ಪದದಿಂದ ಸೂಚಿತವಾದ 'ಅನುಕೂಲ್ಯೇನ ಗೃಹ್ಯಮಾಣತ್ವ' ಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. 'ಅನುಕೂಲ್ಯೇನ ಗೃಹ್ಯಮಾಣತ್ವವೆಂದರೆ 'ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಡುವಿಕೆ.

ಪೂರ್ವಪಕ್ಷ - ಪರಮಾತ್ಮನಿಗೇ ಅದೃಶ್ಯತ್ವಾದಿಗಳಿವೆ ಎಂಬುದು ಅದೃಶ್ಯತ್ವಾದಿಗುಣಕೋ ಎಂಬಲ್ಲಿ ಹೇಳಲಾಗಿದೆ. ಆದರೆ 'ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾ: ತೇಷಾಂ ಸುಖಂ ಶಾಶ್ವತಂ ನೇತರೇಷಾಂ. ಕಥಂ ನು ತದ್ವಿಜಾನೀಯಾಂ' (ಯಾರು ಪರಮಾತ್ಮನನ್ನು ತಿಳಿಯುತ್ತಾರೋ ಅವರಿಗೇ ಸುಖವಿದೆ. ಆ ಸುಖವನ್ನು ಹೇಗೆ ತಿಳಿಯಲಿ) ಎಂದು ಜ್ಞಾನಿಸುಖವೂ ಕೂಡ ಅನಿರ್ದೇಶ್ಯವೆಂದು ಹೇಳಲಾಗಿದೆ. ಆದ್ದರಿಂದ ಅದೂ ಅನಿರ್ದೇಶ್ಯವಾಗ ಬಹುದು. ಈ ಪೂರ್ವಪಕ್ಷಕ್ಕೆ ಕಾರಣ 'ವಿಪರೀತ ಶ್ರುತಿ ಭ್ರಮ' ಎಂದು ಹೇಳಲಾಗಿದೆ. 'ಕಥಂ ನು ತತ್' ಎಂಬಲ್ಲಿರುವ ತತ್ ಶಬ್ದದಿಂದ ಜ್ಞಾನಿಸುಖವನ್ನು ನಿರ್ದೇಶಮಾಡಿದ್ದಾರೆ ಎಂಬ ಭ್ರಮೆಯು ಈ ಪೂರ್ವಪಕ್ಷಕ್ಕೆ ಕಾರಣವಾಗಿದೆ.

ಸಿದ್ಧಾಂತ - 'ತಮೇವ ಭಾಂತಮನುಭಾತಿ ಸರ್ವಂ' (ಸ್ವಯಂ ಪ್ರಕಾಶಮಾನನಾದ ಪರಮಾತ್ಮನನ್ನು ಆಧರಿಸಿ ಎಲ್ಲವೂ ಪ್ರಕಾಶಮಾನ ವಾಗಿದೆ) ಎಂದು ಹಿಂದೆ ಪರಮಾತ್ಮನೇ ಪ್ರಕೃತನಾಗಿರುವು ದರಿಂದ 'ಕಥಂ ನು ತತ್' ಎಂಬಲ್ಲಿ ತತ್‌ಶಬ್ದದಿಂದ ವಾಚ್ಯನಾದವನು ಪರಮಾತ್ಮನೇ. ಜ್ಞಾನಿಗಳ ಸುಖವಲ್ಲ. ಜ್ಞಾನಿಗಳ ಸುಖದಿಂದ ಯಾವುದೂ ಪ್ರಕಾಶಮಾನವಾಗಿಲ್ಲ. ಆದ್ದರಿಂದ ಶ್ರುತಿಯನ್ನು ಸರಿಯಾಗಿ ವಿಚಾರಮಾಡಿದಾಗ ಪರಮಾತ್ಮನೇ ಅನಿರ್ದೇಶ್ಯನೆಂದು ತಿಳಿಯುತ್ತದೆ. ಇಲ್ಲಿ ಪೂರ್ವಪಕ್ಷಕ್ಕೆ ವಿಪರೀತವಾದ ಶ್ರುತಿಯನ್ನು ಅವರು ಅನುಕೂಲವೆಂದು ಭ್ರಮಿಸಿದ್ದಾರೆಂದು ಭಾವ.

೭) ಏಳನೆಯ ವಾಮನಾಧಿಕರಣದಲ್ಲಿ 'ಶಬ್ದಾ:' ಎಂದು ಹೇಳಲ್ಪಟ್ಟಿರುವ ಈಶಾನಶಬ್ದದ ಸಮನ್ವಯನ್ನು ಪರಮಾತ್ಮನಲ್ಲಿ ಮಾಡಲಾಗಿದೆ.

ಪೂರ್ವಪಕ್ಷ -'ಈಶಾನೋ ಭೂತಭವ್ಯಸ್ಯ' ಭೂತಾದಿ ಎಲ್ಲಕ್ಕೂ ನಿಯಾಮಕತ್ವವನ್ನು ಹೇಳಿ ನಂತರ 'ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ' (ಪ್ರಾಣವಾಯುವನ್ನೂ ಮೇಲೊಯ್ಯುವ, ಅಪಾನವಾಯುವನ್ನು ಕೆಳಗೊಯ್ಯುವ ನಡುವೆ ಇರುವ ವಾಮನನನ್ನು ಎಲ್ಲದೇವತೆಗಳು

ಉಪಾಸಿಸುತ್ತಾರೆ) ಎಂಬಲ್ಲಿ ಈಶಾನನು ಪ್ರಾಣನೇ. ಏಷ ಪ್ರಾಣ: ಇತರಾನ್ ಪ್ರಾಣಾನ್ ಎಂದು ಶ್ರುತಿಯಂತೆ ಮುಖ್ಯ ಪ್ರಾಣನೇ ಇತರ ಪ್ರಾಣಾದಿವಾಯುಗಳ ನಿಯಾಮಕನೆಂದು ಸಿದ್ಧವಾಗಿರುವುದರಿಂದ ಅವನಲ್ಲೇ ಈ ಲಿಂಗ ಕೂಡುತ್ತದೆ. ಪರಮಾತ್ಮನಲ್ಲಿ ಈ ಪ್ರಾಣವ್ಯವ ಸ್ಥಾಪಕತ್ವವು ಕೂಡುವುದಿಲ್ಲ. ಆದ್ದರಿಂದ 'ಲಿಂಗಾವಕಾಶರಾಹಿತ್ಯ ಭ್ರಮ:' ಎಂಬುದರಿಂದ ಸೂಚಿತವಾದ ಪರಮಾತ್ಮನಲ್ಲಿ ಲಿಂಗಗಳ ಕೂಡದಿರುವಿಕೆಯುಭ್ರಮೆಯ ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ.

ಸಿದ್ಧಾಂತ - ಲಿಂಗಕ್ಕಿಂತಲೂ ಶ್ರುತಿಯು ಪ್ರಬಲವಾದ್ದರಿಂದ 'ವಾಮನಮಾಸೀನಂ' ಎಂಬಲ್ಲಿರುವ ವಾಮನ ಶಬ್ದದಿಂದಲೇ ಪ್ರಾಣವ್ಯವಸ್ಥಾಪಕನು ಪರಮಾತ್ಮನೆಂದು ಸಿದ್ಧವಾಗುತ್ತದೆ. ಮತ್ತು 'ತದ್ವೈ ತ್ವಂ ಪ್ರಾಣೋ ಅಭವ:' ಎಂಬ ಶ್ರುತಿಯಂತೆ ಪರಮಾತ್ಮನೂ ಪ್ರಾಣನೇ. ಆದ್ದರಿಂದ ಅವನಲ್ಲೇ ಈ ಪ್ರಾಣ ವ್ಯವಸ್ಥಾಪಕತ್ವಲಿಂಗವೂ ಕೂಡುತ್ತದೆ ಆದ್ದರಿಂದ ಈಶಾನ ಶಬ್ದ ವಾಚ್ಯನು ಪರಮಾತ್ಮನೇ. (ಆದ್ದರಿಂದ ಪೂರ್ವಪಕ್ಷಿಯ ಲಿಂಗಾವಕಾಶರಾಹಿತ್ಯಜ್ಞಾನವು ಭ್ರಮೆ ಎಂದು ಸಿದ್ಧವಾಗುತ್ತದೆ).

೮,೯)ನೆಯ ದೇವತಾಧಿಕರಣ ಹಾಗೂ ೯ನೆಯ ಅಪಶೂದ್ರಧಿ ಕರಣಗಳಲ್ಲಿ ಯಾವುದೇ ಶಬ್ದದ ಸಮನ್ವಯವನ್ನು ಮಾಡಲಾಗಿಲ್ಲ. ಅವುಗ ಳೆರಡು ಪ್ರಾಸಂಗಿಕವಾದ ವಿಚಾರಗಳು. ದೇವತಾಧಿಕರಣದಲ್ಲಿ ದೇವತೆಗ ಳಿಗೂ ವೇದವಿದ್ಯಾಧಿಕಾರವಿದೆಯೆಂದು ಹೇಳಲಾಗಿದೆ. ಹಾಗೂ ಅಪಶೂ ದ್ರಾಧಿಕ ರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಹೇಳಿದೆ.

೧೦ನೇ 'ಕಂಪನಾತ್' ಎಂಬ ಅಧಿಕರಣದಲ್ಲಿ 'ಶಬ್ದಾಃ' ಎಂದು ಹೇಳಲ್ಪಟ್ಟ 'ವಜ್ರ' ಶಬ್ದದ ಸಮನ್ವಯವನ್ನು ಮಾಡಲಾಗಿದೆ. 'ಶಬ್ದಾಃ' ಎಂದು ಈಶಾನ-ವಜ್ರ-ಜ್ಯೋತಿ:-ಆಕಾಶ ಎಂದು ನಾಲ್ಕು ಶಬ್ದಗಳ ಸಮನ್ವಯವು ಕ್ರಮವಾಗಿ ಹೇಳಲ್ಪಟ್ಟಿದೆ.

ಪೂರ್ವಪಕ್ಷ- 'ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿ:ಸೃತಂ' ಮಹದ್ಭಯಂ ವಜ್ರಮುದ್ಯತಂ ಯ ಏತತ್‌ವಿದುರಮೃತಾಸ್ತೇ

ಭವಂತಿ' (ಪ್ರಾಣನಿಂದ ಹೊರಬಂದ ಈ ಎಲ್ಲ ಜಗತ್ತು ಯಾವ ವಜ್ರದಿಂದ ಪ್ರವೃತ್ತಿ ಮಾಡುತ್ತದೋ ಆ ವಜ್ರವನ್ನು ತಿಳಿದವರು ಮುಕ್ತರಾಗುತ್ತಾರೆ) ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವ ವಜ್ರವು ಇಂದ್ರನ ಆಯುಧವೇ. ವಜ್ರ ಶಬ್ದವು ಅದರಲ್ಲೇ ಪ್ರಸಿದ್ಧವಾಗಿದೆ. ಹಾಗು 'ಉದ್ಯತತ್ವ' (ಎತ್ತಲ್ಪಡುವಿಕೆಯೆಂಬ) ಲಿಂಗವೂ ಆಯುಧದಲ್ಲೇ ಯುಕ್ತವಾಗುತ್ತದೆ. (ಆಯುಧವನ್ನು ಎತ್ತಬಹುದು. ಪರಮಾತ್ಮನನ್ನು ಎತ್ತಲಾಗುವುದಿಲ್ಲ) ಆದ್ದರಿಂದ 'ತಾದೃಗ್‌ದ್ವಯಂ' ಎಂದು ಹೇಳಲ್ಪಟ್ಟ ನಿರವಕಾಶವಾದ ವಜ್ರ ಶ್ರುತಿ ಹಾಗೂ ಉದ್ಯತತ್ವ ಲಿಂಗಗಳು ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಗಳು.

ಸಿದ್ಧಾಂತ - 'ಏಜತಿ' ಎಂದು ಯಾವುದರಿಂದ ಜಗತ್ತು ಚೇಷ್ಟಿಸುತ್ತದೊ ಅದು ವಜ್ರ ಎಂದು ಹೇಳಿದ್ದಾರೆ. ಇಡೀ ಜಗತ್ತಿಗೆ ಪರಮಾತ್ಮನಿಂದಲೇ ಪ್ರವೃತ್ತಿ (ಚೇಷ್ಟಾ) ಎಂದು 'ಕೋ ಹ್ಯೇವಾನ್ಯಾತ್' (ಪರಮಾತ್ಮನಿಲ್ಲದೇ ಬೇರೆ ಯಾರು ಪ್ರವೃತ್ತಿ ಹೊಂದುತ್ತಾರೆ? ಎಂಬ ಶ್ರುತಿಯಿಂದ ತಿಳಿಯುವುದರಿಂದ ಪರಮಾತ್ಮನೇ ವಜ್ರ. ಅವನಲ್ಲೇ 'ದೋಷಾನ್ ವರ್ಜಯತೀತಿ ವಜ್ರ:' (ದೋಷಗಳನ್ನು ವರ್ಜಿಸುವುದರಿಂದ ವಜ್ರ) ಎಂಬ ವ್ಯುತ್ಪತ್ತಿಯಿಂದ ವಜ್ರಶಬ್ದವು ಯೋಗೇನ ಪ್ರವೃತ್ತವಾಗಿದೆ. ಹಾಗೂ ಪರಮಾತ್ಮನೇ ಉತ್ಕೃಷ್ಟವಾದ ವ್ಯಾಪಾರವುಳ್ಳವ ನಾದ್ದರಿಂದ 'ಉದ್ಯತ'ನೆಂದು ಹೇಳಲ್ಪಟ್ಟಿರುವುದರಿಂದ 'ಉದ್ಯತತ್ವ' ಲಿಂಗವೂ ಅವನಲ್ಲೇ ಕೊಡುತ್ತದೆ. ಹೀಗೆ ನಿರವಕಾಶ ಶ್ರುತಿ ಲಿಂಗಗಳು ಸಿದ್ಧಾಂತಕ್ಕೇ ಸಾಧಕವಾಗಿವೆ.

೧೧) ಹನ್ನೊಂದನೆಯ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣದಲ್ಲಿ 'ಜ್ಯೋತಿ:' ಎಂಬ ಶಬ್ದದ ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ- 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಅಧಿಕರಣದಲ್ಲಿ ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೇ ಎಂದು ಹೇಳಲಾಗಿದೆ.

ಆದರೆ 'ಯೋಽಯಂ ವಿಜ್ಞಾನಮಯ: ಪ್ರಾಣೇಷು ಹೃದ್ಯಂತ ಜ್ಯೋತಿ: ಪುರುಷ: (ಹೃದಯದ ಒಳಗಿರುವ ಪುರುಷನು ವಿಜ್ಞಾನಮಯನು ಹಾಗೂ ಜ್ಯೋತಿಯು) ಎಂಬಲ್ಲಿ ಹೇಳಲ್ಪಟ್ಟ ಜ್ಯೋತಿಯು ಜೀವನೇ. ಪರಮಾತ್ಮನಲ್ಲ. 'ಉಭೌ ಲೋಕಾವನುಸಂಚರತಿ'

ಎಂದು ಅವನಿಗೆ ಸ್ವರ್ಗಭೂಮಿಗಳೆಂಬ ಲೋಕಗಳ ಸಂಚಾರವನ್ನು ಹೇಳಿದ್ದಾರೆ. ಅದು ಸಂಸಾರಿಯಾದ ಹುಟ್ಟು ಸಾವುಗಳಿರುವ ಜೀವನಿಗೇ ಕೂಡಬಹುದು. ಪರಮಾತ್ಮನಿಗೆ ಕೂಡುವುದಿಲ್ಲ. ಹಾಗೂ 'ಇತ್ಯಾದಿತ್ಯ ಜ್ಯೋತಿ:' ಇತ್ಯಾದಿಗಳಿಂದ, ಹೇಳಲ್ಪಟ್ಟ ಆದಿತ್ಯನೇ ಪ್ರಕಾಶಕನಾಗಿ ಉಳ್ಳವನು' ಜೀವನೇ ಆಗಬೇಕು ಪರಮಾತ್ಮನಲ್ಲಿ ಅವುಗಳು ಕೂಡುವುದಿಲ್ಲ. ಆದ್ದರಿಂದ ಜೀವನು ಜ್ಯೋತಿಯು. ಇದಕ್ಕೆ ಆಧಾರವಾದ ಯುಕ್ತಿಯು 'ಬಹುತಾದೃಕ್ತ್ವಂ ಎಂದು ಹೇಳಲ್ಪಟ್ಟಿದೆ. 'ಪರಮಾತ್ಮನಲ್ಲಿ ಯುಕ್ತವಾ ಗದ ಅನೇಕ ಶ್ರುತಿ ಲಿಂಗಗಳು' ಎಂದು ಅದಕ್ಕೆ ಅರ್ಥ.

ಸಿದ್ಧಾಂತ - 'ವಿಷ್ಣುರೇವ ಜ್ಯೋತಿ:' (ವಿಷ್ಣುವೇ ಜ್ಯೋತಿಯು) ಮುಂತಾದ ಶ್ರುತಿಗಳಿಂದ ವಿಷ್ಣುವೇ ಜ್ಯೋತಿಯೆಂದು ಸಿದ್ಧವಾಗುತ್ತದೆ. ಹಾಗೂ 'ಪ್ರಾಜ್ಞೇನಾತ್ಮನಾ ಅನ್ವಾರೂಢ ಉತ್ಸರ್ಜತ್ ಯಾತಿ' (ಪ್ರಾಜ್ಞನಾಮಕ ಪರಮಾತ್ಮನಿಂದ ಕೂಡಿಕೊಂಡು ಹಿಂದಿನ ದೇಹವನ್ನು ಬಿಟ್ಟು ಹೋಗುತ್ತಾನೆ) ಎಂಬ ಶ್ರುತಿಯಿಂದ ಪರಮಾತ್ಮನಿಗೂ ಭೂಮ್ಯಾಕಾಶಾದಿ ಲೋಕ ಸಂಚಾರವು ಯುಕ್ತವಾಗಿದೆ. ಇಲ್ಲಿ 'ಆದಿತ್ಯಾದಿ ಜೋತಿಷ್ಕನು' ಪುರುಷನೇ ಮುಂದೆ 'ಆತ್ಮೈವಾಸ್ಯ ಜ್ಯೋತಿ:' ಎಂಬಲ್ಲಿ 'ಅಸ್ಯ' ಎಂದು ಹೇಳಲ್ಪಟ್ಟವನೂ ಜೀವನೇ. ಆದರೆ ಆತ್ಮನೆಂದರೆ ಪರಮಾತ್ಮ. ಅವನ ವಿಷಯದಲ್ಲೇ ಮುಂದೆ 'ಕತಮ ಆತ್ಮಾ' (ಯಾರು ಆತ್ಮಾ) ಎಂಬ ಪ್ರಶ್ನೆಗೆ 'ಯೋಽಯಂ ವಿಜ್ಞಾನಮಯ' ಎಂಬ ಉತ್ತರ ಹೊರಟಿದೆ. ಆದ್ದರಿಂದ ಈ ಎಲ್ಲವೂ ನಿರವಕಾಶವಾಗಿ ಪರಮಾತ್ಮ ಪ್ರಾಪಕವಾಗಿದೆ. ಆದ್ದರಿಂದ ಪರಮಾತ್ಮನೇ ಜ್ಯೋತಿಯು. (ಬಹುತಾದೃಕ್ತ್ವವು ಪರಮಾತ್ಮನ ಜ್ಯೋತಿಷ್ಟ್ವಕ್ಕೇ ಸಾಧಕವಾಗಿದೆ.)

೧೨) ಹನ್ನೆರಡನೆಯ 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬಧಿಕರಣದಲ್ಲಿ ಆಕಾಶ ಶಬ್ದದ ಸಮನ್ವಯವು ಹೇಳಲ್ಪಟ್ಟಿದೆ.

ಪೂರ್ವಪಕ್ಷ - 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬಲ್ಲಿ ಸರ್ವಾಧಾರನು ವಿಷ್ಣು ಎಂದು ಹೇಳಲಾಗಿದೆ. ಆದರೆ 'ಆಕಾಶೋ ವೈ ನಾಮ ನಾಮರೂಪ ಯೋರ್ನಿರ್ವಹಿತಾ' (ಆಕಾಶವೇ ಎಲ್ಲ ನಾಮರೂಪಾತ್ಮಕ ಪ್ರಪಂಚಕ್ಕೆ ಆಧಾರ) ಎಂಬ ಶ್ರುತಿಯಲ್ಲಿ 'ವೈ ನಾಮ' ಎಂಬ ನಿಪಾತ

(ಅವ್ಯಯ)ಗಳಿವೆ. ಅವು ಪ್ರಸಿದ್ಧಿ ದ್ಯೋತಕ. ಆದ್ದರಿಂದ ಪ್ರಸಿದ್ಧವಾದ ಭೂತಾಕಾಶವೇ ಪ್ರಪಂಚಾಧಾರವೆಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನು ಆಕಾಶಶಬ್ದವಾಚ್ಯನಲ್ಲ. ಇದಕ್ಕೆ ಆಧಾರವಾದ ಯುಕ್ತಿಯು 'ವಿರೋಧ:' ಎಂದು ಹೇಳಲ್ಪಟ್ಟಿದೆ. ಆಕಾಶ ಶಬ್ದಕ್ಕೆ ಭೂತ ಆಕಾಶದಲ್ಲಿ ಇರುವ ರೂಢಿಯನ್ನು ಬಿಟ್ಟು ಪರಮಾತ್ಮನಲ್ಲಿ ಯೋಗವನ್ನಾಶ್ರಯಿಸಿದರೆ ಈ ವೈ ನಾಮ ಎಂಬ ನಿಪಾತಗಳ ವಿರೋಧ ಬರುತ್ತದೆಂದು ಅದರ ಅಭಿಪ್ರಾಯ.

ಸಿದ್ಧಾಂತ - ಮುಂದೆ ಅದೇ ಶ್ರುತಿಯಲ್ಲಿ 'ಏತದಂತರಾ ತತ್ ಬ್ರಹ್ಮ' ಎಂಬಲ್ಲಿ ನಾಮರೂಪಗಳಿಲ್ಲದಿರುವುದು ಬ್ರಹ್ಮ. ಅದೇ ಆಕಾಶ ಎಂದು ಹೇಳಿರುವುದರಿಂದ ಆಕಾಶನು ಬ್ರಹ್ಮನೇ ಆಗಬೇಕು. ಆದ್ದರಿಂದ ಆಕಾಶವು ಭೂತಾಕಾಶವಲ್ಲ. ಪರಮಾತ್ಮನೇ ನಾಮರೂಪಗಳ ಕರ್ತೃವೆಂದು ವೇದಪ್ರಸಿದ್ಧ ವಾದ್ದರಿಂದ ಆ ಪ್ರಸಿದ್ಧಿ ದ್ಯೋತಕವಾಗಿವೆ ನಾಮ ಎಂಬ ನಿಪಾತಗಳಿರುವುದರಿಂದ ಆ ಪ್ರಸಿದ್ಧಿವಿರೋಧವಿಲ್ಲ. ಭೂತಾಕಾಶವನ್ನು ಆಕಾಶಶಬ್ದವಾಚ್ಯವೆಂದಗೀಕರಿಸಿದರೇ 'ಅನಾಮರೂಪತ್ವದ' ವಿರೋಧ ಬರುತ್ತದೆ ಪರಮಾತ್ಮನೇ ನಾಮರೂಪಾತೀತ ಆಕಾಶವಲ್ಲ. ಆದ್ದರಿಂದ ವಿರೋಧವೂ ಸಿದ್ಧಾಂತಕ್ಕೇ ಸಾಧಕ.

೧೩) ಹದಿಮೂರನೆಯ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಧಿಕರಣದಲ್ಲಿ 'ಲಿಂಗ ಶಬ್ದೌ' ಎಂದು ಹೇಳಲ್ಪಟ್ಟ ಸ್ವಪ್ನಾದಿ ದ್ರಷ್ಟೃತ್ವಲಿಂಗದ ಸಮನ್ವಯವಿದೆ.

ಪೂರ್ವಪಕ್ಷ- ಪರಮಾತ್ಮನು ಅಸಂಗನೆಂದು 'ಅಸಂಗಮರಸಂ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಆದರೆ 'ಸ ಯತ್ತತ್ರ ಪಶ್ಯತ್ಯನನ್ವಾಗತಸ್ತೇನ ಭವತಿ ಅಸಂಗೋಽಹ್ಯಯಂ ಪುರುಷಃ' (ಸ್ವಪ್ನ ಕಾಲದಲ್ಲಿ ಜೀವನು ಏನು ನೋಡು ತ್ತಾನೋ ಅದರ ಲೇಪವು ಅವನಿಗಿರುವುದಿಲ್ಲ. ಅವನು ಅಸಂಗನು) ಎಂಬ ಶ್ರುತಿಯಂತೆ ಅಸಂಗತ್ವವು ಸ್ವಪ್ನ ದ್ರಷ್ಟೃವಿಗೆ ಕಂಡುಬರುತ್ತಿದೆ. ಸ್ವಪ್ನದ್ರಷ್ಟೃವು ಲೋಕ ಪ್ರಸಿದ್ಧಿಯ ಪ್ರಕಾರ ಜೀವನೇ ಆಗಬೇಕು. ಅಸಂಗತ್ವ ಶ್ರುತಿ ಬಲದಿಂದ ಈಶ್ವರನೇ ಸ್ವಪ್ನ ದ್ರಷ್ಟೃ ಏಕಾಗಬಾರದು ಎಂದು ಶಂಕೆ ಬರಬಹುದು. ಆದರೆ ಜೀವೇಶರಿಗೆ ಅಭೇದವಿರುವುದರಿಂದ ಈಶ್ವರನು ಅಸಂಗನಾದರೆ ಜೀವನೂ ಅಸಂಗನಾಗಬಹುದು. ಆದ್ದರಿಂದ ಸ್ವಪ್ನದ್ರಷ್ಟಾ

ಜೀವನೇ ಆಗಬೇಕು. ಈ ಪೂರ್ವಪಕ್ಷಕ್ಕೆ ಕಾರಣವಾದ ಯುಕ್ತಿಯು 'ಅರ್ಥಾತ್ ತಥಾऽऽಗತಿ:' ಎಂದು ಸೂಚಿತವಾಗಿದೆ. ಜೀವೇಶರಿಗೆ ಅಭೇದವಿರುವುದರಿಂದ ಈಶ್ವರನಿಗೆ ಅಸಂಗತ್ವವಿದ್ದರೆ ಅರ್ಥಾತ್ ಅಭೇದವಿರುವುದರಿಂದ ಜೀವನಿಗೂ ತಥಾ ಅಸಂಗತ್ವದ ಆಗತಿ: ಬರುವಿಕೆಯೇ ಅರ್ಥಾತ್ ತಥಾಗತಿಯು.

ಸಿದ್ಧಾಂತ - 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ' (ಪ್ರಾಜ್ಞ ನಾಮಕಪರಮಾತ್ಮನಿಂದ ಆಲಿಂಗಿತನಾಗಿ ಸ್ವಪ್ನಕಾಲದಲ್ಲಿ ಜೀವನು ಹೊರಗಿನ ಒಳಗಿನ ಯಾವ ವಿಷಯಗಳನ್ನು ತಿಳಿಯುವುದಿಲ್ಲ) ಮತ್ತು 'ಪ್ರಾಜ್ಞೇನಾತ್ಮನಾ ಅನ್ವಾರೂಢ:' ಮುಂತಾದ ಶ್ರುತಿಗಳಿಂದ ಪ್ರಾಜ್ಞರೂಪನಾದ ಪರಮಾತ್ಮನಿಂದ ಆಲಿಂಗಿತನಾದ ಜೀವನಿಗೂ ಪ್ರಾಜ್ಞನಿಗೂ ಭೇದವು ಗೊತ್ತಾಗುವುದರಿಂದ, ಪರಮಾತ್ಮನಲ್ಲಿರುವ ಅಸಂಗತ್ವವು ಜೀವನಿಗೆ ಬರುವುದಿಲ್ಲ. ಅದು ಪರಮಾತ್ಮನಲ್ಲೇ ಇದೆ. ಪರಮಾತ್ಮನು ಸರ್ವಜ್ಞನಾದ್ದರಿಂದ ಅವನಿಗೆ ಸ್ವಪ್ನಾದಿದರ್ಶನವೂ ಕೂಡುತ್ತದೆ. ಆದ್ದರಿಂದ ಸ್ವಪ್ನ ದ್ರಷ್ಟಾ ಪರಮಾತ್ಮನೇ. ಜೀವನಲ್ಲಿ. ತಥಾ = ಶ್ರುತಿಗಳಿಂದ ಹಾಗೂ ಯುಕ್ತಿಗಳಿಂದ ಅರ್ಥಾತ್ ಜೀವ ಪರಮಾತ್ಮರಿಗೆ ಭೇದದ ಆಗತೇ: = ಪ್ರಾಪ್ತಿಯಿರುವುದರಿಂದ ಜೀವನು ಸ್ವಪ್ನದ್ರಷ್ಟೃವಲ್ಲ. ಎಂದು ಅರ್ಥಾತ್ ತಥಾऽಗತಿಯು ಸಿದ್ಧಾಂತಕ್ಕೆ ಸಾಧಕವಾಗಿದೆ.

೧೪) ಹದಿನಾಲ್ಕನೆಯ 'ಪತ್ಯಾದಿಶಬ್ದೇಭ್ಯ:' ಎಂಬಧಿಕರಣದಲ್ಲಿ 'ಲಿಂಗಶಬ್ದೌ' ಎಂದು ಹೇಳಲ್ಪಟ್ಟ ಬ್ರಾಹ್ಮಣ ಶಬ್ದದ ಸಮನ್ವಯವಿದೆ.

ಪೂರ್ವಪಕ್ಷ - 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' (ಈ ಬ್ರಾಹ್ಮಣನ ಮಹಿಮೆಯು ನಿತ್ಯವಾಗಿದೆ) ಎಂಬ ಶ್ರುತಿಯಲ್ಲಿ ಬ್ರಾಹ್ಮಣನ ಮಹಿಮೆಯು ನಿತ್ಯ ಎಂದು ಗೊತ್ತಾಗುತ್ತದೆ. ಆ ಬ್ರಾಹ್ಮಣನು 'ಸ ವಾ ಏಷ ಮಹಾನಜ: ಆತ್ಮಾ' ಎಂಬ ಶ್ರುತಿಯ ಪ್ರಕಾರ ಮಹತ್ ತತ್ವಾಭಿಮಾನಿ ವಿರಿಂಚನೇ. ದೇವತೆಗಳಿಗೆ ವಿದ್ಯೆ ಮತ್ತು ಕರ್ಮಗಳಿಂದ

ಉತ್ತರೋತ್ತರಾಭಿವೃದ್ಧಿಯಿದೆ. ಆದರೆ ವಿರಿಂಚನು ಈಶ್ವರನೇ. ದೇವತೆಯಲ್ಲ. ಆದ್ದರಿಂದ ಅವನು ನಿತ್ಯಮಹಿಮೆಯುಳ್ಳವನಾಗಬಹುದು. ಎಂಬ ಈ ಪೂರ್ವಪಕ್ಷಕ್ಕೆ ವಿರಿಂಚ ಮತ್ತು ಈಶ್ವರರ ಅಭೇದವೇ ಯುಕ್ತಿ. ಈ ಯುಕ್ತಿಯೂ 'ಅರ್ಥಾತ್ ತಥಾಽಗತಿ:' ಎಂದು ಹೇಳಲ್ಪಟ್ಟಿದೆ. ಯಾವ ರೀತಿ ಅನುಪಪತ್ತಿ ಪರಿಹಾರವೋ ಆ ರೀತಿ ಅಭೇದದ ಪ್ರಾಪ್ತಿಯೆಂದು ಅದಕ್ಕೆ ಅರ್ಥ.

ಸಿದ್ಧಾಂತ - 'ಸರ್ವಸ್ಯಾಧಿಪತಿ:' ಎಂಬ ಮೊದಲಿನ ವಾಕ್ಯದಲ್ಲಿ ಹೇಳಲ್ಪಟ್ಟ ಎಲ್ಲದಕ್ಕೂ ಅಧಿಪತಿಯು ವಿಷ್ಣುವೇ ಆಗಬೇಕು. 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಃ' (ಈ ಎಲ್ಲ ಲೋಕಪಾಲಕ ದೇವತೆಗಳು ವಿಷ್ಣುವಿನ ಆಜ್ಞಾಪಾಲಕರು) ಎಂಬ ಶ್ರುತಿಯ ಪ್ರಕಾರ ಸರ್ವಾಧಿಪತ್ಯವು ವಿಷ್ಣುವಿಗೇ ಕೂಡುತ್ತದೆ. ಆದ್ದರಿಂದ ಬ್ರಾಹ್ಮಣನು ವಿಷ್ಣುವೇ. ವಿರಿಂಚ ( ಚತುರ್ಮುಖ ಬ್ರಹ್ಮ) ನು ಈಶ್ವರನಾದರೆ ಅವನಲ್ಲಿ ಕರ್ಮಫಲಭೋಕ್ತೃತ್ವ ಮತ್ತು ಅಭೋಕ್ತೃತ್ವರೂಪ ವಿರುದ್ಧ ಧರ್ಮಗಳು ಬರುತ್ತವೆ. (ಅದೇ ಅರ್ಥಾತ್ ತಥಾಽಗತಿ: ವಿರುದ್ಧ ಧರ್ಮಗಳ ಪ್ರಾಪ್ತಿ) ಆದ್ದರಿಂದ ಅವನನ್ನು ಈಶ್ವರನೆಂದಗೀಕರಿಸಲು ಸಾಧ್ಯವಿಲ್ಲ.

**ಷಡ್ವಿಧ ಸಂಗತಿಗಳು**

ಪ್ರಸಂಗ, ಉಪೋದ್ಘಾತ, ಅವಸಾರಪ್ರಾಪ್ತಿ, ಕಾರಣತ್ವ ಕಾರ್ಯತ್ವ ಏಕಕಾರ್ಯತ್ವವೆಂದು ಸಂಗತಿಯು ಆರು ವಿಧವೆಂದು ಸುಧಾದಲ್ಲಿ ಹೇಳಿದ್ದಾರೆ. ಅವುಗಳ ಲಕ್ಷಣಗಳು ಹೀಗಿವೆ. ೧) 'ಸ್ಮೃತಸ್ಯೋಪೇಕ್ಷಾನರ್ಹತ್ವಂ ಪ್ರಸಂಗ:' ಪ್ರಾಸಂಗಿಕವಾಗಿ ನೆನಪಿಗೆ ಬಂದ, ವಿಷಯವನ್ನು ನಿರೂಪಿಸದಿರಲು ಸಾಧ್ಯವಾಗದಿರುವಿಕೆಯು ಪ್ರಸಂಗ ಸಂಗತಿಯು. ದ್ವಿತೀಯಾಧ್ಯಾಯದ ಮೂರನೇ ಪಾದದಲ್ಲಿ ಮೊದಲಿಗೆ 'ಉತ್ಕ್ರಾಂತಿಗತ್ಯಾಗತೀನಾಂ' (೨-೩-೨೦) ಎಂಬ ಸೂತ್ರದಲ್ಲಿ ಜೀವನಿಗೆ ಲೋಕಾಂತರ ಸಂಚಾರವು ಯುಕ್ತವಾಗಬೇಕಾದರೆ ಅವನು ಅಣುವಾಗ ಲೇಬೇಕು ಎಂದು ಹೇಳಿದ್ದಾರೆ. ಆಗ ನೆನಪಿಗೆ ಬಂದ ಲೋಕಾಂತರಗಮನಾಗಮನಗಳ ಭಗವದಧೀನತ್ವವನ್ನು 'ಸ್ವಾತ್ಮನಾ ಚೋತ್ತರಯೋ:' ಎಂಬ ಸೂತ್ರದಲ್ಲಿ ನಿರೂಪಿಸಿದ್ದಾರೆ. 'ಸೋಽಸ್ಮಾತ್ ಶರೀರಾದುತ್ಕ್ರಮ್ಯ ಅಮುಂ' ಎಂಬ

ಮುಂದಿನ ವಾಕ್ಯಗಳ ಅನುಸಾರ ಪರಮಾತ್ಮನಿಂದಲೇ ಜೀವನ ಉತ್ಕ್ರಾಂತಿ ಮೊದಲಾದವುಗಳು ನಡೆಯುತ್ತವೆ' ಎಂದು ಅದರ ಅರ್ಥ.

೨) ಉಪೋದ್ಘಾತ - 'ಪ್ರಕೃತಪ್ರಮೇಯೋಪಯುಕ್ತಚಿಂತನಂ ಪ್ರಸ್ತುತವಾದ ವಿಚಾರಕ್ಕೆ ಉಪಯುಕ್ತ ವಿಷಯದ ವಿಚಾರವೇ ಉಪೋದ್ಘಾತ. ಉದಾ - ಜಿಜ್ಞಾಸಾಧಿಕರಣದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಉಪೋದ್ಘಾತ ಸಂಗತಿಯಿಂದ ತೀರ್ಮಾನಿಸಿದ್ದಾರೆ. ವಿಚಾರಮಾಡಬೇದರೆ ಮಾತ್ರ ಯುಕ್ತಿಗಳನ್ನು ಅನ್ವೇಷಿಸಬೇಕು ಇಲ್ಲದಿದ್ದರೆ ಬೇಕಾಗಿಲ್ಲ. ಆದ್ದರಿಂದ ಪ್ರಕೃತ ಪ್ರಮೇಯ= ಯುಕ್ತಿ ನಿಬಂಧನಾತ್ಮಕ ಶಾಸ್ತ್ರ ರಚನ. ಅದಕ್ಕೆ 'ಜಿಜ್ಞಾಸಾಕರ್ತವ್ಯತ್ವ'ವು ಉಪಯುಕ್ತವಾದ ಪ್ರಮೇಯ. ಅದರ ಚಿಂತೆನೆಯೇ ಉಪೋದ್ಘಾತ. ಇದು ಜಿಜ್ಞಾಸಾ ಕರ್ತವ್ಯತ್ವದಲ್ಲಿದೆ. ಆದ್ದರಿಂದ ಚಂದ್ರಿಕಾದಲ್ಲಿ ಜಿಜ್ಞಾಸಾಧಿಕರಣಕ್ಕೆ ಉಪೋದ್ಘಾತ ಸಂಗತಿಯೆಂದು ಹೇಳಿದ್ದಾರೆ.

೩) ಅವಸರ ಪ್ರಾಪ್ತಿ: ವಕ್ತವ್ಯಸ್ಯ ಸರ್ವಸ್ಯ ಉಕ್ತ್ಯನಂತರಂ ಪ್ರಾಪ್ತಿ:. ಅವಶ್ಯ ಹೇಳಿ ಮುಗಿಸ ಬೇಕಾದ್ದನ್ನು ಹೇಳಿ ಮುಗಿಸಿದ ನಂತರ ನಿರೂಪಿಸುವುದು ಅವಸರ ಪ್ರಾಪ್ತಿ. ಇಡೀ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಮೊದಲಿನ ಐದು ಅಧಿಕರಣಗಳು ಪೀಠಿಕಾರೂಪವಾದ್ದರಿಂದ ಅವುಗಳನ್ನು ಹೇಳಿ ಮುಗಿಸಿದ ನಂತರವೇ ಆನಂದಮಯ ಮುಂತಾದ ಅಧಿಕರಣಗಳನ್ನು ಹೇಳಬೇಕು ಆದ್ದರಿಂದ ಆನಂದಮಯಾಧಿಕರಣಾದಿ ಸಮಸ್ತ ಶಾಸ್ತ್ರಕ್ಕೆ ಅವಸರಪ್ರಾಪ್ತಿ ಸಂಗತಿಯಿದೆ.

೪) ಕಾರಣತ್ವವು ನಾಲ್ಕನೇ ಸಂಗತಿ. ಈಗ ಹೇಳಿದ ವಿಷಯವು ಮುಂದೆ ಹೇಳಬೇಕಾದ ವಿಷಯಕ್ಕೆ ಕಾರಣವಾಗಿದ್ದಾಗ ಈ ಸಂಗತಿ. ಇರುತ್ತದೆ. ಸಮನ್ವಯಾಧಿಕರಣದಲ್ಲಿ ಎಲ್ಲ ಶಬ್ದಗಳಿಗೂ ವಿಷ್ಣುವಿನಲ್ಲಿ ಸಮನ್ವಯವನ್ನು ಹೇಳಿದಾಗಲೇ 'ಬ್ರಹ್ಮನು ವಾಚ್ಯನೇ ಅಲ್ಲವಾದ್ದರಿಂದ ಅವನಲ್ಲಿ ಶಬ್ದಗಳ ಸಮನ್ವಯಯವು ಯುಕ್ತವಲ್ಲ' ಎಂಬ ಶಂಕೆಗೆ ಅವಕಾಶವಿದೆ. ಆದ್ದರಿಂದ ಅದರ ನಿವಾರಣೆಗೆ ಈಕ್ಷತ್ಯಧಿಕರಣವು ಪ್ರವೃತ್ತವಾಗಿದೆ. ಸಮನ್ವಯಾಧಿಕರಣವೇ ಇಲ್ಲದಿದ್ದರೆ ಈಕ್ಷತ್ಯಧಿಕರಣಕ್ಕೆ

ಪ್ರಸಕ್ತಿಯೇ ಇರುತ್ತಿರಲಿಲ್ಲ. ಆದ್ದರಿಂದ ಸಮನ್ವಯಾಧಿಕರಣವು ಈಕ್ಷತ್ಯಧಿಕರಣಕ್ಕೆ ಕಾರಣವಾದ್ದರಿಂದ ಇಲ್ಲಿ ಕಾರಣತ್ವ ಸಂಗತಿಯಿದೆ.

ಬೇರೊಂದು ಉದಾಹರಣೆ ಹೀಗಿದೆ. ಪ್ರಥಮಾಧ್ಯಯದಲ್ಲಿ ಸಮನ್ವಯವನ್ನು ಹೇಳಿದಾಗಲೇ ಅದರಲ್ಲಿ ಬರುವ ವಿರೋಧ ಶಂಕಾಪರಿಹಾರಕ್ಕಾಗಿ ದ್ವಿತೀಯಾಧ್ಯಾಯ ಹೊರಡಬಹುದು. ಆದ್ದರಿಂದ ಅವಿರೋಧಾಧ್ಯಾಯಕ್ಕೆ ಸಮನ್ವಯಾಧ್ಯಾಯವು ಕಾರಣವಾದ್ದರಿಂದ ಇಲ್ಲಿ ಕಾರಣತ್ವ ಸಂಗತಿಯಿದೆ.

೫) ಕಾರ್ಯತ್ವ ಸಂಗತಿ - ಹಿಂದೆ ಹೇಳಿದ್ದನ್ನು ಅವಲಂಬಿಸಿ ಮುಂದಿನದ್ದು ಎಲ್ಲಿ ಹೇಳಲ್ಪಡುತ್ತದೋ ಅಲ್ಲಿ ಕಾರ್ಯತ್ವಸಂಗತಿ. 'ಅತ್ತಾ ಚರಾಚರಗ್ರಹಣಾತ್' ಎಂಬಲ್ಲಿ ಪರಮಾತ್ಮನೇ ಭೋಕ್ತೃ ಎಂದು ತೀರ್ಮಾನಿಸಲಾಗಿದೆ ಅದನ್ನೇ ಅವಲಂಬಿಸಿ 'ಗುಹಾಂ ಪ್ರವಿಷ್ಟೌ' ಎಂಬಧಿಕರಣದಲ್ಲಿ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ''ಕುಡಿಯುವ ರೂಪ''ಗಳ ಬಗ್ಗೆ ವಿಚಾರ ಮಾಡಿದ್ದಾರೆ. ಭೋಕ್ತಾ ಪರಮಾತ್ಮನೆಂದು ಸಿದ್ಧವಾಗಿರದಿದ್ದರೆ ಕುಡಿಯುವವನ ವಿಚಾರವೂ ಅಪ್ರಸಕ್ತವಾಗುತ್ತಿತ್ತು. ಸಾಮಾನ್ಯವಾದ ಭೋಕ್ತೃತ್ವವು ಇರದಿದ್ದಲ್ಲಿ ಭೋಕ್ತೃತ್ವದ ವಿಶೇಷಪ್ರಕಾರವಾದ ಪಾತೃತ್ವ (ಕುಡಿಯುವಿಕೆ)ದ ವಿಚಾರಕ್ಕೆ ಪ್ರಸಕ್ತಿಯಿರುವುದಿಲ್ಲ. ಆದ್ದರಿಂದ ಇಲ್ಲಿ ಕಾರ್ಯತ್ವ ಸಂಗತಿಯಿದೆ.

೬) ಏಕಕಾರ್ಯತ್ವಂ - ಏಕಕಾರ್ಯ ಕಾರಿತ್ವಂ. ಯಾವುದೇ ಕಾರ್ಯಕ್ಕೆ ಬೇಕಾದ ಅನೇಕ ಕಾರಣಗಳಲ್ಲಿ ಒಂದು ಕಾರಣವನ್ನು ಹೇಳಿ ಅದೇ ಕಾರ್ಯಕ್ಕೆ ಬೇಕಾದ ಇನ್ನೊಂದು ಕಾರಣವನ್ನು ಹೇಳುವಲ್ಲಿ ಈ ಸಂಗತಿಯಿದೆ. ಏಕಕಾರ್ಯತ್ವವೆಂದರೆ ಏಕ ಕಾರ್ಯ ಕಾರಿತ್ವವೆಂದರ್ಥ. ಶಾಸ್ತ್ರಯೋನಿತ್ವಾಧಿಕರಣ ಹಾಗೂ ಸಮನ್ವಯಾಧಿಕರಣಗಳು ಸೇರಿ ವಿಷ್ಣುವೇ ಜಗತ್‌ಕಾರಣನೆಂದು ಸಿದ್ಧಪಡಿಸುವುದರಿಂದ ಸಮನ್ವಯಾಧಿ ಕರಣದಲ್ಲಿ ಮತ್ತು ಶಾಸ್ತ್ರಯೋನಿತ್ವಾಧಿ ಕರಣದಲ್ಲಿ ಪರಸ್ಪರವಾಗಿ ಏಕಕಾರ್ಯತ್ವ ಸಂಗತಿಯಿದೆ. ಹಾಗೂ ಜಿಜ್ಞಾಸಾಧಿಕರಣ ಹಾಗೂ

ಜನ್ಮಾಧಿಕರಣಗಳು ಸೇರಿ ವಿಷ್ಣುವಿನ ಜಿಜ್ಞಾಸಾಕರ್ತವ್ಯತ್ವವನ್ನೂ ಸಮರ್ಥಿಸುತ್ತವೆ. ಆದ್ದರಿಂದ ಅವುಗಳಲ್ಲಿ ಪರಸ್ಪರ ಏಕ ಕಾರ್ಯತ್ವ ಸಂಗತಿಯಿದೆ

**ಪ್ರಥಮಾಧ್ಯಾಯ ಚತುರ್ಥಪಾದದ ನ್ಯಾಯಮಾಲಾ**

> **ವಿರೋಧಿ ಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।**
> **ಪೃಥಕ್ ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥**
>
> **ಸರ್ವಮಾನೈರ್ವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ ।**
> **ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ ।**
> **ಸ್ತ್ರೀಲಿಂಗತ್ವಂ ನಿಷೇಧಶ್ಚ ಪೂರ್ವಪಕ್ಷೇಷು ಯುಕ್ತಯಃ ॥**
>
> **ದೋಷಾತ್ಯಸ್ಪೃಷ್ಟಿನಿಯಮಃ ಶಬ್ದಾರ್ಥಾನೇಕತಾ ತಥಾ ।**
> **ಬಹುರೂಪತ್ವಮೀಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ ।**
> **ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ ।**
> **ಇತ್ಯಾದಿಯುಕ್ತಯಃ ಸಾಕ್ಷಾತ್ ಸಿದ್ಧಾಂತಸ್ಥಾಪಕಾ ಇಹ ।**

೧) ಮೊದಲನೆಯ 'ಆನುಮಾನಿಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ' ಎಂಬ ಅಧಿಕರಣದಲ್ಲಿ ಪರಮಾತ್ಮನ ಐಶ್ವರ್ಯಕ್ಕೆ ವಿರೋಧಿಯಾದ ಎಲ್ಲ ದು:ಖಿ ಬದ್ಧ ಅವರ ಮೊದಲಾದ ಶಬ್ದಗಳ ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ - ಸರ್ವಶಬ್ದಗಳಿಗೂ ಪರಮಾತ್ಮನಲ್ಲಿ ಸಮನ್ವಯವನ್ನು 'ತತ್ತು ಸಮನ್ವಯಾತ್' ಎಂಬಲ್ಲಿ ಹೇಳಲಾಗಿದೆ. ಆದರೆ 'ಅವ್ಯಕ್ತಾತ್ ಪುರುಷ: ಪರ:' (ಅವ್ಯಕ್ತಕ್ಕಿಂತ ಪುರುಷ - ಪರಮಾತ್ಮನು ಉತ್ತಮ) ಎಂಬ ಶ್ರುತಿಯಲ್ಲಿರುವ ಅವ್ಯಕ್ತ ಶಬ್ದಕ್ಕೆ ಪರಮಾತ್ಮನಲ್ಲಿ ಸಮನ್ವಯವು ಸಾಧ್ಯವಿಲ್ಲ. ಒಂದು ಪಕ್ಷ ಅವ್ಯಕ್ತವು ಪರಮಾತ್ಮನೇ ಆದರೆ ಅವ್ಯಕ್ತನಿಗೆ ಪುರುಷನಿಗಿಂತ ಅವರತ್ವ (ನೀಚತ್ವ-ಕೀಳುಮಟ್ಟ) ವು ಬರಬೇಕಾದೀತು. ಪರಮಾತ್ಮನಿಗೆ ಅವರತ್ವವನ್ನು ಅಂಗೀಕರಿಸಿದರೆ ಪರಮಾತ್ಮನೇ ಸರ್ವೋತ್ತಮನೆಂದು ಸಾರುವ ಎಲ್ಲ ಶ್ರುತಿ ಸ್ಮೃತಿಗಳ ವಿರೋಧ ಬರುತ್ತದೆ. ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು 'ಸರ್ವಮಾನೈರ್ವಿರೋಧ:' (ಎಲ್ಲ ಪ್ರಮಾಣ = ಶ್ರುತಿಸ್ಮೃತಿಗಳ ವಿರೋಧ) ಎಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ.

ಸಿದ್ಧಾಂತ - 'ಅವ್ಯಕ್ತಮಚಲಂ' ಇತ್ಯಾದಿ ಶ್ರುತಿಗಳು ಹೇಳುವಂತೆ ಪರಮಾತ್ಮನೇ ಮುಖ್ಯವಾಗಿ ಅವ್ಯಕ್ತಶಬ್ದವಾಚ್ಯ. ಪ್ರಧಾನವು (ಪ್ರಕೃತಿಯು) ಪರಮಾತ್ಮನ ಶರೀರ ರೂಪದಿಂದಿರುವುದರಿಂದ ಅದಕ್ಕೂ (ಅಮುಖ್ಯವಾಗಿ) ಅವ್ಯಕ್ತಶಬ್ದವಾಚ್ಯತ್ವವಿದೆ. ಹಾಗಾದರೆ ಪರಮಾತ್ಮನಿಗೆ ಅವರತ್ವವು ಬರುವುದಿಲ್ಲವೇ? ಇಲ್ಲ ಅವ್ಯಕ್ತಾದಿಗಳಲ್ಲಿರುವ ಅವರತ್ವಾದಿಧರ್ಮಗಳಿಗೆ ಪರಮಾತ್ಮನೇ ನಿಯಾಮಕನಾದ್ದರಿಂದ ಪರಮಾತ್ಮನು ಅವರಾದಿ ಶಬ್ದವಾಚ್ಯನಾದರೂ ಅವನು ವಾಸ್ತವಿಕವಾಗಿ ಅವರನಾಗುವುದಿಲ್ಲ. ರಾಜನು ಸ್ವತ: ಯುದ್ಧ ಮಾಡದಿದ್ದರೂ ಅವನ ಸೈನಿಕರು ಯುದ್ಧಮಾಡಿ ಜಯಗಳಿಸಿದಾಗ ಜಯವು ರಾಜನು ಅಧೀನವಾದ್ದರಿಂದ 'ರಾಜನು ಯುದ್ಧದಲ್ಲಿ ಜಯಸಿದ' ಎಂಬ ಪ್ರಯೋಗವಿದೆ. ಹಾಗೆಯೇ ಅವರತ್ವಾದಿಗಳು ಪರಮಾತ್ಮನ ಅಧೀನವಾದ್ದರಿಂದ ಅವನು ಅವರಶಬ್ದವಾಚ್ಯನಾಗಿದ್ದಾನೆ. ಆದರೆ ರಾಜನ ಸೈನಿಕರು ಸೋತಾಗ ಕಡೆಗೆ ಸೋಲು ರಾಜನಿಗೇ ಆದರೂ 'ರಾಜನು ಸೋತನು' ಎಂದು ಹೇಳಿದಾಗ ಅದು ರಾಜನೇ ಸೋತನೆಂಬ ಸಂಶಯಕ್ಕೆ ಕಾರಣವಾಗಬಹುದಾದ್ದರಿಂದ ಹಾಗೆ ಪ್ರಯೋಗವಿಲ್ಲ, ಆದರೆ ಪರಮಾತ್ಮನಲ್ಲಿ ಯಾವ ದೋಷಗಳೂ ಇಲ್ಲವೆಂದು 'ನಿರನಿಷ್ಟೋ ನಿರವದ್ಯಃ' ಮುಂತಾದ ಶ್ರುತಿಗಳಿಂದ ನಿಶ್ಚಿತವಾಗಿರುವುದರಿಂದ 'ಪರಮಾತ್ಮನು ಅವರ' ಎಂದು ಪ್ರಯೋಗಿಸಿದಾಗಲೂ ಯಾವುದೇ ಸಂಶಯಕ್ಕೆ ಆಸ್ಪದವಿಲ್ಲ. ಆದ್ದರಿಂದ 'ಪರಮಾತ್ಮನು ಅವರಶಬ್ದವಾಚ್ಯನಾದರೂ ವಾಸ್ತವವಾಗಿ ಅವರನಾಗಬೇಕಾಗಿಲ್ಲವಾದ್ದರಿಂದ ಅವನೇ ಅವ್ಯಕ್ತಶಬ್ದವಾಚ್ಯನಾಗಿದ್ದಾನೆ. ಹೀಗೆ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿಯು 'ದೋಷಾತ್ಯಸ್ಪೃಷ್ಟಿನಿಯಮ:' (ಪರಮಾತ್ಮನಲ್ಲಿ ದೋಷಗಳ ಸ್ಪರ್ಶವಿಲ್ಲವೆಂಬ ನಿಯಮವು) ಎಂಬ ಶಬ್ದದಿಂದ ಹೇಳಲ್ಪಟ್ಟಿದೆ.

೨) ಎರಡನೆಯ 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ' ಎಂಬ ಅಧಿಕರಣದಲ್ಲಿ ಕರ್ಮವಾಚಕತ್ವೇನ ಪ್ರಸಿದ್ಧವಾದ ಜ್ಯೋತಿರಾದಿ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆ ಶಬ್ದಗಳನ್ನು 'ಸರ್ವ' ಎಂದು ಅನುವ್ಯಾಖ್ಯಾನ ದಲ್ಲಿ ಸೂಚಿಸಲಾಗಿದೆ. ಹಿಂದೆ ಈ ಪಾದದಲ್ಲಿ ಸಮನ್ವಯ ಮಾಡಿದ ಪದರೂಪದ ಶಬ್ದಗಳಲ್ಲಿ ಹಾಗೂ ಮುಂದೆ ಈ ಪಾದದಲ್ಲಿ

ಸಮನ್ವಯ ಮಾಡಲಾಗುವ ವಾಕ್ಯರೂಪದ (ಪಂಚಜನಾದಿ) ಶಬ್ದಗಳಲ್ಲಿರುವ ಉಪಾಧಿಗಿಂತ ಬೇರೆಯಾದ ಸ್ವರವರ್ಣಾದಿರೂಪವಾದ ಉಪಾಧಿಯುಳ್ಳ ಜ್ಯೋತಿರಾದಿ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆಯೆಂದು 'ಸರ್ವ' ಎಂಬುದಕ್ಕೆ ಅರ್ಥ.

ಪೂರ್ವಪಕ್ಷ - 'ವಸಂತೇ ವಸಂತೇ ಜ್ಯೋತಿಷಾ ಯಜೇತ' (ಪ್ರತಿವಸಂತ ಮಾಸದಲ್ಲಿ ಜ್ಯೋತಿಷ್ಟೋಮ (ಸೋಮಯಾಗ) ಮಾಡಬೇಕು) ಮುಂತಾದ ಶ್ರುತಿಗಳಲ್ಲಿ 'ಜ್ಯೋತಿ' ಮುಂತಾದ ಶಬ್ದಗಳಿಂದಲೂ ಪರಮಾತ್ಮನೇ ಹೇಳಲ್ಪಡುವುದಾದರೆ. ಆ ಎಲ್ಲ ಕರ್ಮಗಳು ಲೋಪವಾಗಬೇಕಾದೀತು. ಆದ್ದರಿಂದ ಆ ಶಬ್ದಗಳ ಸಮನ್ವಯವು ಪರಮಾತ್ಮನಲ್ಲಿ ಯುಕ್ತವಲ್ಲ. ಈ ರೀತಿ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು 'ವ್ಯುತ್ಪತ್ತೇರಪ್ಯಶಕ್ಯತಾ' (ಪರಮಾತ್ಮ ಪಕ್ಷದಲ್ಲಿ ಈ ಶಬ್ದಗಳಿಗೆ ವ್ಯುತ್ಪತ್ತಿ ಕೂಡದಿರುವಿಕೆ) ಎಂದು ಹೇಳಲ್ಪಟ್ಟಿದೆ.

ಸಿದ್ಧಾಂತ - 'ತಾ ವಾ ಏತಾ: ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ: ಏಕೈವ ವ್ಯಾಹೃತಿಃ ಪ್ರಾಣ ಏವ' ( ಈ ಎಲ್ಲ ಋಕ್‌ಗಳು ಎಲ್ಲ ವೇದಗಳು ಎಲ್ಲ ಸ್ವರವರ್ಣರೂಪ ಶಬ್ದಗಳೂ ಈ ಪ್ರಾಣ(ಬ್ರಹ್ಮ) ನನ್ನೇ ಪ್ರತಿಪಾದಿಸುತ್ತವೆ) ಎಂಬ ಶ್ರುತಿಯ ಪ್ರಕಾರ ಪರಮಾತ್ಮನೇ ಜ್ಯೋತಿಯು. ಶ್ರುತಿಯಲ್ಲಿರುವ 'ಜ್ಯೋತಿ' ಎಂಬ ಪದಕ್ಕೆ 'ಜಾತಮೋತಂ ಯಸ್ಮಿನ್ನಸೌ ಜ್ಯೋತಿ:' (ಈ ಪರಮಾತ್ಮನಲ್ಲೇ ಜಗತ್ತು ಪ್ರವಿಷ್ಟವಾಗಿದೆ) ಎಂಬ ವ್ಯುತ್ಪತ್ತಿಯಿಂದ ಜ್ಯೋತಿ: ಶಬ್ದದಿಂದ ಹಾಗೂ ಪ್ರಾಣರೂಪನಾದ್ದರಿಂದ ಷಕಾರವಾಚ್ಯನಾದ ವಿಷ್ಣುವೇ ಜ್ಯೋತಿಷ. ಆದ್ದರಿಂದ ಜ್ಯೋತಿಷ ಶಬ್ದಕ್ಕೂ ಪರಮಾತ್ಮನಲ್ಲಿ ಸಮನ್ವಯವು ಯುಕ್ತವಾಗುತ್ತದೆ. ಶಬ್ದದ ವೃತ್ತಿಗಳು. ಪರಮಮುಖ್ಯ, ಮುಖ್ಯ, ಗೌಣ ಎಂಬುದಾಗಿ ಮೂರು ರೀತಿಯಾಗಿ ವೆಯಾದ್ದರಿಂದ ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕವಾದ ಜ್ಯೋತಿಷ ಶಬ್ದವು ಮುಖ್ಯವೃತ್ತಿಯಿಂದ ಕರ್ಮವನ್ನು ಹೇಳುತ್ತದೆ. ಆದ್ದರಿಂದ ಕರ್ಮಲೋಪ ಪ್ರಸಂಗವಿಲ್ಲ. ಈ ಸಿದ್ಧಾಂತ ಯುಕ್ತಿಯೇ 'ಶಬ್ದಾರ್ಥಾನೇಕತಾ' (ಶಬ್ದವೃತ್ತಿಗಳ ಅನೇಕತೆ) ಎಂದು ಹೇಳಲ್ಪಟ್ಟಿದೆ

೩) ಮೂರನೇ 'ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ...' ಎಂಬ ಅಧಿಕರಣದಲ್ಲಿ 'ಬಾಹುಲ್ಯ' ಎಂದು ಹೇಳಲ್ಪಟ್ಟ ಬಹುತ್ವ (ಸಂಖ್ಯಾ ವಾಚಕವಾದ 'ಪಂಚಜನ' ಮುಂತಾದ ವಾಕ್ಯರೂಪದ ಶಬ್ದಗಳ ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ - 'ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತ:' (ಯಾವ ಶರೀರದಲ್ಲಿ ಐದು ಐದು ಮಂದಿ ಇದ್ದಾರೆ) ಎಂಬ ಶ್ರುತಿಯಲ್ಲಿರುವ ಪಂಚಜನ ಶಬ್ದವಾಚ್ಯ ಪರಮಾತ್ಮನಲ್ಲ. 'ಏಕಮೇವಾದ್ವಿತೀಯಂ' ಎಂಬ ಶ್ರುತಿಯಿಂದ ಪರಮಾತ್ಮನು ಒಬ್ಬನೇ ಎಂದು ಸಿದ್ಧವಾಗಿರುವುದರಿಂದ ಅವನಲ್ಲಿ ಬಹುತ್ವ (ಐದು ಸಂಖ್ಯೆ) ಕೂಡುವುದಿಲ್ಲ. ಆದ್ದರಿಂದ ಈ 'ಪಂಚಜನಾ' ಶಬ್ದದ ಸಮನ್ವಯ ಪರಮಾತ್ಮನಲ್ಲಾಗುವುದಿಲ್ಲ. ಈ ಪೂರ್ವಪಕ್ಷಾಧಾರಯುಕ್ತಿಯು 'ಪರಸ್ಪರ ವಿರೋಧ:' ಎಂದು ಹೇಳಲ್ಪಟ್ಟದೆ (ಏಕತ್ವಕ್ಕೂ ಬಹುತ್ವಕ್ಕೂ ಪರಸ್ಪರ ವಿರೋಧವಿದೆ.)

ಸಿದ್ಧಾಂತ - ಪರಮಾತ್ಮನೇ ಪಂಚಜನ ಶಬ್ದವಾಚ್ಯ. ಅವನು ಒಬ್ಬನೇ ಆಗಿದ್ದರೂ ನಾನಾರೂಪಗಳನ್ನು ಧರಿಸುವುದರಿಂದ ಆ ಅನೇಕ ರೂಪಗಳ ವಿವಕ್ಷೆಯಿಂದ 'ಐದು ಮಂದಿ' ಎಂಬ ಶಬ್ದವು ಉಪಪನ್ನವಾಗಿದೆ. ಈ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿಯು 'ಈಶಸ್ಯ ಬಹುರೂಪತ್ವ' ಎಂದು ಹೇಳಲ್ಪಟ್ಟಿದೆ.

೪) ನಾಲ್ಕನೆಯ 'ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ...' ಎಂಬ ಧಿಕರಣದಲ್ಲಿ 'ಕಾರಣ' ಪದೋಕ್ತವಾದ ಅವಾಂತರ ಕಾರಣವಾಚಕವಾದ ಆಕಾಶಾದಿ ಪದಗಳ ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ - 'ಆತ್ಮನ ಆಕಾಶಸ್ಸಂಭೂತ:' ಆಕಾಶಾದ್ವಾಯು: (ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ವಾಯುವು ಹುಟ್ಟಿದೆ) ಮೊದಲಾದ ಶ್ರುತಿಗಳಲ್ಲಿ ಆತ್ಮ ಕಾರ್ಯ ಹಾಗೂ ವಾಯುಕಾರಣವೆಂದು ಹೇಳಲ್ಪಟ್ಟಿರುವ ಆಕಾಶವು ವಿಷ್ಣುವಲ್ಲ. ಸಮಸ್ತಪ್ರಪಂಚ ಕಾರಣನಾದ ಅವನಲ್ಲಿ ಕಾರ್ಯತ್ವವು ಕೂಡುವುದಿಲ್ಲ. ಆದ್ದರಿಂದ ಮೂಲಕಾರಣ ವಿಷ್ಣುವಾಗಬಹುದಾದರೂ ಈ ಅವಾಂತರ ಕಾರ್ಯ ಕಾರಣನು ಅವನಲ್ಲ.

ಆದ್ದರಿಂದ ಸಮಸ್ತ ಶಬ್ದಗಳ ಸಮನ್ವಯ ಸಿದ್ಧವಾಗುವುದಿಲ್ಲ. ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು 'ವಿರೋಧ: ಕಾರ್ಯತದ್ವತೋ:' (ಕಾರ್ಯಕಾರಣಗಳು ವಿರುದ್ಧವಾದ್ದರಿಂದ ಒಂದಾಗಲು ಸಾಧ್ಯವಿಲ್ಲ) ಎಂದು ಹೇಳಲ್ಪಟ್ಟಿದೆ.

ಸಿದ್ಧಾಂತ - ವಿಷ್ಣುವೇ ಅವಾಂತರ ಕಾರಣವಾದ ಆಕಾಶಗಳಲ್ಲಿರುವವನಾಗಿ ಆಕಾಶಾದಿ ಶಬ್ದವಾಚ್ಯನಾಗಿದ್ದಾನೆ. ಆಕಾಶಾದಿಗಳ ಉತ್ಪತ್ತಿ ಹಾಗೂ ಅವುಗಳಿಂದ ವಾಯು ಮುಂತಾದವುಗಳ ಉತ್ಪತ್ತಿ ಈ ಎರಡಕ್ಕೂ ಪರಮಾತ್ಮನೇ ನಿಯಾಮಕನಾದ್ದರಿಂದ ಅವನು ಆಕಾಶಾದಿಶಬ್ದವಾಚ್ಯ. ಆದ್ದರಿಂದಲೇ ಶ್ರುತಿಯಲ್ಲಿ 'ಯ ಆಕಾಶೇ ತಿಷ್ಠನ್' 'ಯೋ ವಾಯೌ ತಿಷ್ಠನ್' ( ಯಾರು ಆಕಾಶ ವಾಯು ಮೊದಲಾದವುಗಳಲ್ಲಿ ಇದ್ದು ಅವುಗಳ ನಿಯಮನ ಮಾಡುತ್ತಾನೋ ಅವನು ಪರಮಾತ್ಮ) ಎಂದು ಹೇಳಲಾಗಿದೆ. ಪರಮಾತ್ಮನು ಎಲ್ಲ ಜಗತ್ತಿಗೆ ಮೂಲಕಾರಣನಾದರೂ ಆತ್ಮರೂಪದಿಂದ ಅವನದ್ದೇ ಆದ ಆಕಾಶಾಂತರ್ಗತ ರೂಪದ ಅಭಿವ್ಯಕ್ತಿ, ಆಕಾಶದಲ್ಲಿ ಅಭಿವ್ಯಕ್ತವಾದ ರೂಪದಿಂದ ಅವನ ವಾಯ್ವಂತರ್ಗತ ರೂಪದ ಅಭಿವ್ಯಕ್ತಿಯನ್ನು ಅಂಗೀಕರಿಸಲು ಯಾವ ವಿರೋಧವು ಇಲ್ಲ. ಈ ಸಿದ್ಧಾಂತ ಸಾಧಕ ಯುಕ್ತಿಯನ್ನು 'ವ್ಯಕ್ತ್ಯವ್ಯಕ್ತಿ ವಿಶೇಷಿತಾ' (ಅಭಿವ್ಯಕ್ತಿ ಹಾಗೂ ಅನಭಿವ್ಯಕ್ತಿಗಳೆಂಬ ವಿಶೇಷ) ಎಂದು ಹೇಳಿದ್ದಾರೆ. (ಮೊದಲು ಅಭಿವ್ಯಕ್ತನಾಗದವನು ನಂತರ ಅಭಿವ್ಯಕ್ತನಾಗಬಹುದು ಎಂಬುದೇ ವಿಶೇಷ)

೫) ಐದನೆಯ ಸಮಾಕರ್ಷಾಧಿಕರಣದಲ್ಲಿ ನಾಮಗಳ ಸಮನ್ವಯವಿಲ್ಲ. ಎಲ್ಲ ಶಬ್ದಗಳೂ ಪರಮಾತ್ಮನ ವಾಚಕಗಳಾದರೆ ಲೋಕದ ಎಲ್ಲ ವ್ಯವಹಾರ ನಿಂತು ಹೋಗುವುದಲ್ಲವೇ ಎಂದು ಆಶಂಕಿಸಿ ಅವು ಪರಮಮುಖ್ಯವೃತ್ತಿಯಿಂದ ಪರಮಾತ್ಮನಿಗೇ ವಾಚಕವಾದರೂ ಅವೇ ಶಬ್ದಗಳನ್ನು ಮುಖ್ಯವೃತ್ತಿಯಿಂದ ಜಗತ್ತಿನಲ್ಲೂ ಪ್ರಯೋಗಿಸಲಾಗುತ್ತದೆ ಎಂದು ಈ ಅಧಿಕರಣದಲ್ಲಿ ಸಮಾಧಾನ ಮಾಡಿದ್ದಾರೆ.

೬) ಆರನೆಯ 'ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್' ಎಂಬಲ್ಲಿ ಪ್ರಕೃತಿ ಮುಂತಾದ ಸ್ತ್ರೀಲಿಂಗದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ - 'ಏಷಾ ಹ್ಯೇವ ಪ್ರಕೃತಿಃ' ಎಂಬಲ್ಲಿರುವ ಪ್ರಕೃತಿ ಶಬ್ದವಾಚ್ಯ ಪರಮಾತ್ಮನಲ್ಲ. ಸರ್ವಕ್ಕೂ ಉಪಾದಾನ ಕಾರಣವಾದ ಜಡ ಪ್ರಕೃತಿಯೇ ಈ ಪ್ರಕೃತಿ ಶಬ್ದವಾಚ್ಯ. 'ನೈನಂ ವಾಚಾ ಸ್ತ್ರಿಯಾ ಬ್ರುವನ್' (ವಿಷ್ಣುವನ್ನು ಸ್ತ್ರೀಲಿಂಗದಿಂದ ಹೇಳಬಾರದು) ಎಂದು ಶ್ರುತಿಯು ಪರಮಾತ್ಮನಲ್ಲಿ ಸ್ತ್ರೀತ್ವವು ಇಲ್ಲವೆಂದು ಹೇಳುವುದರಿಂದ ಸ್ತ್ರೀಲಿಂಗದ ಪ್ರಕೃತಿ ಮುಂತಾದ ಶಬ್ದಗಳಿಂದ ಪರಮಾತ್ಮನು ಹೇಳಲ್ಪಡುವುದಿಲ್ಲ. ಆದ್ದರಿಂದ ಪ್ರಕೃತಿಯು ಜಡ ಪ್ರಕೃತಿಯೇ. ಇಲ್ಲಿ 'ಸ್ತ್ರೀಲಿಂಗತ್ವಂ' ಎಂದು ಹೇಳಲ್ಪಟ್ಟ ಸ್ತ್ರೀಲಿಂಗತ್ವವು ಪೂರ್ವಪಕ್ಷಯುಕ್ತಿ.

ಸಿದ್ಧಾಂತ - ಪ್ರಕೃತಿ ಶಬ್ದವಾಚ್ಯನು ವಿಷ್ಣುವೇ. 'ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ ....' (ಎಲ್ಲ ನದಿಗಳು ಹೇಗೆ ಸಮುದ್ರವನ್ನು ಸೇರುತ್ತವೋ ಹಾಗೆಯೇ ಎಲ್ಲ ನಾಮಗಳು ಈ ವಿಷ್ಣುವನ್ನೇ ಹೇಳುತ್ತವೆ) ಎಂಬ ಶ್ರುತಿಯ ಪ್ರತಿಜ್ಞಾದಿಂದ ('ಎಲ್ಲ ಶಬ್ದಗಳೂ ಭಗವದ್ವಾಚಕ' ಎಂದು ಪ್ರತಿಜ್ಞಾ) ಹಾಗೂ ನದಿಸಾಗರಗಳ ದೃಷ್ಟಾಂತದಿಂದ ಎಲ್ಲ ಶಬ್ದಗಳಿಂದಲೂ ವಿಷ್ಣುವೇ ವಾಚ್ಯನೆಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವು ಸ್ತ್ರೀಲಿಂಗ ಪ್ರಕೃತಿ ಶಬ್ದವಾಚ್ಯನೂ ಆಗಿದ್ದಾನೆ. ಪರಮಾತ್ಮನು ಸ್ತ್ರೀರೂಪ ಮತ್ತು ಪುರುಷರೂಪನೂ ಆಗಿದ್ದಾನೆ ಆದ್ದರಿಂದ ಸ್ತ್ರೀಲಿಂಗ ಶಬ್ದವಾಚ್ಯನಾಗಬಹುದು. ಸ್ತ್ರೀತ್ವ ನಿಷೇಧ ಮಾಡುವ ವಾಕ್ಯವು ಕೇವಲಸ್ತ್ರೀತ್ವವಿಲ್ಲವೆಂದು ಮಾತ್ರ ಹೇಳುತ್ತದೆ. ಆದ್ದರಿಂದ ಅದರ ವಿರೋಧವಿಲ್ಲ. ಹಾಗೂ ಪ್ರಕೃತಿಯೆಂದರೆ ಕಾರಣವೆಂದರ್ಥ. ಪರಮಾತ್ಮನು ತನ್ನಶರೀರದ ಒಳಗಿನ ಪ್ರಪಂಚವನ್ನೇ ಮತ್ತೆ ಸೃಷ್ಟಿಸುವುದರಿಂದ ಕಾರಣನಾಗಿದ್ದಾನೆ. ಆದ್ದರಿಂದ ಪರಮಾತ್ಮನೇ ಪ್ರಕೃತಿಶಬ್ದವಾಚ್ಯ. ಈ ಸಿದ್ಧಾಂತ ಯುಕ್ತಿಯನ್ನೂ 'ಸ್ವದೇಹಾದುತ್ಪಾದನಂ' ಎಂದು ಹೇಳಲಾಗಿದೆ (ತನ್ನ ಶರೀರದಿಂದಲೇ ಜಗತ್ತನ್ನು ಉತ್ಪಾದಿಸುವುದು)

೭) ಏಳನೆಯ 'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬಧಿಕರಣದಲ್ಲಿ 'ನಿಷೇಧಿ' ಎಂದು ಹೇಳಲ್ಪಟ್ಟ ಶೂನ್ಯ ಮುಂತಾದ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ.

ಪೂರ್ವಪಕ್ಷ - ಶೂನ್ಯ ಮುಂತಾದ ಶಬ್ದಗಳಿಂದ ಪರಮಾತ್ಮನು ವಾಚ್ಯನಲ್ಲ. ಏಕೆಂದರೆ ನಿಷೇಧಬುದ್ಧಿ (ಇಲ್ಲಿ ಘಟವಿಲ್ಲ ಮುಂತಾದ ನಿಷೇಧಾತ್ಮಕ ಜ್ಞಾನ) ವೇದ್ಯವಾದ ಅಭಾವವನ್ನು ಹೇಳುವ ಈ ಶೂನ್ಯ ಶಬ್ದವು ಭಾವರೂಪನಾದ ಪರಮಾತ್ಮನಲ್ಲಿ ಕೂಡುವುದಿಲ್ಲ. ಆದ್ದರಿಂದ ಶೂನ್ಯಾದಿ ಶಬ್ದಗಳಿಗೆ ಅಭಾವ ಮೊದಲಾದವುಗಳೇ ವಾಚ್ಯ. ಪರಮಾತ್ಮನಲ್ಲ. ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯು 'ನಿಷೇಧ:' (ಅಭಾವರೂಪತ್ವ) ಎಂದು ಹೇಳಲ್ಪಟ್ಟಿದೆ.

ಸಿದ್ಧಾಂತ - ಪರಮಾತ್ಮನೇ ಶೂನ್ಯನೆಂದು 'ಏಷ ಹ್ಯೇವ ಶೂನ್ಯ:' ಎಂಬ ಶ್ರುತಿಯು ಹೇಳುತ್ತಿರುವುದರಿಂದ ಪರಮಾತ್ಮನೇ ಶೂನ್ಯಶಬ್ದವಾಚ್ಯನು. ದುರ್ಜನರಿಗೆ ವ್ಯಕ್ತನಾಗುವುದಿಲ್ಲವಾದ್ದರಿಂದ ಪರಮಾತ್ಮನು ನಿಷೇಧಪ್ರತೀತಿ ವಿಷಯನಾದ್ದರಿಂದ ಶೂನ್ಯ ಶಬ್ದವಾಚ್ಯನಾಗಬಹುದು. ಇದೇ ರೀತಿ ತುಚ್ಛ, ಅಭಾವ ಮುಂತಾದ ಶಬ್ದಗಳಿಂದಲೂ ಪರಮಾತ್ಮನೇ ವಾಚ್ಯ. ಈ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿಯು 'ದುರ್ಜನಾವ್ಯಕ್ತತಾ' (ದುರ್ಜನರಿಗೆ ವ್ಯಕ್ತನಾಗದಿರುವಿಕೆ) ಎಂದು ಹೇಳಲ್ಪಟ್ಟಿದೆ.

**ಯೋಗರೂಢಿ**

ಪ್ರವೃತ್ತಿ ಹೇತೋರ್ಬಾಹುಲ್ಯಂ ಜ್ಞೇಯಂ ಪರಮ ಮುಖ್ಯಾತಾ ।
ತತ್ರ ಪ್ರಯೋಗಬಾಹುಲ್ಯಂ ಯದಿ ತತ್ಪರತಾ ಕಿಮು ।

ಎಂದು ಅನುವ್ಯಾಖ್ಯಾನದಲ್ಲಿ ಎಲ್ಲಿ ಶಬ್ದ ಪ್ರವೃತ್ತಿ ನಿಮಿತ್ತವು ಹೆಚ್ಚಾಗಿದೆಯೋ ಅಲ್ಲಿ ಅದಕ್ಕೆ ಪರಮ ಮುಖ್ಯವೃತ್ತಿ ಅಲ್ಲಿಯೇ ಬಹಳ ಪ್ರಯೋಗವೂ ಇದ್ದರೆ ಅಲ್ಲಿ ಅದಕ್ಕೆ ಪರಮ ಮುಖ್ಯವೃತ್ತಿಯೆಂದು ಹೇಳುವುದೇನಿದೆ? ಎಂದು (ಯೋಗರೂಢಿಯ) ಪರಮಮುಖ್ಯವೃತ್ತಿಯ ಲಕ್ಷಣ ಹೇಳಿದ್ದಾರೆ. (ಪ್ರವೃತ್ತಿ ಹೇತುವಿನ ಬಾಹುಲ್ಯ ಮತ್ತು ಬಹು ಪ್ರಯೋಗಗಳು ಒಂದು ವಸ್ತುವಿನಲ್ಲಿರುವುದೇ ಪರಮ ಮುಖ್ಯ ವೃತ್ತಿ)

ಇಲ್ಲಿ ಕೇವಲ ಅನವಧಿಕ ಪ್ರವೃತ್ತಿ ನಿಮಿತ್ತಗಳಿಂದಲೇ ಶಬ್ದವು ಪರಮ ಮುಖ್ಯ ವೃತ್ತಿಯುಳ್ಳದ್ದೆಂದು ಸಿದ್ಧವಾಗುತ್ತಿರುವಾಗ ಪ್ರಯೋಗ ಬಾಹುಲ್ಯವನ್ನು ಸೇರಿಸಿದ್ದು ಯಾಕೆ ಎಂದು ಶಂಕಿಸಿ ಸುಧೆಯಲ್ಲಿ ಪ್ರಯೋಗ ಬಾಹುಲ್ಯವನ್ನೂ ಸೇರಿಸಿದ್ದು ಮಹಾಯೋಗ ರೂಢಿಯೆಂಬ ಸಮಾಹಾರ

ಸಿದ್ಧ ಮಾಡಲಿಕ್ಕಾಗಿ ಎಂದು ಉತ್ತರಿಸಿದ್ದಾರೆ. (ಅದೇ ಮಹಾಯೋಗರೂಢಿಯೆಂಬ ಸಮಾಹಾರ)

ಈ ಯೋಗರೂಢಿಯ ಬೇರೆ ವೃತ್ತಿಯೇ ಹೊರತು ಸಮಾಹಾರ ರೂಪವಲ್ಲ. ಹಾಗೆ ಹೇಳಿದರೆ ನ ಓ ಯೋಗರೂಢ್ಯೋಃ ಸಮಾಹಾರೋ ಯೋಗರೂಢಿರಿತಿ ಬ್ರೂಮಃ ಯೇನ ವಿರೋಧಃ ಸ್ಯಾತ್ ಕಿಂ ನಾಮ ಯಥಾ ರೂಢಲಕ್ಷಣಾ ಲಕ್ಷಣಾಮಾತ್ರಾತ್, ರೂಢಗೌಣೀ ಗೌಣೀಮಾತ್ರಾತ್ ಪ್ರಯೋಗ ಪ್ರಾಚುರ್ಯೇಣ ಭಿದ್ಯತೇ, ತಥಾ ಪ್ರವೃತ್ತಿ ನಿಮಿತ್ತಾಪೇಕ್ಷತ್ವಾತ್ ರೂಢಿಮಾತ್ರಾತ್, ಪ್ರಯೋಗಬಾಹುಲ್ಯೇನ ಯೋಗಮಾತ್ರಾಚ್ಚ ಭಿನ್ನಾ ತೃತೀಯೇಯಂ ವೃತ್ತಿಃ ಇತಿ (ಕೇವಲ ಯೋಗ ಮತ್ತು ರೂಢಿಗಳ ಸಮಾಹಾರವೇ ಯೋಗರೂಢಿಯಲ್ಲ, ಕಿಂತು ಯೋಗರೂಢಿಯು ಭಿನ್ನವಾದ ವೃತ್ತ್ಯಂತರವೇ. ರೂಢಲಕ್ಷಣಾ ಕೇವಲ ಲಕ್ಷಣಾಕ್ಕಿಂತ ಭಿನ್ನ ಹಾಗೆಯೇ ರೂಢಗೌಣೀಯು ಕೇವಲ ಗೌಣೀಗಿಂತ ಭಿನ್ನ. ಅದರಂತೆಯೇ ಯೋಗರೂಢಿಯು ಕೇವಲ ರೂಢಿಗಿಂತ ಹಾಗೂ ಕೇವಲ ಯೋಗಕ್ಕಿಂತ ಭಿನ್ನವಾದ ಬೇರೆ ವೃತ್ತಿ) ಎಂಬ ಸುಧಾವಾಕ್ಯದ ವಿರೋಧ ಬರುವುದಲ್ಲವೇ ಎಂಬ ಶಂಕೆ ಬರಬಹುದು. ಆದರೆ ಪಂಕಜಪದದಲ್ಲಿ ಪಂಕಜನಿಕರ್ತೃತ್ವ ಪದ್ಮತ್ವಗಳೆಂಬ ಭಿನ್ನವಾದ ಧರ್ಮಗಳನ್ನಿಟ್ಟುಕೊಂಡು ಪ್ರವೃತ್ತವಾದ ಎರಡು ವೃತ್ತಿಗಳು ಇವೆ. ಆ ಎರಡು ವೃತ್ತಿಗಳ ಸಮಾಹಾರದಿಂದಲೇ ಪಂಕಜ ನಿಕರ್ತೃತ್ವ ಪದ್ಮತ್ವಗಳ ಬೋಧಗಳೆಂಬ ಕಾರ್ಯಗಳನ್ನು ಕೂಡಿಸಲು ಬರುತ್ತಿರಲಾಗಿ ಯೋಗರೂಢಿಯನ್ನು ವೃತ್ತ್ಯಂತರವೆಂದು ಅಂಗೀಕರಿಸಬೇಕಾಗಿಲ್ಲ. ಸೈಂಧವ ಶಬ್ದದಲ್ಲಿ ಹೇಗೆ ಎರಡು ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಶಕ್ತಿಗಳು ಕೂಡಿಕೊಂಡಿವೆಯಾದ್ದರಿಂದ ಅಶ್ವ ಮತ್ತು ಲವಣವೆಂಬ ಎರಡೂ ಅರ್ಥಗಳ ಬೋಧವನ್ನು ಅಂಗೀಕರಿಸುತ್ತೇವೋ ಹಾಗೆಯೇ ಪಂಕಜ ಪದದಲ್ಲೂ ಸಮಾಹಾರದಿಂದಲೇ ಕಾರ್ಯವು ಕೂಡುತ್ತಿರಲಾಗಿ ಸಮಾಹಾರಕ್ಕಿಂತ ಅತಿರಿಕ್ತವಾಗಿ ಯೋಗರೂಢಿಯು ವೃತ್ತ್ಯಂತರವೆಂದು ಅಂಗೀಕರಿಸಬಾರದು. ಆದ್ದರಿಂದ ವಿದ್ವದ್ರೂಢ ಮತ್ತು

ಮಹಾಯೋಗ ಗಳಿಂದ ಪರಮಾತ್ಮವಾಚಕಶಬ್ದಗಳೂ ಮಹಾಯೋಗ ರೂಢಿಯೆಂಬ ಸಮಾಹಾರ ವೃತ್ತಿಯಿಂದ ಕೂಡಿವೆ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೇ ಆನಂದಮಯಾಧಿಕರಣದ ಕೊನೆಯಲ್ಲಿ ಬಹುಲಾತಿಪ್ರಯೋಗತಃ ರೂಢಮಿತ್ಯೇವ ಸಾಧ್ಯಂಸ್ಯಾತ್ (ಯಾವುದೂ ಬಹುಶಃ ಪ್ರಯುಕ್ತವಾ ಗಿದೆಯೋ ಅದು ರೂಢಿ) ಎಂಬ ಅನುವ್ಯಾಖ್ಯಾನದ ವ್ಯಾಖ್ಯಾನ ಸಂದರ್ಭದಲ್ಲಿ ಯೋಗರೂಢದಲ್ಲಿ ಪ್ರಯೋಗ ಬಾಹುಳ್ಯವಿದ್ದರೂ ರೂಢತ್ವವಿಲ್ಲವಾದ್ದರಿಂದ ವ್ಯಭಿಚಾರ ಎಂದು ಆಶಂಕಿಸಿ ಯೋಗರೂಢದಲ್ಲಿ ರೂಢತ್ವವೂ ಇದೆ ಎಂದು ಸಮಾಹಾರವೃತ್ತ್ಯೋ ಹಿ ತಾಃ (ಯೋಗರೂಢಿ ರೂಢೋಪಾಚಾರ ರೂಢಲಕ್ಷಣಾಗಳು ಸಮಾಹಾರವೃತ್ತಿಗಳು) ಎಂಬ ವಾಕ್ಯದಿಂದ ಸುಧಾಕಾರರೇ ಯೋಗರೂಢಿಯನ್ನು ಸಮಾಹಾರವೃತ್ತಿ ಯೆಂದಂಗೀಕರಿಸಿದ್ದಾರೆ.

ಯೋಗರೂಢಿಯನ್ನು ಬೇರೆಯೇ ವೃತ್ತಿ ಎಂದು ಹೇಳುವ ಭಿನ್ನಾ ತೃತೀಯೇಯಂ ವೃತ್ತಿಃ ಎಂಬ ಸುಧಾವಾಕ್ಯದ ವಿರೋಧ ಪರಿಹಾರ ಮಾರ್ಗ ಹೀಗಿದೆ.

ಭಿನ್ನವಾದ ವೃತ್ತ್ಯಂತರವೆಂದು ಹೇಳಿದ್ದು ಅಭ್ಯುಪಗಮವಾದ. ಪ್ರಯೋಗ ಮಾತ್ರ ಬಾಹುಲ್ಯಂ ರೂಢಿರಿತ್ಯಭಿಧೀಯತೇ (ಪ್ರಯೋಗಮಾತ್ರ ಎಲ್ಲ ಬಹಳವಾಗಿರುತ್ತದೋ ಅಲ್ಲಿ ಆ ಶಬ್ದಕ್ಕೆ ರೂಢಿ) ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ರೂಢಿಯ ಲಕ್ಷಣದಲ್ಲಿ ಬಾಹುಲ್ಯ ಶಬ್ದವಿದೆ. ಈ ಶಬ್ದಕ್ಕೆ ಪ್ರಯೋಜನವನ್ನು ತೋರಿಸುವುದೇ ಈ ಅಭ್ಯುಪಗಮವಾದದ ಪ್ರಯೋಜನ.

ಯೋಗರೂಢಿಯೆಂದರೆ ಯೋಗ ಹಾಗೂ ರೂಢಿಯ ಸಮಾಹಾರ. ಪ್ರವೃತ್ತಿ ಹೇತುವಿನ ಬಾಹುಲ್ಯವೇ ಮಹಾಯೋಗ ಎಂದು ಹಿಂದೆ ಹೇಳಲ್ಪಟ್ಟ ಮಹಾಯೋಗ ಹಾಗೂ ಪ್ರಯೋಗ ಬಾಹುಲ್ಯವೇ ರೂಢಿಯೆಂದು ಹೇಳಲ್ಪಟ್ಟ ರೂಢಿ ಇವೆರಡರ ಸಮಾಹಾರವೆ ಯೋಗರೂಢಿ. ಈ ಯೋಗರೂಢಿಯಲ್ಲಿ ಪ್ರಯೋಗ ಬಾಹುಲ್ಯವೂ ಇರುವುದರಿಂದ ಇದು ಪ್ರವೃತ್ತಿ ನಿಮಿತ್ತಾಪೇಕ್ಷವಾದ ಕೇವಲ ಯೋಗಕ್ಕಿಂತ ಭಿನ್ನ ಎಂದು ತಿಳಿಸಲು

ರೂಢಿ ಲಕ್ಷಣದಲ್ಲಿ ಬಾಹುಲ್ಯ ಪದವನ್ನು ಹಾಕಿದ್ದಾರೆ. ಹೀಗೆ ಬಾಹುಲ್ಯ ಪದಕ್ಕೆ ಪ್ರಯೋಜನವನ್ನು ತೋರಿಸುವುದೇ ಬೇರೆ ವೃತ್ತಿಯೆಂದು ಅಂಗೀಕಾರದ ಪ್ರಯೋಜನ. ಯೋಗರೂಢಿಯನ್ನಂಗೀಕರಿಸದಿದ್ದರೆ ಬಾಹುಲ್ಯ ಶಬ್ದಕ್ಕೆ ಪ್ರಯೋಜನವು ಸಿದ್ಧಿಸುತ್ತಿರಲಿಲ್ಲ. ಪ್ರಯೋಗ ಮಾತ್ರಂ ರೂಢಿಃ ಎಂದಷ್ಟೇ ಹೇಳಿದ್ದರೂ ಕೇವಲ ರೂಢಿಯು ಯೋಗಕ್ಕಿಂತ ಭಿನ್ನವೆಂದು ಪ್ರಯೋಗಮಾತ್ರಂ. ಎಂಬಲ್ಲಿನ ಮಾತ್ರ ಶಬ್ದದಿಂದಲೇ ಗೊತ್ತಾಗುತ್ತದೆ. ಆದ್ದರಿಂದ ಯೋಗ ವ್ಯಾವೃತ್ತಿಗಾಗಿ ಬಾಹುಲ್ಯ ಪದ ಬೇಕಾಗಿಲ್ಲ. ಆದ್ದರಿಂದ ಯೋಗರೂಢಿಯನ್ನಂಗೀಕರಿಸಿದಾಗಲೇ ಯೋಗ ರೂಢಿಯು ಕೇವಲ ಯೋಗಕ್ಕಿಂತ ಭಿನ್ನವೆಂದು ತೋರಿಸಲು ಬಾಹುಲ್ಯ ಪದದ ಸಾರ್ಥಕ್ಯ ಸಿದ್ಧವಾಗುತ್ತದೆ. ಹೀಗೆ ಬಾಹುಲ್ಯ ಪದಕ್ಕೆ ಪ್ರಯೋಜನ ತೋರಿಸಲು ಯೋಗ ರೂಢಿಯು ಭಿನ್ನವೆಂದು ಅಂಗೀಕಾರ ಮೊದಲಾಗಿದೆ. (ವಾಸ್ತವಿಕವಾಗಿ ಅದು ಭಿನ್ನವಲ್ಲ)

ಅಥವಾ ಯೋಗರೂಢಿಗಳು ಒಂದೇ ಶಬ್ದದಲ್ಲಿದ್ದರೂ ಒಂದೇ ಧರ್ಮದಲ್ಲಿಲ್ಲ. ಪಂಕಜನಿಕರ್ತೃತ್ವದಲ್ಲಿ ಯೋಗವಿದೆ. ಪದ್ಮತ್ವದಲ್ಲಿ ರೂಢಿಯಿದೆ. ಆದ್ದರಿಂದ ಒಂದೇ ಧರ್ಮದಲ್ಲಿ ಈ ಯೋಗರೂಢಿಗಳಿಗೆ ಸಮಾಹಾರವಿಲ್ಲವೆಂಬ ಅಭಿಪ್ರಾಯದಿಂದ ಈ ಯೋಗ ರೂಢಿಯು ಸಮಾಹಾರವಲ್ಲ, ಬೇರೆ ವೃತ್ತಿಯೇ ಎಂದು ಹೇಳಿದ್ದಾರೆ.

ಆದ್ದರಿಂದ ಯೋಗರೂಡಿಯು ವೃತ್ತ್ಯಂತರವೆಂದು ಹೇಳಿದ್ದು ಕೇವಲ ಅಭ್ಯುಪಗಮವಾದ್ದರಿಂದ ಯಾವುದೇ ದೋಷವಿಲ್ಲ. ಇದನ್ನೆಲ್ಲವನ್ನೂ ತರ್ಕತಾಂಡವದಲ್ಲಿ ಯೋಗರೂಢಿ ಸಮರ್ಥನವಾದದಲ್ಲಿ ನಿರೂಪಿಸಲಾಗಿದೆ.

**ಗೌಣೀ ವೃತ್ತಿಯ ಲಕ್ಷಣ**

''ಪ್ರಯೋಗಯುಕ್ತಸಾದೃಶ್ಯಂ ಸಂಬಂಧೋ ವಾಪ್ಯಮುಖ್ಯತ:। ವೃತ್ತಿಹೇತುರಿತಿ ಜ್ಞೇಯ: '' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ಸುಧೆಯಲ್ಲಿ ಗೌಣೀ ವೃತ್ತಿಯ ಲಕ್ಷಣವನ್ನು ಹೀಗೆ ಹೇಳಲಾಗಿದೆ. 'ಯಸ್ಯ ಶಬ್ದಸ್ಯ ಯತ್ರಾರ್ಥೇ ಪ್ರಯೋಗ: = ಸಾಮರ್ಥ್ಯಂ ತಸ್ಯ ಪ್ರವೃತ್ತಿ ನಿಮಿತ್ತಾತಿರಿಕ್ತಂ ತತ್ಸಾದೃಶ್ಯಂ ನಿಮಿತ್ತೀಕೃತ್ಯ ಅನ್ಯತ್ರ ವೃತ್ತಿ: ಗೌಣೀ' (ಯಾವ

ಶಬ್ದಕ್ಕೆ ಯಾವ ಅರ್ಥವನ್ನು ಹೇಳುವ ಸಾಮರ್ಥ್ಯವಿದೆಯೋ ಹಾಗೂ ಆ ಶಬ್ದವನ್ನು ಯಾವ ಅರ್ಥದಲ್ಲಿ ಪ್ರಯೋಗಮಾಡಿರುತ್ತಾರೋ ಆ ಅರ್ಥವನ್ನು ಹೇಳುವುದಕ್ಕೆ ನಿಮಿತ್ತ (ಪ್ರವೃತ್ತಿ ನಿಮಿತ್ತ) ವಾದ ಧರ್ಮಕ್ಕಿಂತ ಬೇರೆಯಾದ ಸಾದೃಶ್ಯವನ್ನು ನಿಮಿತ್ತವಾಗಿಟ್ಟುಕೊಂಡು ಆ ಶಬ್ದದ ಮೊದಲಿನ ಅರ್ಥಕ್ಕಿಂತ ಬೇರೆಯೇ ಆದ ಮತ್ತೊಂದು ಅರ್ಥದಲ್ಲಿ ಪ್ರಯೋಗವೇ ಗೌಣಪ್ರಯೋಗ, ಆ ಅನ್ಯಾರ್ಥವಾಚಕತ್ವವೇ ಗೌಣೀ ವೃತ್ತಿ.)

ಇದಕ್ಕೆ ಕೃತ್ಯಗಳನ್ನು ಹೀಗೆ ತಿಳಿಯಬೇಕು. ಸುಧಾದಲ್ಲಿ ಇಷ್ಟೆಲ್ಲ ಹೇಳಿದ್ದರೂ 'ಯಸ್ಯ ಶಬ್ದಸ್ಯ ಯಃ ಶಕ್ಯೋಽರ್ಥಃ ತಸ್ಯ ತತ್‌ಸಾದೃಶ್ಯ ನಿಮಿತ್ತಾ ವೃತ್ತಿಃ ಗೌಣೀ' ಎಂದಷ್ಟೇ ಲಕ್ಷಣವಾಕ್ಯವಾಗಿದೆ. ಇದರ ಅರ್ಥ 'ಯಾವ ಶಬ್ದಕ್ಕೆ ಯಾವುದು ಶಕ್ಯಾರ್ಥವೋ ಆ ಶಕ್ಯಾರ್ಥದ ಸಾದೃಶ್ಯವನ್ನು ನಿಮಿತ್ತವನ್ನಾಗಿಟ್ಟುಕೊಂಡು (ಬೇರೆ) ಅರ್ಥದ ವಾಚಕತ್ವವೇ ಗೌಣೀ ವೃತ್ತಿ' ಎಂದಾಗುತ್ತದೆ. ಇದರಲ್ಲಿ ಸುಧಾದಲ್ಲಿ ಹೇಳಿದ 'ಪ್ರವೃತ್ತಿನಿಮಿತ್ತಾತಿರಿಕ್ತಂ' ಎಂಬುದು ಸೇರಿಲ್ಲ. ಅದು ಲಕ್ಷಣಾಂತರ್ಗತವಾಗದೇ ಕೇವಲ ಸ್ವರೂಪವನ್ನು ತಿಳಿಸಲು ಬಳಸಿದ ಶಬ್ದವಾಗಿದೆ. ಏಕೆಂದರೆ ಮುಂದೆ ಲಕ್ಷಣಾದ ಲಕ್ಷಣ ಹೇಳುವಾಗ ಸುಧಾಕಾರರೇ ಪ್ರವೃತ್ತಿ ನಿಮಿತ್ತಾತಿರಿಕ್ತಂ ಎಂಬ ಶಬ್ದವನ್ನು ಬಳಸಿಲ್ಲ. ಆದ್ದರಿಂದ ಲಕ್ಷಣಾಲಕ್ಷಣದಂತೆ ಗೌಣೀ ಲಕ್ಷಣದಲ್ಲೂ ಆ ಶಬ್ದವು ಸೇರುವುದಿಲ್ಲ.

'ಇತಿ ವೃತ್ತತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೆ' (ಶಕ್ಯಾರ್ಥದಲ್ಲಾದರೂ ಶಕ್ತಿಜ್ಞಾನವಾಗುವುದು ಸಾದೃಶ್ಯದಿಂದಲೇ) ಎಂಬ ಅನುವ್ಯಾಖ್ಯಾನದ ಪ್ರಕಾರ ಶಕ್ತಿಯೂ ಸಾದೃಶ್ಯನಿಮಿತ್ತಕವೇ ಆಗಿದೆ. ಆದ್ದರಿಂದ 'ತತ್‌ಸಾದೃಶ್ಯನಿಮಿತ್ತಾ ವೃತ್ತಿರ್ಗೌಣೀ' ಎಂದಷ್ಟೇ ಹೇಳಿದರೆ ಆ ಶಕ್ತಿವೃತ್ತಿಯಲ್ಲೂ ಗೌಣೀವೃತ್ತಿಯ ಲಕ್ಷಣವು ಬರುತ್ತದೆ. ಆದ್ದರಿಂದ ಅತಿವ್ಯಾಪ್ತಿ. ಅದನ್ನು ಪರಿಹರಿಸಲಿಕ್ಕಾಗಿ 'ಪ್ರವೃತ್ತಿ ನಿಮಿತ್ತಾತಿರಿಕ್ತಂ' ಎಂಬ ವಿಶೇಷಣವನ್ನು ಕೊಡಬೇಕಲ್ಲವೆ? ಎಂಬ ಪ್ರಶ್ನೆ ಸರಿಯಲ್ಲ.

ಏಕೆಂದರೆ ಶಬ್ದಕ್ಕೆ ಒಂದು ಅರ್ಥದಲ್ಲಿ ಶಕ್ತಿ ಗ್ರಹಣವಾಗುವಾಗ ಸಾದೃಶ್ಯವು ಸ್ವರೂಪಸತ್ತಾಗಿ (ಜ್ಞಾತವಾಗಿ ಅಲ್ಲ) ಕಾರಣವಾಗಿದ್ದರೂ, ಆ ಶಬ್ದದ ಶಕ್ತಿಗೆ ಮುಖ್ಯ ನಿಮಿತ್ತವಾದ ಜ್ಞಾತಕಾರಣ ಗೋತ್ವಾದಿಗಳ ನಿಮಿತ್ತತಾದಲ್ಲಿ ಘಟಕವಾಗಿ ಈ ಸಾದೃಶ್ಯವು ನಿಮಿತ್ತವಾಗಿದೆ. ಅಷ್ಟೇ ಹೊರತು ಸ್ವಯಂ ನಿಮಿತ್ತವಾಗಿಲ್ಲ. ಶಕ್ತಿಯೂ ಕೂಡ ಗೌಣೀಯಂತೆ ಸಾದೃಶ್ಯವನ್ನೂ ನಿಮಿತ್ತೀಕರಿಸಿಕೊಂಡು ಹೊರಟಿದ್ದರೆ, 'ಸಿಂಹೋ ದೇವದತ್ತ:' ಎಂಬ ಗೌಣ ಪ್ರಯೋಗದಿಂದ ಸಿಂಹಸದೃಶನಾದವನು ದೇವದತ್ತ ಎಂಬ ಅರ್ಥವಾಗುವಂತೆ ಶಕ್ತಿ ವೃತ್ತಿಯ ಸ್ಥಳದಲ್ಲೂ 'ಅಯಂ ಗೌಃ' (ಇದು ಆಕಳು) ಎಂಬಲ್ಲಿ ಇದು ಆಕಳ ಸದೃಶವಾಗಿದೆ ಎಂಬ ಅರ್ಥವಾಗಬೇಕಾಗಿತ್ತು. ಆದ್ದರಿಂದ ಶಕ್ತಿಯಲ್ಲಿ ಸಾದೃಶ್ಯವು ನಿಮಿತ್ತತಾಘಟಕವೇ ಹೊರತು ಸ್ವಯಂ ಮುಖ್ಯ ನಿಮಿತ್ತವಲ್ಲ ಎಂದು ಅಂಗೀಕರಿಸಬೇಕು. ಆದ್ದರಿಂದ ಶಕ್ತಿಯು ಸಾದೃಶ್ಯನಿಮಿತ್ತಕವಲ್ಲವಾದ್ದರಿಂದ ಅದರಲ್ಲಿ (ಪರಿಮಳದಲ್ಲಿ ಹೇಳಿದ) ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ. ಆದ್ದರಿಂದ 'ಪ್ರವೃತ್ತಿ ನಿಮಿತ್ತಾತಿರಿಕ್ತಂ' ಎಂಬುದನ್ನು ಲಕ್ಷಣದಲ್ಲಿ ಸೇರಿಸಬೇಕಾಗಿಲ್ಲ.

ಸಾದೃಶ್ಯವು ಮುಖ್ಯವಾದ ನಿಮಿತ್ತವಲ್ಲವಾದ್ದರಿಂದಲೇ 'ಸಮಯ ಪ್ರತಿಪತ್ತೌ ಸಾದೃಶ್ಯ ಮುಪಧಾನಂ' (ಶಕ್ತಿಗ್ರಹಣಕ್ಕೆ ಸಾದೃಶ್ಯವು ಆಲಂಬನವಾಗಿದೆ) ಎಂಬ ಪ್ರಮಾಣ ಪದ್ಧತಿಯಲ್ಲೂ 'ವೃತ್ತಶ್ಚ್ರಿ: ಸಾದೃಶ್ಯೇನೈವ ಗಮ್ಯತೇ' ಎಂಬ ಅನುವ್ಯಾಖ್ಯಾನದಲ್ಲೂ ಹಾಗೇ ಹೇಳಲಾಗಿದೆ.

ಹಾಗೆಯೇ ಯಾವ ಶಬ್ದಕ್ಕೆ ಯಾವ ಅರ್ಥವಾಚಕತ್ವವಿದೆಯೋ ಆ ಅರ್ಥದ ಸಬಂಧವನ್ನು ನಿಮಿತ್ತವನ್ನಾಗಿಟ್ಟುಕೊಂಡು ಬೇರೆ ಅರ್ಥದ ವಾಚಕತ್ವವೇ ಲಕ್ಷಣಾ ಎಂದು ಲಕ್ಷಣಾದ ಲಕ್ಷಣವೂ ಕೂಡ ಸುಧಾದಲ್ಲಿ ನಿರೂಪಿತವಾಗಿದೆ

**ಕಾವ್ಯಪ್ರಕಾಶದ ಲಕ್ಷಣಾ ಲಕ್ಷಣ**

ಮುಖ್ಯಾರ್ಥಬಾಧೇ ತದ್ಯೋಗೇ
ರೂಢಿತೋಽಥ ಪ್ರಯೋಜನಾತ್।
ಅನ್ಯಾರ್ಥೋ ಲಕ್ಷ್ಯತೇ ಯತ್ ಸಾ
ಲಕ್ಷಣಾಽರೋಪಿತಾ ಕ್ರಿಯಾ ..

ಎಂದು ಕಾವ್ಯಪ್ರಕಾಶವೆಂಬ ಆಲಂಕಾರಿಕರ ಗ್ರಂಥದಲ್ಲ ಲಕ್ಷಣಾ ವೃತ್ತಿಯಿಂದ ಶಬ್ದವನ್ನು ಪ್ರಯೋಗಿಸಲು ಬೇಕಾದ ಕಾರಣಗಳನ್ನು ಹೇಳಿದ್ದಾರೆ.

(ಈ ಶ್ಲೋಕದ ಸಾಮಾನ್ಯಾರ್ಥ - ಶಬ್ದದ ಮುಖ್ಯಾರ್ಥವನ್ನು ಇಟ್ಟುಕೊಳ್ಳಲು ಬರದಿರುವಾಗ, ಮುಖ್ಯಾರ್ಥದ ಸಂಬಂಧವನ್ನಿಟ್ಟುಕೊಂಡು ರೂಢಿಯಿಂದ ಅಥವಾ ಯಾವುದಾದರೂ ಪ್ರಯೋಜನದ ಉದ್ದೇಶದಿಂದ ಬೇರೆ ಅರ್ಥದಲ್ಲಿ ಶಬ್ದವನ್ನು ಪ್ರಯೋಗಿಸುವುದೇ ಲಕ್ಷಣಾ)

ಇಲ್ಲಿ ಮುಖ್ಯಾರ್ಥಬಾಧೇ ತದ್ಯೋಗೇ ಎಂಬಲ್ಲಿರುವ ಎರಡೂ ಸಪ್ತಮೀಗಳಿಗೆ ನಿಮಿತ್ತವೆಂದರ್ಥ ರೂಢಿಮೂಲಕ ಲಕ್ಷಣಾ ವೃತ್ತಿಯಿಂದ ಪ್ರಯೋಗಕ್ಕೆ ಮಂಚಾಃ ಕ್ರೋಶಂತಿ ಎಂಬುದು ಉದಾಹರಣೆ (ಮಂಚಗಳು ಅಳುತ್ತವೆ ಎಂದು ಇದರ ಅರ್ಥ. ಆದರೆ ಜಡವಾದ ಮಂಚಗಳು ಅಳುವುದು ಸಾಧ್ಯವಿಲ್ಲ. ಆದ್ದರಿಂದ ಮಂಚದಲ್ಲಿರುವ ಕೂಸುಗಳು ಅಳುತ್ತವೆ ಎಂದು ಅರ್ಥವಾಗುತ್ತದೆ) ಪ್ರಯೋಜನದ ಮೂಲಕ ಲಕ್ಷಣಕ್ಕೆ ಗಂಗಾಯಾಂ ಘೋಷಃ ಎಂಬುದು ಉದಾಹರಣೆ. (ಇಲ್ಲಿ ಗಂಗೆಯಲ್ಲಿ ಹಳ್ಳಿಯಿರುವುದು ಅಸಂಭಾವಿತ. ಆದ್ದರಿಂದ ಗಂಗಾತೀರದಲ್ಲಿ ಹಳ್ಳಿಯಿದೆಯೆಂದು ಅರ್ಥವಾಗುತ್ತದೆ) ಗಂಗಾತೀರದಲ್ಲಿರುವ ಈ ಹಳ್ಳಿಯು ಅತ್ಯಂತ ಪವಿತ್ರವಾಗಿದೆ. ಹಾಗೂ ಗಂಗೆಗೆ ಅತ್ಯಂತ ಸಮೀಪದಲ್ಲಿದೆ ಎಂಬುದನ್ನು ತಿಳಿಸಲು ಗಂಗಾಯಾಂ ಘೋಷಃ ಎಂದು ಪ್ರಯೋಗಿಸಿದ್ದಾರೆ.

ಅನ್ಯಾರ್ಥೋ ಲಕ್ಷ್ಯತೇ ಎಂಬ ಶ್ಲೋಕದ ಭಾಗಕ್ಕೆ ಯತ್ ಯಾವ ವ್ಯಾಪಾರದಿಂದ ಅನ್ಯಾರ್ಥಃ-ಅಮುಖ್ಯಾರ್ಥವು ಲಕ್ಷ್ಯತೇ - ತಿಳಿಯಲ್ಪಡು

ತ್ತದೋ ಸಾ ಆರೋಪಿತಾ ಕ್ರಿಯಾ - ಅಂತಹ ಆರೋಪಿತ ಶಬ್ದ ವ್ಯಾಪಾರವು ಲಕ್ಷಣಾ-ಲಕ್ಷಣಾವೃತ್ತಿಯೆಂದು ಅರ್ಥ. ಶಬ್ದವ್ಯಾಪಾರವು ಆರೋಪಿತ ವೆಂದರೆ ಅಮುಖ್ಯಾರ್ಥ ನಿಷ್ಠವೆಂದರ್ಥ.

ಗೌಣೀವೃತ್ತಿಯಲ್ಲೂ ಮುಖ್ಯಾರ್ಥಬಾಧ- ತದ್ಯೋಗ-ಪ್ರಯೋ ಜನಗಳೆಂಬ ಮೂರು ಕಾರಣಗಳಿವೆ ಎಂಬ ಪಕ್ಷದಲ್ಲಿ ತದ್ಯೋಗ ವೆಂಬುದನ್ನು ತೆಗೆದು ಅದರ ಸ್ಥಾನದಲ್ಲಿ ತತ್ಸಾದೃಶ್ಯ ಪದವನ್ನಿಟ್ಟು ಕೊಳ್ಳಬೇಕು. ಮತ್ತು ಲಕ್ಷಣಾ ಪದವನ್ನು ತೆಗೆದು ಅದರ ಸ್ಥಾನದಲ್ಲಿ ಗೌಣೀ ಪದವನ್ನು ಹಾಕಬೇಕು. ಉಳಿದದ್ದೆಲ್ಲವೂ ಗೌಣೀ ವೃತ್ತಿಯಲ್ಲೂ ಸಮಾನವೇ.

ಈ ಶ್ಲೋಕದಲ್ಲಿ ಮುಖ್ಯಾರ್ಥಬಾಧ-ತದ್ಯೋಗ- ಪ್ರಯೋಜನ ಗಳೆಂದು ಮೂರೇ ಕಾರಣಗಳನ್ನು ಹೇಳಲಾಗಿದೆ. ರೂಢಿಯೆಂಬುದು ರೂಢಲಕ್ಷಣಾ ಎಂಬ ಲಕ್ಷಣಾ ಪ್ರಭೇದವಾದ್ದರಿಂದ ಕಾರಣವೆನಿಸುವುದಿಲ್ಲ ಮತ್ತು ಎಲ್ಲ ಕಡೆ ಇರುವುದಿಲ್ಲ. ಆದ್ದರಿಂದ ಮೂರೇ ಕಾರಣಗಳು.

ಅವುಗಳಲ್ಲಿ ತದ್ಯೋಗವೆಂಬ ಕಾರಣವನ್ನು ದ್ವೈತಸಿದ್ಧಾಂತದಲ್ಲೂ ಲಕ್ಷಣಾ ಕಾರಣವೆಂದು ಒಪ್ಪಲಾಗಿದೆ. ಮುಖ್ಯಾರ್ಥಬಾಧ ಮತ್ತು ಪ್ರಯೋಜನಗಳು ಕಾರಣವಲ್ಲವೆಂದು 'ಪೂರ್ವಾಯೋಗೇಽಪರಗ್ರಹಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.

ಸುಧಾದಲ್ಲಿ ಅದರ ವಿವರಣೆ ಹೀಗಿದೆ

ಶಬ್ದವನ್ನು ಪ್ರಯೋಗ ಮಾಡುವವನು ಈ ಶಬ್ದವು ಮುಖ್ಯಾರ್ಥವನ್ನು ಹೇಳುವುದಿಲ್ಲ ಎಂದು ತಿಳಿದು ಆ ಲಾಕ್ಷಣಿಕ ಪದವನ್ನು ಪ್ರಯೋಗ ಮಾಡಿರುವುದಿಲ್ಲ. ಹೊರತು ಶಬ್ದ ಪ್ರಯೋಗ ಮಾಡಿದ ಮೇಲೆ ಅದನ್ನು ಕೇಳಿದ ಶ್ರೋತೃವು ಆ ಶಬ್ದದ ಮುಖ್ಯಾರ್ಥವನ್ನು ತಿಳಿದು ಈ ಶಬ್ದಕ್ಕೆ ಪ್ರಕೃತ ಸಂದರ್ಭದಲ್ಲಿ ಮುಖ್ಯಾರ್ಥವು ಯುಕ್ತವಾಗುವುದಿಲ್ಲ. ಎಂದು ಆಲೋಚಿಸುತ್ತಾನೆ. ನಂತರ ಆ ಶಬ್ದಕ್ಕೆ ಅಮುಖ್ಯವಾದ ಅರ್ಥವನ್ನು ಇಟ್ಟುಕೊಳ್ಳುತ್ತಾನೆ. ಆದ್ದರಿಂದ ಪ್ರಯೋಗೋತ್ತರ ಕಾಲೀನವಾದ

ಮುಖ್ಯಾರ್ಥಾನುಪಪತ್ತಿಪ್ರತಿಸಂಧಾನವು ಲಾಕ್ಷಣಿಕ ಶಬ್ದ ಪ್ರಯೋಗಕ್ಕೆ ಕಾರಣವಾಗುವುದಿಲ್ಲ.

ಶಬ್ದಪ್ರಯೋಗವಾದ ಮೇಲೆಯೇ ಇಲ್ಲಿ ಅಮುಖ್ಯವಾದ ಅರ್ಥದಲ್ಲಿ ಈ ಶಬ್ದ ಪ್ರಯೋಗ ಮಾಡಿರುವುದಕ್ಕೆ ಏನಾದರೂ ಪ್ರಯೋಜನವಿರಬೇಕೆಂದು ತಿಳಿಯುವುದರಿಂದ ಪ್ರಯೋಜನವೂ ಶಬ್ದ ಪ್ರಯೋಗಕ್ಕೆ ಕಾರಣವಾಗುವುದಿಲ್ಲ. ಆದ್ದರಿಂದ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಮುಖ್ಯಾರ್ಥ ಸಂಬಂಧವೇ ಲಾಕ್ಷಣಿಕ ಶಬ್ದ ಪ್ರಯೋಗಕ್ಕೆ ಕಾರಣ. ಮುಖ್ಯಾರ್ಥಾನುಪಪತ್ತಿ ಜ್ಞಾನದಿಂದ ಕೇವಲ ತಾತ್ಪರ್ಯನಿಶ್ಚಯ ವಾಗುತ್ತದೆ.

**ಜನಿತಕರ್ತುಃ ಎಂಬ ಸೂತ್ರಾರ್ಥ**

ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಎಂಬ ಸೂತ್ರದಲ್ಲಿ ಬ್ರಹ್ಮನೇ ಜಗತ್ತಿಗೆ ನಿಮಿತ್ತ ಕಾರಣ ಮತ್ತು ಉಪಾದಾನ ಕಾರಣನೆಂದು ಪ್ರತಿಪಾದಿಸಲಾಗಿದೆ ಎಂದು ಅದ್ವೈತಿಗಳ ಮತ. ಅದರ ಸಮರ್ಥನೆಗಾಗಿ ಅವರು 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರವನ್ನು ಕೊಡುತ್ತಾರೆ. ಹುಟ್ಟುವುದಕ್ಕೆ ಉಪಾದಾನ ಕಾರಣವಾದ ವಸ್ತುವು ಅಪಾದಾನ ಸಂಜ್ಞೆಯನ್ನು ಹೊಂದುತ್ತದೆ ಎಂದು ಈ ಸೂತ್ರದ ಅರ್ಥ. ಅಪಾದಾನ ಸಂಜ್ಞೆಯಿದ್ದಾಗ 'ಅಪಾದಾನೇ ಪಂಚಮೀ 'ಎಂಬ ಸೂತ್ರದ ಪ್ರಕಾರ ಪಂಚಮೀ ವಿಭಕ್ತಿ ಬರುತ್ತದೆ. ಯತೋ ವಾ ಇಮಾನಿ ಭೂತಾನಿ ಜಾಯಂತೇ (ಯಾವುದರಿಂದ ಈ ಎಲ್ಲ ಪ್ರಪಂಚ ಹುಟ್ಟಿದೆಯೋ ಅದೇ ಬ್ರಹ್ಮ) ಎಂಬ ಶ್ರುತಿಯಲ್ಲಿ ಈ ಸೂತ್ರದಿಂದಲೇ ಪಂಚಮೀ ಬಂದು ತಸಿಲ್ ಪ್ರತ್ಯಯ ಬಂದಿದೆ ಎಂದು ಅದ್ವೈತಿಗಳ ಮತ.

ಈ ಸೂತ್ರಕ್ಕೆ ಹುಟ್ಟುವುದಕ್ಕೆ ಉಪಾದಾನ (ಪರಿಣಾಮಿ) ಕಾರಣವು ಅಪಾದಾನ ಸಂಜ್ಞೆ ಪಡೆಯುತ್ತದೆ. ಎಂದು ಅದ್ವೈತಿಗಳ ವ್ಯಾಖ್ಯಾನ. ಆದರೆ ಕಾಶಿಕಾ ವೃತ್ತಿ ಮತ್ತು ಪದಮಂಜರೀಗಳಲ್ಲಿ ಹುಟ್ಟುವುದಕ್ಕೆ ಕಾರಣವಾದದ್ದು ಅಪಾದಾನ ಎಂದು ಕೇವಲ ಕಾರಣಕ್ಕೆ ಅಪಾದಾನ ಸಂಜ್ಞೆ ಬರುತ್ತದೆ ಎಂದು ಹೇಳಲಾಗಿದೆ.

ಕೇವಲ ಕಾರಣಕ್ಕೆ ಅಪಾದಾನ ಸಂಜ್ಞೆ ಎಂದು ಹೇಳದಿದ್ದರೆ ಪುತ್ರಾತ್ ಪ್ರಮೋದೋ ಜಾಯತೇ (ಮಗನಿಂದ ಸಂತೋಷವು ಹುಟ್ಟುತ್ತದೆ) ಎಂಬಲ್ಲಿ ಪುತ್ರನು ಪರಿಣಾಮಿಕಾರಣನಲ್ಲವಾದ್ದರಿಂದ (ಅವನು ಕೇವಲ ನಿಮಿತ್ತ ಕಾರಣ) ಪುತ್ರ ಪದದ ಮೇಲೆ ಪಂಚಮೀ ಬರದೇ ಹೋಗಬೇಕಾದೀತು.

ಹೀಗೆ ವ್ಯತ್ಯಾಸವಿದ್ದರೂ ಉಳಿದಂತೆ ಈ ಸೂತ್ರದ ಅರ್ಥ ಇಬ್ಬರ ಮತದಲ್ಲೂ ಸಮಾನವೇ.

ಇಲ್ಲಿ ಜನಿಕರ್ತುಃ ಎಂಬುದಕ್ಕೆ ಜನೇಃ ಕರ್ತಾ - ಜನಿಕರ್ತಾ ಎಂದು ಸಮಾಸ ತೋರಿಸಬೇಕು. ಆದರೆ ಕರ್ತರಿ ಚ ಎಂಬ ಸೂತ್ರದ ಪ್ರಕಾರ ಕರ್ತೃಶಬ್ದದೊಟ್ಟಿಗೆ ಷಷ್ಠೀ ಸಮಾಸವು ನಿಷಿದ್ಧವಾಗಿದೆ. ಆದ್ದರಿಂದ ಸಮಾಸ ಸಾಧ್ಯವಿಲ್ಲ.

ಆದರೂ ಈ ಸೂತ್ರದಲ್ಲಿ ಜನಿಕರ್ತುಃ ಎಂಬ ನಿರ್ದೇಶ ಮಾಡಿದ್ದರಿಂದಲೇ ಸೂತ್ರಕಾರರ ಪ್ರಯೋಗದಿಂದ ಕರ್ತರಿ ಚ ಎಂಬ ನಿಷೇಧವು ಅನಿತ್ಯವೆಂದು ಗೊತ್ತಾಗುತ್ತದೆ ಎಂಬುದನ್ನು ಜನಿಕರ್ತುಃ ಸೂತ್ರದ ಪದಮಂಜರೀ ಮುಂತಾದವುಗಳಲ್ಲಿ ಹೇಳಲಾಗಿದೆ. ಆದ್ದರಿಂದ ಈ ಜನಿಕರ್ತುಃ ಎಂಬ ಪ್ರಯೋಗವು ಸಾಧು.

**ವಿಕಾರ**

೧) ಕಪ್ಪಾದ ಹಣ್ಣು ಕೆಂಪಾಗುವಂತೆ ಅನಿವರ್ತ್ಯವಿಶೇಷಾಪ್ತಿ (ಮತ್ತೆಂದೂ ಪೂರ್ವಾವಸ್ಥೆಗೆ ಹಿಂತಿರುಗದಂತೆ ವಿಶೇಷ ಧರ್ಮಪ್ರಾಪ್ತಿ. ಹಣ್ಣು ಹಣ್ಣಾಗಿಯೇ ಇದ್ದರೂ ಅದರಲ್ಲಿ ಕಪ್ಪುಬಣ್ಣ ಮತ್ತೆ ಬರುವುದಿಲ್ಲ)

೨) ಕುಂಡಲಾಕಾರವಾದ ಬಂಗಾರ ಬಳೆಯಾಗುವಂತೆ ನಿವರ್ತ್ಯ ವಿಶೇಷಾಪ್ತಿ (ಬಂಗಾರವು ಮತ್ತೆ ಕುಂಡಲವಾಗಬಹುದಾದ್ದರಿಂದ ಬದಲಾಗಲು ಅವಕಾಶವಿರುವ ವಿಶೇಷಪ್ರಾಪ್ತಿ)

೩) ಹಾಲು ಮೊಸರಾದಂತೆ ಅನಿವರ್ತ್ಯ ವಿಶೇಷಿ ಪರಿವರ್ತ (ಮತ್ತೆಂದೂ ಪೂರ್ವಾವಸ್ಥೆಗೆ ಮರಳಲಾಗದಂತೆ ಧರ್ಮಿಯೇ ಬದಲಾಗುವುದು)

೪) ರಸಾಯನಗಳಿಂದ ತಾಮ್ರವು ಬೆಳ್ಳಿಯಾಗುವಂತೆ ನಿವರ್ತ್ಯ ವಿಶೇಷಿ ಪರಿವರ್ತ (ಬದಲಾಗಲು ಅವಕಾಶವಿರುವ ಧರ್ಮಿಯ ಬದಲಾಗುವಿಕೆ. ಬೆಳ್ಳಿಯೂ ಮತ್ತೆ ರಸಾಯನಗಳಿಂದ ತಾಮ್ರವಾಗಬಹುದು)

ಹೀಗೆ ನಾಲ್ಕು ರೀತಿಯ ವಿಕಾರಗಳಲ್ಲಿ ಯಾವುದೂ ಕೂಡ ನಿರ್ವಿಕಾರನೆಂದು ಶ್ರುತಿ ಸಿದ್ಧನಾದ ಪರಮಾತ್ಮನಲ್ಲಿ ಬರುವುದಿಲ್ಲವೆಂದು ಆಚಾರ್ಯರು ತಿಳಿಸಿದ್ದಾರೆ. ಆದ್ದರಿಂದ ಭಾಸ್ಕರಾಚಾರ್ಯರ ಪರಿಣಾಮವಾದವೂ, ಮತ್ತು ಶಂಕರಾಚಾರ್ಯರ ಮಾಯಾವಾದವೂ ಸರಿಯಲ್ಲವೆಂದು ಸಿದ್ಧವಾಗುತ್ತದೆ.

ಅದನ್ನು ಹೇಳುವ ಶ್ಲೋಕ ಹೀಗಿದೆ.

ಪರಾಧೀನ ವಿಶೇಷಾಪ್ತಿಃ ಅನಿವರ್ತ್ಯೋಽನ್ಯಥಾಭವಃ ।

ಕ್ಷೀರಾದಿವದ್ವಿಕಾರಃ ಸ್ಯಾತ್ ನೈವ ಸ ಸ್ಯಾದ್ಧರೇಃ ಕ್ವಚಿತ್ ।.

ಈ ಶ್ಲೋಕದಲ್ಲಿ ಪರಾಧೀನ ವಿಶೇಷಾಪ್ತಿ ಮತ್ತು ಅನಿವರ್ತ್ಯ ಅನ್ಯಥಾಭವಗಳೆಂದು ಕೇವಲ ಎರಡೇ ವಿಕಾರಗಳನ್ನು ಹೇಳಿದ್ದರೂ ಉಳಿದೆರಡು ವಿಕಾರಗಳನ್ನೂ ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ವಾಕ್ಯವೇ ಅಸಮಂಜಸವಾಗುತ್ತದೆಂದು ಸುಧಾದಲ್ಲಿ ಜಯತೀರ್ಥರು ಹೇಳಿದ್ದರೆ.

ಅದರ ವಿವರಣೆ ಹೀಗಿದೆ.

ಯಥಾಶ್ರುತವಾಗಿ ಶ್ಲೋಕದ ಪ್ರಕಾರ ಕೇವಲ ಎರಡೇ ಬಗೆಯ ವಿಕಾರಗಳು ವಿವಕ್ಷಿತವಾಗಿದ್ದರೆ ವಿಶೇಷಾಪ್ತಿಗೆ ಪ್ರತಿದ್ವಂದ್ವಿಯಾಗಿ ವಿಶೇಷಿ ಪರಿವರ್ತವನ್ನು ಹೇಳಿ ಹೀಗೆ ವಿಕಾರವು ಎರಡು ವಿಧವೆಂದು ಹೇಳಬೇಕಾಗಿತ್ತು ಅದನ್ನು ಬಿಟ್ಟು ಮೊದಲು ವಿಶೇಷಾಪ್ತಿಯನ್ನು ಹೇಳಿ ನಂತರ ಅನಿವರ್ತ್ಯ ವಿಶೇಷ ಪರಿವರ್ತವನ್ನು ಹೇಳಿದ್ದು (ಅನಿವರ್ತ್ಯ ಎಂಬುದನ್ನು ಸೇರಿಸಿದ್ದು) ಸರಿಯಲ್ಲವೆಂದಾಗುತ್ತಿತ್ತು. ಮತ್ತು ಹಾಲು ಮೊಸರಾಗುವ ಅನಿವರ್ತ್ಯ ವಿಶೇಷಿ ಪರಿವರ್ತದ ಉದಾಹರಣೆಯೂ ಸರಿಯಾಗುತ್ತಿರಲಿಲ್ಲ.

ಅಥವಾ ಅನಿವರ್ತ್ಯ ವಿಶೇಷಿ ಪರಿವರ್ತಕ್ಕೆ ಪ್ರತಿದ್ವಂದ್ವಿಯಾಗಿ ನಿವರ್ತ್ಯ ವಿಶೇಷಿ ಪರಿವರ್ತವನ್ನೇ ಹೇಳಬೇಕಾಗಿದ್ದರಿಂದ ವಿಶೇಷಾಪ್ತಿಯನ್ನು ಹೇಳುವುದು ಯುಕ್ತವಾಗಲಾರದು.

ಆದ್ದರಿಂದ ಹೇಗೆ ಶಬ್ದವು ನಿತ್ಯವೋ ಅನಿತ್ಯವೋ, ಗುಣವೋ, ದ್ರವ್ಯವೋ ಎಂಬ ಸಂಶಯವಿದ್ದಾಗಲೇ ಶಬ್ದವು ನಿತ್ಯ ಮತ್ತು ಗುಣ ಎಂದು ಹೇಳುವುದು (ಅನಿತ್ಯತ್ವ ದ್ರವ್ಯತ್ವಗಳನ್ನು ನಿಷೇಧಿಸುವುದು) ಸರಿಯಾಗುತ್ತದೆ. ಇಲ್ಲದಿದ್ದರೆ ಸರಿಯಾಗುವುದಿಲ್ಲ. ಹಾಗೆಯೇ ವಿಶೇಷಾಪ್ತಿ ವಿಶೇಷಿ ಪರಿವರ್ತಗಳೆಂಬ ವಿಕಾರಗಳು ಪ್ರತ್ಯೇಕ ನಿವರ್ತ್ಯ ಅನಿವರ್ತ್ಯಗಳೆಂದು ವಿಭಕ್ತವಾಗಿದ್ದಾಗಲೇ ಈ ಯಾವ ವಿಕಾರಗಳೂ ಪರಮಾತ್ಮನಲ್ಲಿಲ್ಲವೆಂದು ಹೇಳುವುದು ಯುಕ್ತವಾಗುತ್ತದೆ. ಇಲ್ಲದಿದ್ದರೆ ಅಸಂಗತವಾಗುತ್ತದೆ.

ಅಥವಾ ಕೇವಲ ಈ ಎರಡು ವಿಧ ವಿಕಾರಗಳನ್ನು ಮಾತ್ರ ನಿಷೇಧಿಸಿದರೆ ಉಳಿದ ಎರಡು ಪ್ರಕಾರಗಳನ್ನು ನಿಷೇಧಿಸಲಿಲ್ಲವಾದ್ದರಿಂದ ಆ ವಿಕಾರಗಳು ಪರಮಾತ್ಮನಲ್ಲಿವೆಯೆಂದು ಒಪ್ಪಿದಂತಾಯಿತು. ಹಾಗಾದರೆ ವಿಕಾರವೇ ಇಲ್ಲವೆಂದು ಹೇಳುವ ಉದ್ದೇಶ ಈಡೇರಿದಂತಾಗುವುದಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ (ಸ್ಪಷ್ಟವಾದ್ದರಿಂದ) ಹೇಳದೇ ಇದ್ದರೂ ಅವುಗಳೂ ವಿಷ್ಣುವಿನಲ್ಲಿ ಇಲ್ಲವೆಂದು ಈ ಶ್ಲೋಕಕ್ಕೆ ಅಭಿಪ್ರೇತವೆಂದು ಅಂಗೀಕರಿಸಬೇಕು.

**ಪರಿಣಾಮವಾದ ನಿರಾಸ**

ಸುಧಾದಲ್ಲಿ ಪರಿಣಾಮವಾದವನ್ನು ನಿರಾಕರಿಸಿ 'ಏಷಾದಿಕ್' ಎಂದು ದಿಕ್ಪ್ರದರ್ಶನ ಮಾಡಿದ್ದಾರೆ. ಅದಕ್ಕೆ ಪ್ರಕಾರಾಂತರದಿಂದಲೂ ನಿರಾಕರಿಸಬೇಕು. ಎಂದು ಅರ್ಥ. ಅದರ ಕ್ರಮ ಹೀಗಿದೆ - ಬ್ರಹ್ಮನು ತನ್ನ ಸ್ವರೂಪಕ್ಕೆ ಹಾನಿ ಮಾಡಿಕೊಳ್ಳದೇನೆ ಪರಿಣಾಮ ಹೊಂದುತ್ತಾನೆ ಎಂಬ ಪಕ್ಷದಲ್ಲಿ ಕುಂಡಾಲಾಕಾರದ ಸುವರ್ಣವು ಕಟಕದ (ಬಳೆಯ) ಆಕಾರ ಪಡೆಯುವಂತೆ ಸೂಕ್ಷ್ಮ ರೂಪಿಯಾದ ಬ್ರಹ್ಮನು ಸ್ಥೂಲ ಪ್ರಪಂಚ ರೂಪನಾಗುತ್ತಾನೆ ಎಂದರೆ 'ಅಸ್ಥೂಲಂ' ಎಂಬ ಶ್ರುತಿಯ ವಿರೋಧ

ಬರುತ್ತದೆ. ಅಸ್ಥೂಲಂ ಎಂಬ ಶ್ರುತಿಯು ಸೂಕ್ಷ್ಮತ್ವವನ್ನು ಹೇಳುತ್ತದೆ. ಸೂಕ್ಷ್ಮತ್ವ ಹೋಗದೆ ಸ್ಥೂಲತ್ವ ಬರಲಾರದು ಆದ್ದರಿಂದ ಸ್ಥೂಲಪ್ರಪಂಚವಾಗಿ ಪರಿಣಾಮ ಹೊಂದಿದಾಗ ಸೂಕ್ಷ್ಮತ್ವ ಹೋಗಿದೆಯೆಂದೇ ಅರ್ಥವಾಯಿತು. ಸ್ಥೂಲತ್ವವು ಅಸ್ವಾಭಾವಿಕ ಆದ್ದರಿಂದ ಸ್ಥೂಲತ್ವ ಬಂದಾಗಲೂ ಸೂಕ್ಷ್ಮತ್ವವಿದ್ದೇ ಇರುತ್ತದೆ ಎಂದು ಹೇಳಲು ಬರುವುದಿಲ್ಲ. ಪರಿಣಾಮವಾದಿಗಳು ಬ್ರಹ್ಮನಿಗೆ ಪರಿಣಾಮ ಮೂಲಕ ಸ್ಥೂಲತ್ವವನ್ನು ಹೇಳುತ್ತಾರೆ ಹೊರತು ಇತರ ಕಾರಣದಿಂದಲ್ಲ. ಸ್ಥೂಲತ್ವ ಹೋದಮೇಲೆ ಪುನಃ ಸೂಕ್ಷ್ಮತ್ವವು ಬರುವ ಪ್ರಯುಕ್ತ ಅಸ್ಥೂಲಂ ಎಂಬ ಶ್ರುತಿ ವಿರೋಧವಿಲ್ಲ ಎನ್ನುವುದೂ ಸರಿಯಲ್ಲ. ಆ ಪಕ್ಷದಲ್ಲಿ ಬ್ರಹ್ಮನು ಸೂಕ್ಷ್ಮ ಸ್ಥೂಲ ಉಭಯ ಸ್ವಭಾವವುಳ್ಳವನಾಗುತ್ತಾನೆ. ಶ್ರುತಿಯಾದರೂ ನಿತ್ಯ ಅಸ್ಥೂಲತ್ವವನ್ನು ಹೇಳುವುದರಿಂದ ವಿರೋಧ ಪರಿಹಾರವಾಗುವುದಿಲ್ಲ. ತನ್ನ ಸ್ವರೂಪವನ್ನು ಹಾನಿ ಮಾಡಿಕೊಂಡು ಬ್ರಹ್ಮನು ಪರಿಣಾಮಿಯಾಗುತ್ತಾನೆ ಎನ್ನುವುದಾದರೆ ಸ್ಥಿತಿ ಕಾಲದಲ್ಲಿ ಬ್ರಹ್ಮನೇ ಇಲ್ಲವೆಂದಾಗುತ್ತದೆ.

**ಸ್ವಾಪ್ನ ಪದಾರ್ಥಗಳ ಸತ್ಯತ್ವ ಸಮರ್ಥನೆ ಸಮಂಜಸ**

ಪ್ರಪಂಚವು ಅರ್ಥಕ್ರಿಯಾಕಾರಿಯಾಗಿದ್ದರಿಂದ ಸತ್ಯ ಎಂದು ಆಚಾರ್ಯರು ಸಮರ್ಥನೆ ಮಾಡಿದ್ದಾರೆ. ಇದರ ಮೇಲೆ ಮಿಥ್ಯಾಸರ್ಪದ ಜ್ಞಾನವು ಭಯ ಜನಕವಾದುದರಿಂದ ಅರ್ಥಕ್ರಿಯಾಕಾರಿಯಾದ ಮಾತ್ರದಿಂದ ಸತ್ಯವಾಗ ಬೇಕಿಲ್ಲ. ಎಂದು ಆಕ್ಷೇಪ. ಇದಕ್ಕೆ ಸಮಾಧಾನ - ಮಿಥ್ಯಾಸರ್ಪವು ಭಯಜನಕವಲ್ಲ ಆದರ ಜ್ಞಾನವು ಭಯಜನಕ. ಜ್ಞಾನವಾದರೂ ಸತ್ಯವೇ ಆಗಿದೆ. ಆದ್ದರಿಂದ ವ್ಯಾಪ್ತಿ ಭಂಗವಿಲ್ಲ ಎಂದು. ಇದರ ಮೇಲೆ ಪುನಃ ಶಂಕೆ ಬಂದಿದೆ - ಮಿಥ್ಯಾಸರ್ಪದ ಜ್ಞಾನವು ಭಯಜನಕವಾದರೂ ವಿಷಯವಾದ ಮಿಥ್ಯಾಸರ್ಪಕ್ಕೆ ಜ್ಞಾನದಲ್ಲಿ ಪ್ರವೇಶ ಇದ್ದೇ ಇದೆ. ವಿಷಯಾಂತರ್ಭಾವವಿಲ್ಲದೆ ಜ್ಞಾನಮಾತ್ರವು ಭಯಜನಕ ಎಂದರೆ ಘಟಾದಿಜ್ಞಾನವೂ ಜ್ಞಾನವೇ ಆದ್ದರಿಂದ ಅದು ಭಯಜನಕ ಆಗಬೇಕಾದೀತು.

ಇದಕ್ಕೆ ಸುಧಾದಲ್ಲಿ ಹೀಗೆ ಸಮಾಧಾನವನ್ನು ವಿವರಿಸಿದ್ದಾರೆ - ಜ್ಞಾನದಲ್ಲಿ ವಿಷಯಾಂತರ್ಭಾವವಿಲ್ಲದಿದ್ದರು ಭಿನ್ನಭಿನ್ನ ಸಾಮಗ್ರೀಜನ್ಯ ಜ್ಞಾನದಲ್ಲಿ ಹೇಗೆ ಪರೋಕ್ಷತ್ವ - ಅಪರೋಕ್ಷತ್ವ ಧರ್ಮವು ಇದೆಯೋ ಅದರಂತೆ ಭಿನ್ನ ಭಿನ್ನ ಸಾಮಗ್ರೀಜನ್ಯಅಪರೋಕ್ಷಜ್ಞಾನದಲ್ಲಿಯೂ ಒಂದೊಂದು ಅಸಾಧಾರಣ ಧರ್ಮವಿರುತ್ತದೆ. ಆದ್ದರಿಂದ ಅದು ವಿಷಯಾಂತರ್ಭಾವದಿಂದ ಭಯಜನಕವಲ್ಲ. ಆದ್ದರಿಂದ ಮಿಥ್ಯಾಭೂತಸರ್ಪಕ್ಕೆ ಭಯಜನಕತ್ವವಿಲ್ಲ ಎಂದು.

ಇದರ ಮೇಲೆ ಬರುವ ಆಕ್ಷೇಪ - ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದ: ಓಂ ಎಂಬ ಸೂತ್ರದಲ್ಲಿ ಸ್ವಾಪ್ನ ಪದಾರ್ಥಗಳು ಶುಭಾಶುಭ ಸೂಚಕವಾದ್ದರಿಂದ ಸತ್ಯ ಎಂದಿದ್ದಾರೆ ಆದರೆ ವಿಷಯಾಂತರ್ಭಾವವಿಲ್ಲದೆ ಜ್ಞಾನವು ವ್ಯಾವರ್ತಕ ಎಂದು ಹೇಳಿದ್ದರಿಂದ ಅಲ್ಲಿಯೂ ಕೂಡ ಸ್ವಾಪ್ನ ಪದಾರ್ಥಗಳ ಜ್ಞಾನವೇ ಶುಭಾಶುಭ ಸೂಚಕ ಹೊರತು ಪದಾರ್ಥಗಳಲ್ಲ ಎಂದು ಶಂಕಿಸಲು ಬರುವುದರಿಂದ ಸ್ವಾಪ್ನ ಪದಾರ್ಥಗಳಿಗೆ ಸೂಚಕತ್ವದಿಂದ ಸತ್ಯತ್ವ ಸಮರ್ಥನೆ ಮಾಡಿದ್ದು ಹೇಗೆ ಸಮಂಜಸ ಎಂದು?

ಇದಕ್ಕೆ ಸಮಾಧಾನ ಭಾವದೀಪದಲ್ಲಿ ಹೇಳಲಾಗಿದೆ. ಸ್ವಾಪ್ನ ಪದಾರ್ಥಗಳಿಗೆ ಸೂಚಕತ್ವವೆಂದರೆ ಅದು ಅನುಮಾಪಕತ್ವರೂಪ ವಾದದ್ದು. ಸ್ವಾಪ್ನ ಪದಾರ್ಥಗಳು ಲಿಂಗ ರೂಪಗಳಾಗಿವೆ ಆದ್ದರಿಂದ ಜ್ಞಾತವಾದ ಲಿಂಗವೇ ಅನುಮಾಪಕ ಎಂದು ಸಿದ್ಧಾಂತ ಇರುವುದರಿಂದ ಸ್ವಾಪ್ನ ಪದಾರ್ಥಗಳಿಗೆ ಸೂಚಕತ್ವ ಹೇಳಿದ್ದು ಯುಕ್ತವಾಗಿದೆ. ಭಯಜನಕತ್ವವು ಮಾತ್ರ ಸರ್ಪಜ್ಞಾನಕ್ಕೇ ಹೊರತು ಸರ್ಪಕ್ಕಲ್ಲ. ಪ್ರಮಾಣ ಪದ್ಧತಿಯಲ್ಲಿ ಲಿಂಗ ಜ್ಞಾನಕ್ಕೂ ಅನುಮಾಪಕತ್ವವನ್ನು ಒಪ್ಪಿರುವುದು ಮತ್ತು ನ್ಯಾಯಾಮೃತದಲ್ಲಿ ಸ್ವಾಪ್ನ ಪದಾರ್ಥ ಜ್ಞಾನಕ್ಕೆ ಸೂಚಕತ್ವವನ್ನು ಒಪ್ಪಿರುವುದು ಪರಮತಾನುವಾದರೂಪ ಅಥವಾ ಅಭ್ಯುಪಗಮವಾದ ಎಂದು ತಿಳಿಯಬೇಕು

**ಇತಿ ಶಬ್ದದ ಅನೇಕಾರ್ಥಗಳು**

ಮಾಯಾವಾದಿಗಳ ಪ್ರಕಾರ ಮಣ್ಣೇ ಸತ್ಯ (ಉಳಿದದ್ದೆಲ್ಲ ಮಿಥ್ಯಾ) ಎಂದು ಹೇಳಲು 'ಮೃತ್ತಿ ಕೈವ ಸತ್ಯಂ 'ಎಂದು ವಾಚಾರಂಭಣ ಶ್ರುತಿಯಲ್ಲಿ

ಹೇಳಬೇಕಾಗಿತ್ತು. ಇತಿ ಶಬ್ದಕ್ಕೆ ಅನೇಕ ಅರ್ಥಗಳಿವೆ. ಅದರಲ್ಲಿ ಯಾವುದೂ ಈ ಸಂದರ್ಭದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಮೃತ್ತಿಕೇತ್ಯೇವ ಸತ್ಯಂ ಎಂದು ಶ್ರುತಿಯಲ್ಲಿರುವ ಇತಿ ಶಬ್ದ ವ್ಯರ್ಥವಾಗುತ್ತದೆ ಎಂದು ಅನುವ್ಯಾಖ್ಯಾನ ಸುಧೆಗಳಲ್ಲಿದೆ.

ಇತಿ ಶಬ್ದದ ಅನೇಕ ಅರ್ಥಗಳು ಹೀಗೆ -

೧) ಕೆಲವು ಕಡೆ ಬೇರೆ ಅರ್ಥ ಇಟ್ಟುಕೊಳ್ಳಲಿಕ್ಕಾಗಿ ಇತಿ ಶಬ್ದವಿದೆ. ಉದಾ- 'ನ ವೇತಿ ವಿಭಾಷಾ' ಎಂಬಲ್ಲಿ ಶಬ್ದ ಪ್ರಕರಣದಲ್ಲಿ ನ ವಾ ಶಬ್ದಗಳಿಗೆ ವಿಭಾಷಾ ಸಂಜ್ಞೆಯನ್ನು ತಪ್ಪಿಸಲಿಕ್ಕಾಗಿ ಇತಿ ಶಬ್ದ ಹಾಕಿದ್ದಾರೆ ಆದ್ದರಿಂದ ಶಬ್ದವನ್ನು ಬಿಟ್ಟು ಅರ್ಥವನ್ನು ಇಟ್ಟುಕೊಳ್ಳಬೇಕೆಂದು ಗೊತ್ತಾಗುತ್ತದೆ.

೨) ಇನ್ನು ಕೆಲವು ಕಡೆ ಹೇತು ಅರ್ಥದಲ್ಲಿ ಇತಿ ಶಬ್ದವಿದೆ. - ಉತ್ಸವ ಇತಿ ಗತಃ ಎಂಬಲ್ಲಿ ಉತ್ಸವವೆಂಬ ಕಾರಣದಿಂದ ಹೋದನು ಎಂದು ಪ್ರಯೋಗವಿದೆ.

೩) 'ಏವಂ' ಎಂಬ ಅರ್ಥದಲ್ಲಿ ಇತಿ ಶಬ್ದವಿದೆ. 'ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ' ವಿಕಾರಾರ್ಥಕ ಶಬ್ದವಿದೆಯೆಂಬ ಕಾರಣದಿಂದ ಆನಂದಮಯನು ಬ್ರಹ್ಮನಲ್ಲ ಎಂಬುದು ಸರಿಯಲ್ಲ ಮಯಟ್ ಶಬ್ದ ಪ್ರಾಚುರ್ಯಾರ್ಥಕ. ಎಂಬಲ್ಲಿ 'ಎಂದು 'ಎನ್ನುವ ಅರ್ಥದಲ್ಲಿ ಇವ ಶಬ್ದವಿದೆ.

೪) ಆದಿ ಎಂಬರ್ಥದಲ್ಲಿ ಇತಿ ಶಬ್ದವಿದೆ. ಉದಾ - 'ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೆ '( ಯಾವ ಕಾಮಯಕರ್ಮಿಗಳು ಗ್ರಾಮದಲ್ಲಿ ಯಜ್ಞಾದಿಗಳು, ತಟಾಕಾದಿನಿರ್ಮಾಣ ಮತ್ತು ದಾನ ಮುಂತಾದವುಗಳನ್ನು ಮಾಡುತ್ತಾರೋ) ಎಂಬಲ್ಲಿ ಆದಿ ಶಬ್ದಾರ್ಥದಲ್ಲಿ ಇತಿ ಶಬ್ದ.

೫) ಪ್ರಕಾರಾರ್ಥಕ ಇತಿ ಶಬ್ದ ಉದಾ- ಆತ್ಮೇತ್ಯೇವೋಪಾಸೀತ (ಆತ್ಮನೆಂದು ಬ್ರಹ್ಮನನ್ನು ಉಪಾಸಿಸಬೇಕು) ಎಂಬಲ್ಲಿ ಆತ್ಮತ್ವವೆಂಬ ಪ್ರಕಾರದಿಂದ ಉಪಾಸನೆ ಎಂಬರ್ಥದಲ್ಲಿ ಇತಿ ಶಬ್ದ ಪ್ರಕಾರಾರ್ಥಕ. ಹೀಗೆ ಇತಿ ಶಬ್ದಕ್ಕೆ ಅನೇಕಾರ್ಥಗಳಿವೆ.

## ಮೃತ್ಪಿಂಡಾದಿಗಳ ದೃಷ್ಟಾಂತದ ವಿಶೇಷ

ಉತ ತಮಾದೇಶಮಪ್ರಾಕ್ಷಃ। ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್ ।

೧) ಯಥಾ ಸೊಮ್ಯೈಕೇನ ಮೃತ್ಪಿಂಡೇನ ವಿಜ್ಞಾತೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್

೨) ಯಥಾ ಸೊಮ್ಯೈಕೇನ ಲೋಹಮಣಿನಾ ವಿಜ್ಞಾತೇನ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್

೩) ಯಥಾ ಸೊಮ್ಯೈಕೇನ ನಖನಿಕೃಂತನೇನ ವಿಜ್ಞಾತೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್

ಎಂಬ ಛಾಂದೋಗ್ಯಶ್ರುತಿಯಲ್ಲಿ ಪರಮಾತ್ಮ ಜ್ಞಾನವಾದಾಗ ಉಳಿದ ವಸ್ತುಗಳ ಜ್ಞಾನವಾಗುವುದೆಂದು ಹೇಳಿ ಅದಕ್ಕೆ ಮೂರು ದೃಷ್ಟಾಂತಗಳನ್ನು ತೋರಿಸಲಾಗಿದೆ.

೧) ಒಂದು ಮಣ್ಣಿನ ಮುದ್ದೆಯನ್ನು ನೋಡಿದಾಗ ಎಲ್ಲ ಮಣ್ಣಿನ ವಸ್ತುಗಳ ಜ್ಞಾನವಾಗುತ್ತದೆ. ಇದು ಮೊದಲನೆ ದೃಷ್ಟಾಂತ. ಮಣ್ಣಿನ ಮುದ್ದೆಯನ್ನು ತಿಳಿದಾಗ ಅದರಂತೆ ಇರುವ ಎಲ್ಲ ಮೃಣ್ಮಯ ವಸ್ತುಗಳಜ್ಞಾನವಾಗುವಂತೆ ಪರಮಾತ್ಮನನ್ನು ತಿಳಿದಾಗ ಅವನಂತೆ ಇರುವ (ಸತ್ಯತ್ವಾದಿ ಅಂಶಗಳಲ್ಲಿ ಸಾದೃಶ್ಯ) ಪ್ರಪಂಚ ಜ್ಞಾನವಾಗುತ್ತದೆ. ಆದ್ದರಿಂದ ಇದು ಸಾದೃಶ್ಯವನ್ನಿಟ್ಟುಕೊಂಡು ಹೇಳಿದ ದೃಷ್ಟಾಂತ.

೨) ಬಂಗಾರದ ಜ್ಞಾನವಾದಾಗ ಉಳಿದ ಎಲ್ಲ ವಸ್ತುಗಳ ಜ್ಞಾನವಾದಂತೆ. ಇದು ಎರಡನೇ ದೃಷ್ಟಾಂತ. ಎಲ್ಲ ಲೋಹಗಳಲ್ಲಿ ಬಂಗಾರವೇ ಪ್ರಧಾನ. ಅದನ್ನು ತಿಳಿದಾಗ ಅಪ್ರಧಾನವಾದ ಕಬ್ಬಿಣ ಮುಂತಾದವನ್ನು ತಿಳಿದಂತಾಗುತ್ತದೆ. ಹಾಗೆಯೇ ಪ್ರಧಾನನಾದ ಪರಮಾತ್ಮನ ಜ್ಞಾನದಿಂದ ಅಪ್ರಧಾನವಾದ ಜಗತ್ತಿನ ಜ್ಞಾನವಾಗುತ್ತದೆ. ಆದ್ದರಿಂದ ಇದು ಪ್ರಾಧಾನ್ಯ ಅಂಶದಲ್ಲಿ ದೃಷ್ಟಾಂತ.

೩) ಉಗುರು ಕತ್ತರಿಸುವ ಸಣ್ಣ ಕಬ್ಬಿಣದ ಆಯುಧವನ್ನು ತಿಳಿದಾಗ ಅದರಂತೆ ಇರುವ ಉಳಿದೆಲ್ಲ ಕಬ್ಬಿಣದ ವಸ್ತುಗಳ ಜ್ಞಾನವಾಗುತ್ತದೆ. ಅತ್ಯಂತ ಸಣ್ಣದಾದ ನಖನಿಕೃಂತನದ ಜ್ಞಾನದಿಂದಲೇ ಅದರಂತಿರುವ ಉಳಿದ ಕಬ್ಬಿಣದ ವಸ್ತುಗಳ ಜ್ಞಾನವಾಗುವಾಗ ಅತ್ಯಂತ ಮಹತ್ತಾದ ಪರಮಾತ್ಮನ ಜ್ಞಾನದಿಂದ ಉಳಿದ ಅಲ್ಪವಾದ ಪ್ರಪಂಚದ ಜ್ಞಾನವಾಗುವುದೆಂದು ಹೇಳುವುದೇನಿದೆ? ಎಂದು ಕೈಮುತ್ಯನ್ಯಾಯದಿಂದ ಮೂರನೆ ದೃಷ್ಟಾಂತ ಕೊಡಲಾಗಿದೆ.

(ಪ್ರತ್ಯೇಕ ಸಾಧಿಸಿ ತೋರಿಸಬೇಕಾಗದಿರುವುದೇ ಕೈಮುತ್ಯನ್ಯಾಯ) ಇದನ್ನು ಆಚಾರ್ಯರು ತಮ್ಮ ಛಾಂದೋಗ್ಯಭಾಷ್ಯದಲ್ಲಿ ಮತ್ತು ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿದ್ದಾರೆ.



# ದ್ವಿತೀಯಾಧ್ಯಾಯ

## ದ್ವಿತೀಯಾಧ್ಯಾಯ ಪ್ರಥಮಪಾದ ನ್ಯಾಯಮಾಲಾ

**ಆಪ್ತತಾ ಸಮತಾಽದೃಷ್ಟಿಶ್ರುತಿ ಸಾಮ್ಯಬಲೋದ್ಭವಾಃ**
**ಸರ್ವಾನುಸಾರೋ ಲಘುತಾ ವಿಶೇಷಾದರ್ಶನಾಫಲೇ ।**
**ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ ।**
**ಏತಾ ಏವ ತ್ವತಿಬಲಾಃ ಸಿದ್ಧಾಂತಸ್ಯ ನಿಯಾಮಿಕಾಃ ।**

ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶ ದೋಷಪ್ರಸಂಗಾತ್ ಓಂ ।

ಎಂದು ಪ್ರಾರಂಭವಾಗುವ ಮೊದಲನೆಯ ಸ್ಮೃತ್ಯಧಿಕರಣದ ಪೂರ್ವಪಕ್ಷ ಹೀಗಿದೆ -

ಸರ್ವಜ್ಞರಾದ ರುದ್ರಾದಿಗಳು ರಚಿಸಿದ ಪಾಶುಪತಾದಿ ಸ್ಮೃತಿಗಳು ಪ್ರಮಾಣವೇ. ಅವುಗಳ ವಿರೋಧ ಬರುತ್ತಿರುವುದರಿಂದ ವಿಷ್ಣುವಿನ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ವೇದವಾಕ್ಯಗಳು ಅಪ್ರಮಾಣ. ಆದ್ದರಿಂದ ರುದ್ರಾದಿಗಳೇ ಜಗತ್ಕಾರಣ. ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು ಆಪ್ತತಾ ಎಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ರುದ್ರಾದಿಗಳಲ್ಲಿ ವಿವಕ್ಷಿತಾರ್ಥತತ್ವಜ್ಞಾನ ವಿವಕ್ಷಾದಿರೂಪ ಆಪ್ತತ್ವವಿದೆ. ಆದ್ದರಿಂದ ಅವರ ವಾಕ್ಯಗಳು ಆಪ್ತಿಮೂಲಕ ಮತ್ತು ನಿರ್ದುಷ್ಟವಾದ್ದರಿಂದ ಆಪ್ತಿಮೂಲಕವಲ್ಲದ ವೇದಕ್ಕಿಂತ ಪ್ರಬಲವೆಂದು ಪೂರ್ವಪಕ್ಷಿಗಳ ಅಭಿಪ್ರಾಯ.

ಸಿದ್ಧಾಂತ - ವಿಷ್ಣು ಮುಂತಾದವರಿಂದ ರಚಿಸಲ್ಪಟ್ಟ ಪಾಂಚರಾತ್ರ ಮುಂತಾದ ಸ್ಮೃತಿಗಳೂ ಸಾಕಷ್ಟಿವೆ. ಅವುಗಳೂ ಆಪ್ತಿಮೂಲಕ ಹಾಗೂ ನಿರ್ದುಷ್ಟ ಮತ್ತು ವೇದ ಮೂಲಕವೂ ಆಗಿದೆ. ಆದ್ದರಿಂದ ವೇದ ಮತ್ತು ಆಪ್ತಿ ಉಭಯ ಮೂಲಕವಾದ ಪಾಂಚರಾತ್ರಾದಿ ಸ್ಮೃತಿಗಳೇ ಪ್ರಬಲ. ಈ ಪಾಂಚರಾತ್ರಾದಿಗಳ ವಿರೋಧ ವಿರುವುದರಿಂದ ಪಾಶುಪತಾದಿ ಸ್ಮೃತಿಗಳೇ ಅಪ್ರಮಾಣ. ಆದ್ದರಿಂದ ಪಾಂಚರಾತ್ರಾದಿ ಸ್ಮೃತಿಗಳು ಹಾಗೂ ವೇದಗಳು

ಇವುಗಳೆರಡರಿಂದಲೂ ವಿಷ್ಣುವಿಗೇ ಜಗತ್ಕಾರಣತ್ವಾದಿಗಳಿವೆಯೆಂದು ಸಿದ್ಧವಾಗುತ್ತದೆ. ಇದಕ್ಕೆ ಯಾವುದೂ ವಿರೋಧವಿಲ್ಲ.

ಈ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿಯೂ ಆಪ್ತತ್ವವೇ. (ಈ ಪಾದದ, ಪೂರ್ವಪಕ್ಷ ಯುಕ್ತಿಗಳೇ ಪ್ರಬಲವಾಗಿ ಸಿದ್ಧಾಂತ ಯುಕ್ತಿಗಳಾಗಿವೆ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ)

ಶ್ರುತ್ಯನುಸಾರಿಯಾದ್ದರಿಂದ ವಿಷ್ಣುವಿನ ಆಪ್ತತ್ವವೇ ಮುಖ್ಯವಾದದ್ದೆಂದು ತಿಳಿಯುತ್ತದೆ. ರುದ್ರನಲ್ಲಿ ಅಜ್ಞಾನಾದಿಗಳಿವೆಯೆಂದು ಶ್ರುತಿಸಿದ್ಧವಾಗಿರುವುದರಿಂದ ಇಂತಹ ಆಪ್ತತ್ವವಿಲ್ಲ. ಆದ್ದರಿಂದ ವಿಷ್ಣುವಿನಲ್ಲಿ ಮುಖ್ಯವಾದ ಆಪ್ತತ್ವದಿಂದಲೇ ಅವನಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

೨) ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ನ ವಿಲಕ್ಷಣತ್ವಾಧಿಕರಣದ ಪೂರ್ವಪಕ್ಷ.-

ಪಾಶುಪತಾದಿ ಸ್ಮೃತಿಗಳು ಹೇಳಿದ ಕಾರ್ಯಗಳನ್ನು ಮಾಡಿದ ತತ್ ಕ್ಷಣವೇ ಫಲ ಕಾಣದಿರುವುದರಿಂದ ಅವುಗಳು ಅಪ್ರಮಾಣವೆಂದು ಹಿಂದಿನ ಅಧಿಕರಣದಲ್ಲಿ ಹೇಳಲಾಗಿದೆ. ಅದರಂತೆಯೇ ವೇದದಲ್ಲಿ ಮಳೆ ಬರಲಿಕ್ಕಾಗಿ ಮಾಡಬೇಕೆಂದು ಹೇಳಿರುವ ಕಾರೀರಿ ಯಾಗವನ್ನು ಮಾಡಿದಾಗ ತತ್ ಕ್ಷಣದಲ್ಲಿ ಮಳೆ ಬರದಿರುವುದು ಕಂಡಿದೆ. ಹೀಗೆ ಕೆಲವು ವೇದ ವಾಕ್ಯಗಳು ಅಪ್ರಮಾಣವಾದರೆ ಅವುಗಳ ದೃಷ್ಟಾಂತದಿಂದ ಸಮಗ್ರ ವೇದ ವಾಕ್ಯಗಳೂ ಅಪ್ರಮಾಣವೇ. ಹೀಗೆ ಅಪ್ರಮಾಣವಾದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು ಸಮತಾ ಎಂದು ಹೇಳಲ್ಪಟ್ಟಿದೆ. 'ಪಾಶುಪತಾದಿ ಶಾಸ್ತ್ರಗಳಂತೆಯೇ ವೇದವಾಕ್ಯಗಳೂ' (ಆದ್ದರಿಂದ ಅಪ್ರಮಾಣ) ಎಂದು ಅದಕ್ಕೆ ಅರ್ಥ.

ಸಿದ್ಧಾಂತ - ಕಾರ್ಯವನ್ನು ಮಾಡಿದಾಗಲೂ ಫಲ ಬರಲಿಲ್ಲ ವೆಂದಾಕ್ಷಣ ಪಾಶುಪತಾದಿ ಸ್ಮೃತಿಗಳಂತೆ ವೇದವಾಕ್ಯಗಳು ಅಪ್ರಮಾಣ ವಾಗುವುದಿಲ್ಲ. ಯಾವುದೇ ಗ್ರಂಥದಲ್ಲಿ ದೋಷಗಳು ಬರುವುದು ಅದರ

ಕರ್ತೃವಿನಿಂದ. ಆದ್ದರಿಂದ ರುದ್ರಾದಿಗಳಲ್ಲಿರುವ ಯಥಾರ್ಥ ಜ್ಞಾನಾಭಾವದೋಷವು ಪಾಶುಪತಾದಿ ಸ್ಮೃತಿಗಳಲ್ಲಿ ಅಪ್ರಾಮಾಣ್ಯಕ್ಕೆ ಕಾರಣವಾಗಿದೆ. ಆದರೆ ವೇದವು ನಿತ್ಯವಾದ್ದರಿಂದ ಅದರಲ್ಲಿ ಕರ್ತೃವಿನ ದೋಷದಿಂದ ಅಪ್ರಾಮಾಣ್ಯಕ್ಕೆ ಅವಕಾಶವಿಲ್ಲ. ಆದರೂ ವೇದೋಕ್ತ ಕರ್ಮಗಳನ್ನು ಮಾಡಿದಾಗ ಫಲ ಕಾಣದಿರುವುದರಿಂದ ಇದಕ್ಕೆ ಅಪ್ರಾಮಾಣ್ಯವೇ ಬರಬೇಕು. ಪ್ರಾಮಾಣ್ಯವಿರಲು ಹೇಗೆ ಸಾಧ್ಯ? ಎಂದು ಪ್ರಶ್ನೆ ಬರಬಹುದು. ಅದರ ಉತ್ತರ ಇದು.-ಜ್ಞಾನದ ಪ್ರಾಮಾಣ್ಯದ ಜ್ಞಾನವಾಗಲಿಕ್ಕೆ ಯಾವುದೇ ಸಂವಾದದ ಸಹಾಯ ಬೇಕಾಗಿಲ್ಲ. ಜ್ಞಾನ ಪ್ರಾಮಾಣ್ಯವು ಸ್ವತೋಗ್ರಾಹ್ಯ. ಆದ್ದರಿಂದ ವೇದೋಕ್ತ ಕರ್ಮಗಳನ್ನು ಅನುಷ್ಠಾನ ಮಾಡಿದಾಗ ಅದರ ಪ್ರಯೋಜನವಾದಾಗ ಮಾತ್ರ ವೇದವು ಪ್ರಮಾಣವೆನ್ನಲಾಗದು. ವೇದವು ಸ್ವಯಂ ಪ್ರಮಾಣ. ಪಾಶುಪತಾದಿ ಸ್ಮೃತಿಗಳ ಜ್ಞಾನದ ಪ್ರಾಮಾಣ್ಯವು ಸ್ವತೋಗ್ರಾಹ್ಯವೇ ಆದರೂ ಆ ಸ್ಮೃತಿಗಳು ನಿರ್ದೋಷವೆಂದು ನಿಶ್ಚಯವಾಗಿಲ್ಲವಾದ್ದರಿಂದ ಪ್ರಾಮಾಣ್ಯ ಗ್ರಹಣವು ಪ್ರತಿಬದ್ಧವಾಗಿದೆ. ವೇದವು ನಿತ್ಯವಾದ್ದರಿಂದ ನಿರ್ದೋಷತಯಾ ನಿಶ್ಚಿತವಾಗಿದೆ. ಆದ್ದರಿಂದ ವೇದಜನ್ಯಜ್ಞಾನದ ಪ್ರಾಮಾಣ್ಯವು ಸ್ವತೋಗ್ರಾಹ್ಯವಾಗಿದೆ.

ವೇದೋಕ್ತ ಕರ್ಮಾಚರಣೆ ಮಾಡಿದರೂ ಫಲ ಬರದಿರುವುದಕ್ಕೆ ಕಾರಣಗಳು ಬಹಳ ಇವೆ. ನಮ್ಮ ಭಕ್ತಿ - ಶ್ರದ್ಧೆ ಮುಂತಾದವುಗಳ ಮೇಲೆ ಫಲ ಸಿಗುವುದು ಅವಲಂಬಿಸಿದೆ. ಆದ್ದರಿಂದ ವೇದವು ಅಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಮಾಣವಾದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಈ ಸಿದ್ಧಾಂತ ಕಾರಣ ಯುಕ್ತಿ ಸಮತಾ. ನಿರ್ದೋಷವಾದ ಸಾಕ್ಷಿಗೆ ವೇದ ಸಮವಾಗಿದೆ. ಆದ್ದರಿಂದ 'ಸಾಕ್ಷಿಯು ಹೇಗೆ ನಿತ್ಯ, ನಿಯಮೇನ ಪ್ರಮಾಣವೋ ಹಾಗೇ ವೇದವೂ ನಿಯಮೇನ ಪ್ರಮಾಣವೇ ' (ಹೊರತು ಪಾಶುಪತಾದಿ ಸ್ಮೃತಿಗಳಂತೆ ವೇದವು ಅಲ್ಲ) ಎಂದು ಸಮತಾ ಎಂಬುದರ ಅರ್ಥ.

೩) ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಅಭಿಮಾನ್ಯಧಿಕರಣದ ಪೂರ್ವಪಕ್ಷ-

ಮೃದಬ್ರವೀತ್ ಆಪೋಽಬ್ರುವನ್ (ಮಣ್ಣು ಮಾತಾಡಿತು, ನೀರು ಮಾತನಾಡಿತು) ಮುಂತಾದ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವ ಅಚೇತನವಾದ ಮಣ್ಣು ನೀರುಗಳು ಮಾತಾಡಲು ಸಾಧ್ಯವಿಲ್ಲವಾದ್ದರಿಂದ ಅವು ಮಾತಾಡಿದವೆಂದು ಹೇಳುವ ಈ ವಾಕ್ಯಗಳು ಅಪ್ರಮಾಣ. ಹೀಗೇ ಈ ವಾಕ್ಯಗಳ ದೃಷ್ಟಾಂತದಿಂದ ಉಳಿದ ವೇದ ವಾಕ್ಯಗಳೂ ಅಪ್ರಮಾಣ. ಆದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ. ಈ ಪೂರ್ವಪಕ್ಷ ಕಾರಣವಾದ ಯುಕ್ತಿಯು ಅದೃಷ್ಟಿ ಪದದಿಂದ ಹೇಳಲ್ಪಟ್ಟಿದೆ. ಅಚೇತನವಾದ ಮಣ್ಣು ಮುಂತಾದವುಗಳಿಗೆ. ವಚನಾದಿಕರ್ತೃತ್ವದ ಕಾಣದಿರುವಿಕೆಯೆಂದು ಅದರ ಅರ್ಥ.

ಸಿದ್ಧಾಂತ - ಈ ವಾಕ್ಯಗಳಿಗೆ ಮೇಲ್ನೋಟಕ್ಕೆ ಕಾಣುವಂತೆ ಯುಕ್ತಿಯ ವಿರೋಧವಿದೆ. ಆದರೆ ಈ ಯುಕ್ತಿವಿರೋಧ ಬರುವುದರಿಂದಲೇ ಈ ವಾಕ್ಯಗಳಿಗೆ ಮಣ್ಣು ಮೊದಲಾದವುಗಳಲ್ಲಿರುವ ಅವುಗಳ ಅಭಿಮಾನಿ ದೇವತೆಯು ಮಾತನಾಡಿತು ಎಂದು ಅರ್ಥವಾಗುತ್ತದೆ. ದೇವತೆಯು ಮಾತ ನಾಡುವುದರಿಂದ ಈ ವಾಕ್ಯಗಳು ಅಪ್ರಮಾಣವಾಗುವುದಿಲ್ಲ. ಆದ್ದರಿಂದ ಪ್ರಮಾಣಭೂತವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಈ ಸಿದ್ಧಾಂತಾಧಾರ ಯುಕ್ತಿಯೂ ಅದೃಷ್ಟಿಯೇ. ಅಪೌರುಷೇಯ ವಾದ ವೇದಕ್ಕೆ ಅಪ್ರಾಮಾಣ್ಯದ ಅದೃಷ್ಟಿ= ಕಾಣದಿರುವಿಕೆ. ಆದ್ದರಿಂದ ವೇದ ಪ್ರಾಮಾಣ್ಯಾನುಸಾರ ಅರ್ಥಾಂತರ ಅಂಗೀಕರಿಸಲಾಗಿದೆ.

೪) ನಾಲ್ಕನೆಯ ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಅಸದಧಿಕರಣದಲ್ಲಿ ಪೂರ್ವಪಕ್ಷ.- 'ಯತೋ ವಾ ಇಮಾನಿ ಭೂತಾನಿ 'ಇತ್ಯಾದಿ ವಾಕ್ಯಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವಂತೆ ಅಸದೇವೇದಮಗ್ರ ಆಸೀತ್ (ಸೃಷ್ಟ್ಯಾದಿಯಲ್ಲಿ ಅಸತ್ತೇ ಇತ್ತು) ಮುಂತಾದ ವಾಕ್ಯಗಳಿಂದ ಅಸತ್ತಿಗೂ ಕಾರಣತ್ವ ಸಿದ್ಧವಾಗುತ್ತದೆ. ಎರಡೂ ಶ್ರುತಿಗಳಾದ್ದರಿಂದ ಎರಡಕ್ಕೂ ಪ್ರಾಮಾಣ್ಯವು ಸಮಾನವಾಗಿದೆ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂದು ನಿಶ್ಚಯ ಸಾಧ್ಯವಿಲ್ಲ.

ಈ ಪೂರ್ವಪಕ್ಷ ಕಾರಣವಾದ ಯುಕ್ತಿಯು ಶ್ರುತಿಸಾಮ್ಯ ಎಂದು ಹೇಳಲ್ಪಟ್ಟಿದೆ. ಜಗತ್ಕಾರಣತ್ವವನ್ನು ಹೇಳುವ ಶ್ರುತಿಯು ಅಸತ್ ನಲ್ಲೂ ಸಮಾನವಾಗಿದೆ ಎಂದು ಅದಕ್ಕೆ ಅರ್ಥ.

ಸಿದ್ಧಾಂತ - ವಿಷ್ಣುವೇ ಜಗತ್ಕಾರಣ. 'ನಾಮಾನಿ ಸರ್ವಾಣಿ ಯಮಾ ವಿಶಂತಿ ತಂ ವೈ ವಿಷ್ಣುಂ '(ಎಲ್ಲ ನಾಮಗಳೂ ವಿಷ್ಣುವನ್ನೇ ಹೇಳುತ್ತದೆ) ಎಂಬ ನ್ಯಾಯದಿಂದ ಬೃಹಂತೋ ಹ್ಯಸ್ಮಿನ್ ಗುಣಾಃ (ಬಹಳ ಗುಣವುಳ್ಳವ ನಾದ್ದರಿಂದ ಬ್ರಹ್ಮ) ಎಂಬ ವ್ಯುತ್ಪತ್ತಿಯಂತೆ ಬ್ರಹ್ಮನಲ್ಲೇ ಇರುವ, ತದ್ವಾ ಏತದಸದಾಹುಃ ನ ಹ್ಯಾಸಾದಯತಿ ಕಶ್ಚನ (ಯಾರನ್ನೂ ಆಶ್ರಯಿಸು ವುದಿಲ್ಲವಾದ್ದರಿಂದ ಬ್ರಹ್ಮನೇ ಅಸತ್) ಎಂಬ ಶ್ರುತಿಬೋಧ್ಯ ವ್ಯುತ್ಪತ್ತಿಯಿಂದ ಬ್ರಹ್ಮನೇ ಅಸತ್ ಶಬ್ದವಾಚ್ಯ. ಆದ್ದರಿಂದ ಅಸತ್ತಿಗೆ ಕಾರಣತ್ವವು ಪ್ರಾಪ್ತವಾಗುವುದಿಲ್ಲ. ವಿಷ್ಣುವಿಗೇ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯು ಶ್ರುತಿಸಾಮ್ಯವೇ ಬ್ರಹ್ಮ ಶಬ್ದಕ್ಕೆ ಬ್ರಹ್ಮನಲ್ಲಿ ನಿರ್ವಚನ(ಯೋಗ)ವನ್ನು ಹೇಳುವ ಶ್ರುತಿಯಂತೆ ಅಸತ್ ಶಬ್ದಕ್ಕೆ ಬ್ರಹ್ಮನಲ್ಲಿ ನಿರ್ವಚನವನ್ನು ಹೇಳುವ ಶ್ರುತಿಯೂ ಇದೆ. ಇದೇ ಎರಡೂ ಶ್ರುತಿಗಳಲ್ಲಿನ ಸಾಮ್ಯ. ಆದ್ದರಿಂದ ಅಸತ್ - ಬ್ರಹ್ಮ ಶಬ್ದಗಳೆರಡೂ ಪರಮಾತ್ಮ ವಾಚಕವಾಗಿವೆ. ಇದೂ ಶ್ರುತಿ ಸಾಮ್ಯವೇ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಹೀಗೆ ಜೀವಾದಿ ವಾಚಕ ಶ್ರುತಿಗಳೂ ಬ್ರಹ್ಮವಾಚಕವೇ ಆದ್ದರಿಂದ ಅವುಗಳಿಂದಲೂ ಬ್ರಹ್ಮನಿಗೇ ಜಗತ್ಕಾರಣತ್ವ ಸಿದ್ಧವಾಗುತ್ತದೆ.

೫) ಓಂ ಭೋಕ್ತ್ರಾಪತ್ತೇರ ವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ ಎಂಬ ಅಧಿಕರಣದ ಪೂರ್ವಪಕ್ಷ -

ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ (ಕರ್ಮಗಳು ಮತ್ತು ವಿಜ್ಞಾನಮಯನಾದ ಆತ್ಮ ಎಲ್ಲರೂ ಪರಮಾತ್ಮನಲ್ಲಿ ಒಂದಾಗುತ್ತಾರೆ) ಎಂಬ ಶ್ರುತಿಯ ಪ್ರಕಾರ ಮುಕ್ತನಾದ ಜೀವನಿಗೆ ಪರಮಾತ್ಮನಿಂದ ಐಕ್ಯವು ಪ್ರಾಪ್ತವಾಗುತ್ತದೆಂದು ತಿಳಿಯುತ್ತದೆ. ಹೀಗೆ ಜೀವರಿಗಿಂತ ಅಭಿನ್ನನಾದ ಪರಮಾತ್ಮನಲ್ಲಿ ಜಗತ್ಕಾರಣತ್ವವು

ಯುಕ್ತವಲ್ಲ. (ಜೀವ ಈಶ್ವರ ಇಬ್ಬರಲ್ಲೂ ಇರುವ ವಿರುದ್ಧವಾದ ಅಜ್ಞಾನ ಸರ್ವಜ್ಞತ್ವ ಅಸ್ವಾತಂತ್ರ್ಯ ಸರ್ವಕರ್ತೃತ್ವ ಮುಂತಾದ ಧರ್ಮಗಳನ್ನು ತೆಗೆದು ಕೇವಲ ಶುದ್ಧ ಆತ್ಮರಿಗೆ ಅಭೇದವಿದೆ) ಆದ್ದರಿಂದ ಈಶ್ವರನಲ್ಲಿ ವಾಸ್ತವಿಕವಾಗಿ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಬಲೋದ್ಭವ. ಶ್ರುತಿ ಬಲದಿಂದ ತಿಳಿಯಲ್ಪಡುವ ಜೀವೇಶ್ವರರ ಅಭೇದವೆಂದು ಅದರ ಅರ್ಥ.

ಸಿದ್ಧಾಂತ - ನಿರಂಜನಃ ಪರಮಂ ಸಾಮ್ಯಮುಪೈತಿ (ದೋಷ ರಹಿತನಾದ ಮುಕ್ತ ಜೀವನು ಪರಮಾತ್ಮನಂತೆ ಜ್ಞಾನಾನಂದಾದಿರೂಪವನ್ನು ಹೊಂದುತ್ತಾನೆ) ಎಂಬ ಶ್ರುತಿಯಂತೆ ಮುಕ್ತ ಜೀವರಿಗೂ ಈಶ್ವರನಿಗೂ ಭೇದವೇ ಇದೆಯೆಂದು ಸಿದ್ಧವಾಗಿದೆ. ಆದ್ದರಿಂದ ಏಕೀಭವಂತಿ ಎಂಬುದಕ್ಕೆ ಗ್ರಾಮದ ಜನರೆಲ್ಲರೂ ಒಂದಾದರು ಎಂಬಂತೆ ಏಕಾಭಿಪ್ರಾಯವುಳ್ಳವ ರೆಂದಾಗಲೀ, ಒಂದೇ ಸ್ಥಾನ=ಮುಕ್ತಿಯಲ್ಲಿದ್ದಾರೆಂದಾಗಲೀ ಅರ್ಥವನ್ನು ಹೇಳಬೇಕು. ಆದ್ದರಿಂದ ಜೀವೇಶ್ವರರಿಗೆ ಐಕ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಇಲ್ಲಿ ಸಿದ್ಧಾಂತ ಯುಕ್ತಿಯೂ ಬಲೋದ್ಭವವೇ. ಬೇರೆ ಬೇರೆ ಭೇದಬೋಧಕ ಶ್ರುತಿಗಳಿಂದ ಜೀವೇಶರ ಭೇದವೇ ಸಿದ್ಧವಾಗುವುದರಿಂದ ಬಲೋದ್ಭವವೆಂದರೆ ಶ್ರುತಿಬಲದಿಂದ ತಿಳಿಯಲ್ಪಡುವ ಭೇದವೇ.

೬) ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಆರಂಭಣಾಧಿಕರಣದ ಪೂರ್ವಪಕ್ಷ-

ಲೋಕದಲ್ಲಿ ಮಡಿಕೆ ಮುಂತಾದವುಗಳ ಸೃಷ್ಟಿ ಆಗಬೇಕಾದರೆ ಸ್ವತಂತ್ರವಾದ ಮಣ್ಣು ಮುಂತಾದ ಸಾಧನಗಳು ಬೇಕು ಹಾಗೆಯೇ ಪರಮಾತ್ಮನಿಂದ ಈ ಜಗತ್ತಿನ ಸೃಷ್ಟಿಯಾಗಬೇಕಾದರೂ ಸ್ವತಂತ್ರವಾದ (ಪರಮಾತ್ಮನ ಅಧೀನವಾಗದ) ಪ್ರಧಾನ= ಪ್ರಕೃತಿ ಮುಂತಾದ ಕಾರಣಗಳು ಬೇಕು. ಹೀಗೆ ಈಶ್ವರನಿಂದ ಆಗುವ ಈ ಸೃಷ್ಟಿಯು ಸ್ವತಂತ್ರಸಾಧನಾಂತರ ಸಾಪೇಕ್ಷವೆಂದು ಸಿದ್ಧವಾಯಿತು. ಈ ರೀತಿ ಸ್ವತಂತ್ರಸಾಧನಾಪೇಕ್ಷಸೃಷ್ಟಿ

ಕರ್ತೃವಿನಲ್ಲಿ ಸರ್ವಗುಣತ್ವವು ಲೋಕದಲ್ಲಿ ಕಾಣುತ್ತಿಲ್ಲವಾದ್ದರಿಂದ ಪರಮಾತ್ಮನಲ್ಲೂ ಸರ್ವಗುಣತ್ವವಿಲ್ಲ.

ಈ ಪೂರ್ವಪಕ್ಷಾಧಾರಯುಕ್ತಿ-ಸರ್ವಾನುಸಾರ. ಲೋಕದಲ್ಲಿ ಎಲ್ಲ ಸೃಷ್ಟಿಯು ಸ್ವತಂತ್ರಸಾಧನಾಂತರಸಾಪೇಕ್ಷವಾಗಿ ಕಂಡುಬಂದಿರುವುದು (ಅದರ ಅನುಸಾರ ಪರಮಾತ್ಮನ ಸೃಷ್ಟಿಯೂಹಾಗೇ ಇರಬೇಕು)

ಸಿದ್ಧಾಂತ:- ಲೋಕದಲ್ಲಿ ಸೃಷ್ಟಿಯು ಸ್ವತಂತ್ರಸಾಧನಸಾಪೇಕ್ಷವಾದರೂ ಪರಮಾತ್ಮನ ಸೃಷ್ಟಿಯು ಹಾಗಲ್ಲ. ಏಷ ಸರ್ವೇಶ್ವರಃ(ಇವನೇ ಸರ್ವೇಶ್ವರನು) ಮುಂತಾದ ಶ್ರುತಿಗಳಿಂದ ಎಲ್ಲವೂ ಪರಮಾತ್ಮನ ಅಧೀನವೆಂದೇ ತಿಳಿಯುವುದರಿಂದ ಉಳಿದ ಪ್ರಧಾನಾದಿ ಸಾಧನಗಳೂ ಪರಮಾತ್ಮನ ಅಧೀನವೇ. ಯಾವ ಪರಮಾತ್ಮನಿಂದಲೇ ಸಾಧನಗಳಿಗೆ ಸತ್ತಾ-ಪ್ರವೃತ್ತಿಗಳಿವೆವೋ ಅಂತಹ ಸಾಧನಗಳು ಸ್ವತಂತ್ರವಾಗುವುದು ಹೇಗೆ?. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಸರ್ವಗುಣತ್ವಕ್ಕೆ ಯಾವುದೂ ಬಾಧಕವಿಲ್ಲ.

ಈ ಸಿದ್ಧಾಂತಾಧಾರ ಯುಕ್ತಿಯೂ 'ಸರ್ವಾನುಸಾರ, ಸರ್ವಶ್ರುತ್ಯನುಸಾರ'ವೆಂದು ಅದಕ್ಕೆ ಅರ್ಥ. ಸರ್ವಶ್ರುತಿಸ್ಮೃತಿಗಳೂ ಪರಮಾತ್ಮನೇ ಸರ್ವೇಶ್ವರನೆಂದು ಪ್ರತಿಪಾದಿಸುತ್ತಿರುವುದರಿಂದ ಬೇರೆ ಸಾಧನಗಳಿಲ್ಲದೆಯೇ ಸೃಷ್ಟಿ ಮಾಡಲು ಸಾಧ್ಯವಿದ್ದರೂ ಅವನು ಸುಮ್ಮನೇ ಸಾಧನಗಳನ್ನು ಇಟ್ಟುಕೊಂಡು ಸೃಷ್ಟಿಸುತ್ತಾನೆ.

೭) ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಇತರವ್ಯಪದೇಶಾಧಿಕರಣದ ಪೂರ್ವಪಕ್ಷ:-

ನಮ್ಮ ಕಣ್ಣಿಗೆ ಕಾಣುವ ಜೀವನನ್ನೇ ಕರ್ತೃವೆಂದಂಗೀಕರಿಸಿದರೆ ಲಾಘವವಿದೆ. ಕಣ್ಣಿಗೆಕಾಣುವ ಜೀವನನ್ನು ಬಿಟ್ಟು ಕಾಣದ ಈಶ್ವರನಿಗೆ ಕರ್ತೃತ್ವವನ್ನು ಅಂಗೀಕರಿಸುವುದು ಸರಿಯಲ್ಲ. ಆದ್ದರಿಂದ ಈಶ್ವರನಿಗೆ ಜಗತ್ಕಾರಣತ್ವವು ಸಿದ್ಧಿಯಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಲಘುತಾ. ಜೀವನಿಗೆ ಕರ್ತೃತ್ವ ಅಂಗೀಕರಿಸಿದರೆ ಲಾಘವವೆಂದು ಅದರ ಅರ್ಥ.

ಸಿದ್ಧಾಂತ - ನಾನ್ಯೋತೋಽಸ್ತಿ ಕರ್ತಾ (ಈ ಬ್ರಹ್ಮನಿಗಿಂತ ಬೇರೆ ಕರ್ತೃವಿಲ್ಲ) ಮುಂತಾದ ಶ್ರುತಿಗಳಿಂದ ಬ್ರಹ್ಮನಿಗೇ ಕರ್ತೃತ್ವವು ಶ್ರುತಿಸ್ಮೃತ್ಯಾದಿ ಪ್ರಮಾಣ ಸಿದ್ಧವಾಗಿದೆ. ಜೀವನಿಗಾದರೂ ಘಟಾದಿ ಕರ್ತೃತ್ವ ಪ್ರತ್ಯಕ್ಷಸಿದ್ಧವಾಗಿದ್ದರೂ ಮಹದಾದಿಕರ್ತೃತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲವಾದ್ದರಿಂದ ಜೀವನಿಗೆ ಅಶ್ರುತಕರ್ತೃತ್ವವನ್ನಂಗೀಕರಿಸಿದರೆ ಗೌರವ. ಪರಾಮಾತ್ಮನಿಗೆ ಶ್ರುತವಾದ ಕರ್ತೃತ್ವವನ್ನಂಗೀಕರಿಸಿದರೆ ಲಾಘವ. ಹೀಗೆ ಲಘುತಾ ಎಂಬ ಪೂರ್ವಪಕ್ಷಯುಕ್ತಿಯೇ ಸಿದ್ಧಾಂತಯುಕ್ತಿಯೂ ಆಗಿದೆ.

೮) ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ಎಂಬ ಸೂತ್ರ ದಿಂದ ಪ್ರಾರಂಭವಾಗುವ ಶಬ್ದಮೂಲತ್ವಾಧಿಕರಣದ ಪೂರ್ವಪಕ್ಷ:-

ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವಿದ್ದರೆ ಅವನು ತನಗೆ ಯಾವಾಗಲೂ ಹಿತವನ್ನೇ ಮಾಡಿಕೋಳ್ಳಬೇಕು. ಯಾವತ್ತೂ ಯಾವುದೇ ರೀತಿಯ ತೊಂದರೆಯನ್ನನುಭವಿಸಬಾರದು ಎಂಬ ದೋಷವನ್ನು ಹೇಳಿ ಜೀವನು ಕರ್ತೃವಲ್ಲವೆಂದು ಹಿಂದಿನ ಅಧಿಕರಣದಲ್ಲಿ ಸಿದ್ಧಾಂತ ಮಾಡಿದ್ದಾರೆ. ಹೀಗೆ ಜೀವನಲ್ಲಿ ಇರುವ ದೋಷಗಳು ಪರಮಾತ್ಮನಲ್ಲೂ ಇರಬಹುದಾದ್ದರಿಂದ ಪರಮಾತ್ಮನಾದರೂ ಜಗತ್ಕಾರಣನಾಗುವುದು ಹೇಗೆ? ಆದ್ಧರಿಂದ ಪರಮಾತ್ಮನಿಗೂ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು ವಿಶೇಷಾದರ್ಶನ. ಜೀವನಲ್ಲಿಲ್ಲದಿರುವ ಧರ್ಮಗಳ ಕಾರಣದಿರುವಿಕೆ ಎಂದು ಅದಕ್ಕೆ ಅರ್ಥ. (ಆದ್ದರಿಂದ ಜೀವನಿಗೂ ಪರಮಾತ್ಮನಿಗೂ ಏನೂ ವಿಶೇಷವು ಕಾಣಿಸುವುದಿಲ್ಲವಾದ್ದರಿಂದ ಜೀವನೂ ಜಗತ್ಕಾರಣನಾಗಬಹುದು).

ಸಿದ್ಧಾಂತ:- ವಿಚಿತ್ರಶಕ್ತಿಃ ಪುರುಷಃ (ಈ ಬ್ರಹ್ಮನು ನಾನಾರೀತಿಯ ವಿಚಿತ್ರವಾದ ಶಕ್ತಿಯುಳ್ಳವನು)ಮುಂತಾದ ಶ್ರುತಿಗಳಿಂದ ಪರಮಾತ್ಮನು ಸರ್ವಶಕ್ತನೆಂದು ಸಿದ್ಧವಾಗಿರುವುದರಿಂದ ಅವನಲ್ಲಿ ಹಿತಾಕರಣಾದಿ ದೋಷಗಳು ಬರುವುದಿಲ್ಲ. ಆದರೆ ಜೀವನು ಸರ್ವಶಕ್ತನೆಂದು ಹೇಳುವ

ಯಾವುದೇ ಶ್ರುತಿಯಿಲ್ಲವಾದ್ದರಿಂದ ಅವನಲ್ಲಿ ಈ ಎಲ್ಲ ದೋಷಗಳು ಬರುತ್ತದೆ. ಆದ್ದರಿಂದ ಪರಮಾತ್ಮನೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯು ವಿಶೇಷಾದರ್ಶನ. (ಪರಮಾತ್ಮನಲ್ಲಿವೆಯೆಂದು ಶ್ರುತಿಯಲ್ಲಿ ಹೇಳಲ್ಪಟ್ಟ ' ಸರ್ವಶಕ್ತಿತ್ವಾದಿ ಧರ್ಮಗಳು ಜೀವನಲ್ಲಿಲ್ಲದಿರುವುದು)

೯) ಓಂ ನ ಪ್ರಯೋಜನವತ್ತ್ವಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ನಪ್ರಯೋಜನಾಧಿಕರಣದ ಪೂರ್ವಪಕ್ಷ:-

ಪರಮಾತ್ಮನು ಜಗತ್ಕಾರಣನಲ್ಲ. ವಿಷ್ಣುವು ಸೃಷ್ಟಿಮಾಡುವುದರಿಂದ ಅವನಿಗೆ ಏನಾದರೂ ಪ್ರಯೋಜನವಿದೆಯೋ? ಇಲ್ಲವೋ? ಅವನಿಗೆ ಪ್ರಯೋಜನ ವಿಲ್ಲದಿದ್ದರೆ ಸೃಷ್ಟಿಮಾಡಲು ಪ್ರವೃತ್ತಿಯನ್ನೇ ಮಾಡು ತ್ತಿರಲಿಲ್ಲ. ಅವನಿಗೆ ಸೃಷ್ಟಿಯಿಂದ ಪ್ರಯೋಜನವಿದೆಯೆಂದಾದರೆ, ಅವನು ಆ ಪ್ರಯೋಜನ ಪಡೆಯುವುದಕ್ಕಿಂತ ಮೋದಲು 'ಅಪೂರ್ಣ ನೆಂದಾಗುತ್ತಾನೆ. ಹೀಗೆ ಎರಡೂ ಪಕ್ಷದಲ್ಲೂ ದೋಷಗಳಿವೆ. ಆದ್ದರಿಂದ ಅವನಿಗೆ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಅಫಲ. ಫಲವಿಲ್ಲದಿರುವಿಕೆ. 'ಸಿದ್ಧಾಂತ:- ಅಥೈಷ ಏವ ಪರಮ ಆನಂದಃ (ಈ ವಿಷ್ಣುವು ಸಂಪೂರ್ಣಾ ನಂದವುಳ್ಳವನು) ಎಂಬ ಶ್ರುತಿಯಂತೆ ಪರಮಾತ್ಮನು ಸಂಪೂರ್ಣನಾದವನು ಅವನಿಗೆ ಸೃಷ್ಟಿಯಿಂದ ಯಾವುದೇ ಫಲವಿಲ್ಲ. ಯಾವನಿಗೆ ಫಲಾಪೇಕ್ಷೆ ಇದಯೋ ಅವನಿಗೆ ಸರ್ವಕರ್ತೃತ್ವಾದಿ ಶಕ್ತಿ ಕಂಡಿಲ್ಲ. ಆದ್ದರಿಂದ ಫಲಾಪೇಕ್ಷೆಯಿಲ್ಲದಿರುವುದರಿಂದಲೇ ಪರಮಾತ್ಮನು ಸರ್ವಕರ್ತೃವಾಗಿ ದ್ದಾನೆ. ಅವನ ಸೃಷ್ಟಿಯು ಕೇವಲ ಲೀಲಾರೂಪ. ಆದ್ದರಿಂದ ಜೀವರಿಗೆ ಫಲವಿದೆ ಅವನಿಗಿಲ್ಲ. ಆದ್ದರಿಂದ ಅವನೇ ಜಗತ್ಕಾರಣ.

ಈ ರೀತಿ ಫಲವಿಲ್ಲದಿರುವುದರಿಂದಲೇ ಅವನು ಸೃಷ್ಟಿಮಾಡುತ್ತಿ ರುವುದರಿಂದ ಅಫಲವೇ ಸಿದ್ಧಾಂತಯುಕ್ತಿಯಾಗಿದೆ

೧೦) ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ವೈಷಮ್ಯ ನೈರ್ಘೃಣ್ಯಾಧಿಕರಣದ ಪೂರ್ವಪಕ್ಷ:-

ಈಶ್ವರನು ಸರ್ವಕರ್ತನೆಂದು ಹಿಂದೆ ನಿರ್ಣಯಿಸಲಾಗಿದೆ. ಅವನು ಜೀವರ ಕರ್ಮಾದಿಗಳ ಅನುಸಾರ ಅವರಿಗೆ ಸುಖ ದುಃಖಾದಿಗಳನ್ನು ಕೊಡುತ್ತಾನೋ? ಅಥವಾ ಕರ್ಮಗಳಂತೆ ಅಲ್ಲದೆ ಕೇವಲ ತನ್ನ ಬುದ್ಧಿಗೆ ತೋಚಿದಂತೆ ಸುಖಾದಿಗಳನ್ನು ಕೊಡುತ್ತಾನೋ? ಕರ್ಮಾನುಸಾರ ವೆಂದರೆ ಪರಮಾತ್ಮನಿಗೆ ಸ್ವಾತಂತ್ರ್ಯೇಣ ಸರ್ವಕರ್ತೃತ್ವವಿಲ್ಲವೆಂದಾಯಿತು. ಕರ್ಮಾನ ುಸಾರ ಅಲ್ಲವೆಂದರೆ ಜೀವರು ಕರ್ಮವನ್ನು ಮಾಡುವ ಅವಶ್ಯಕತೆಯೇ ಇಲ್ಲವೆಂದಾಗುತ್ತದೆ. ಆಗ ಕರ್ಮಗಳನ್ನು ಮಾಡಿರಿ ಎಂದು ಹೇಳುವ ಶ್ರುತಿಗಳ ವಿರೋಧಬರುತ್ತದೆ. ಆದ್ದರಿಂದ ಈಶ್ವರನಿಗೆ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಇಷ್ಟಾಸಿದ್ಧಿಃ ಇಷ್ಟವಾದ ಸ್ವಾತಂತ್ರ್ಯೇಣ ಸರ್ವಕರ್ತೃತ್ವದ ಅಸಿದ್ಧಿಯೆಂದರ್ಥ.

ಸಿದ್ಧಾಂತ:- ಏಷ ಹ್ಯೇವೈನಂ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತಿ ಏಷ ಉ ಏವ ಅಸಾಧುಕರ್ಮ ಕಾರಯತಿ ತಂ ಯಮಧೋ ನನೀಷತೇ (ಯಾರನ್ನು ಈ ಲೋಕದಿಂದ ಮೇಲಕ್ಕೆ=ಊರ್ಧ್ವ ಲೋಕಗಳಿಗೆ ಕರೆದೊಯ್ಯಬೇಕೆಂದು ಪರಮಾತ್ಮನು ಬಯಸುತ್ತಾನೋ ಅವರಿಂದ ಒಳ್ಳೆಯ ಕೆಲಸಮಾಡಿಸುತ್ತಾನೆ, ಯಾರನ್ನು ಕೆಳಗೆ ಒಯ್ಯಬೇಕೆಂದು ಬಯಸುತ್ತಾನೋ ಅವನಿಂದ ಕೆಟ್ಟಕರ್ಮಗಳನ್ನು ಮಾಡಿಸುತ್ತಾನೆ.) ಎಂಬ ಶ್ರುತಿಯಂತೆ ಕರ್ಮಗಳು ಅವನ ಅಧೀನವಾಗಿವೆ. ಆದರೂ ಆ ಕರ್ಮಗಳ ಅನುಸಾರ ಫಲ ಕೊಡುತ್ತಾನೆ. (ಆ ಕರ್ಮಗಳನ್ನೂ ಪೂರ್ವಕರ್ಮಗಳ ಅನುಸಾರ ಮಾಡಿಸುತ್ತಾನೆ. ಕರ್ಮಗಳು ಅನಾದಿ) ಆದ್ದರಿಂದ ವೈಷಮ್ಯ ನೈರ್ಘೃಣ್ಯಗಳಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಾಧಾರ ಯುಕ್ತಿಯೂ ಇಷ್ಟಾಸಿದ್ಧಿ. ಹೀಗೆ ಅಂಗೀಕರಿಸದಿದ್ದರೆ ಇಷ್ಟವಾದ ವೇದಗಳ ಪ್ರಾಮಾಣ್ಯವೇ ಸಿದ್ಧಿಸದೇ ಹೋದೀತು ಎಂದು ಅರ್ಥ

೧೧) ಸರ್ವಧರ್ಮೋಪಪತ್ತೇಶ್ಚ ಎಂಬ ಅಧಿಕರಣದ ಪೂರ್ವಪಕ್ಷ:-

ಹಿಂದಿನ ಅಧ್ಯಾಯದಿಂದ ವಿಷ್ಣುವು ಸರ್ವಗುಣಪೂರ್ಣನೆಂದು ಸಿದ್ಧಪಡಿಸಲಾಗಿದೆ. ಆದರೆ ಜೀವರಲ್ಲಿ ಯಾರಲ್ಲೂ ಸರ್ವಗುಣಪೂರ್ಣತ್ವ ಕಂಡಿಲ್ಲವಾದ್ದರಿಂದ ಈಶ್ವರನಲ್ಲಾದರೂ ಅದನ್ನು ಅಂಗೀಕರಿಸುವುದು ಹೇಗೆ? ಇವನೂ ಚೇತನನಾದ್ದರಿಂದ ಉಳಿದ ಚೇತನರಂತೆ ಅಪೂರ್ಣನೇ ಆಗಿರಬೇಕು.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ನಿಯಮ. ಚೇತನರೆಲ್ಲರೂ ಅಪೂರ್ಣರೇ ಎಂಬ ನಿಯಮ.

ಸಿದ್ಧಾಂತ:- ಉಳಿದ ಅಸ್ವತಂತ್ರ ಜೀವರು ಅಪೂರ್ಣರಾದರೂ ಸ್ವತಂತ್ರನಾದ ಈಶ್ವರನು ಸರ್ವಗುಣಪೂರ್ಣನಾಗಿದ್ದಾನೆ. ಹಾಗೆ ಶ್ರುತಿಗಳಿವೆ. ಆದ್ದರಿಂದ ವಿಷ್ಣು ಸರ್ವಗುಣಪೂರ್ಣ.

ಈ ಸಿದ್ಧಾಂತಾಧಾರ ಯುಕ್ತಿಯು ನಿಯಮ. ಸ್ವತಂತ್ರನು ಪೂರ್ಣನಾಗಿರಲೇಬೇಕೆಂದು ನಿಯಮ.

ಹೀಗೆ ಯಾವುದೇ ಯುಕ್ತಿಗಳಿಂದ ಪರಮಾತ್ಮನ ಗುಣಪೂರ್ಣತ್ವಕ್ಕೆ ವಿರೋಧವಿಲ್ಲವೆಂದು ಈ ಪಾದದಲ್ಲಿ ನಿರ್ಣಯಿಸಲಾಗಿದೆ.

[ದ್ವಿತೀಯಾಧ್ಯಾಯ ದ್ವಿತೀಯಪಾದದಲ್ಲಿ ಬೇರೆ ಬೇರೆ ಸಮಯಗಳ ನಿರಾಸವಿದೆ. ಆಯಾ ಅಧಿಕರಣಗಳ ಪೂರ್ವಪಕ್ಷ ಆಧಾರ ಯುಕ್ತಿಯಾದ ಆಯಾ ಮತಗಳು ಮತ್ತು ಆಯಾಮತಗಳನಿರಾಸ ಎರಡನ್ನೂ ಆಯಾ ಅಧಿಕರಣಗಳಲ್ಲಿಯೇ ಸ್ಪಷ್ಟವಾಗಿ ಹೇಳಿದ್ದರಿಂದ ಅದನ್ನು ಪ್ರತ್ಯೇಕವಾಗಿ ಅನು ವ್ಯಾಖ್ಯಾನದಲ್ಲಿ ಹೇಳಿಲ್ಲ.]

### 'ವಿಭ್ರಮ್ಯ' ಎಂಬ ಪ್ರಯೋಗ

ಸುಧಾದಲ್ಲಿ 'ವಿಭ್ರಮ್ಯ' (ಭ್ರಮಿಸಿ) ಎಂಬ ಪ್ರಯೋಗವಿದೆ. ಇಲ್ಲಿ 'ವಿಭ್ರಮ್ಯ' ಎಂಬ ಪಾಠವೇ ಸರಿ. 'ವಿಭ್ರಾಮ್ಯ' ಎಂಬ ಪಾಠವು ಸರಿಯಲ್ಲ.

ಏಕೆಂದರೆ ವಿ ಉಪಸರ್ಗಪೂರ್ವಕ ಭ್ರಮ್ ಧಾತುವಿನ ಪರದಲ್ಲಿ 'ಲ್ಯಪ್' ಎಂಬುದು ಇದ್ದಾಗ. ಲ್ಯಪ್‌ನ ಯ ಎಂಬುದು 'ಝಲ್' ಆದಿಯಾಗಿ ಉಳ್ಳದ್ದಲ್ಲವಾದ್ದರಿಂದ ಝಲಾದಿಯಾದದ್ದು ಪರದಲ್ಲಿದ್ದಾಗ ದೀರ್ಘವನ್ನು ಹೇಳುವ 'ಅನುನಾಸಿಕಸ್ಯ ಕ್ವಿಪ್ ಝಲೋ: ಕ್ಙಿತಿ' ಎಂಬ ಸೂತ್ರದ ಪ್ರಕಾರ ದೀರ್ಘಪ್ರಾಪ್ತಿಯಿಲ್ಲ. ಆದ್ದರಿಂದ ವಿಭ್ರಾಮ್ಯ ಎಂಬ ರೂಪವಿರುವುದಿಲ್ಲ. ಇಲ್ಲಿ ಲ್ಯಪ್ ಪ್ರತ್ಯಯವು ಕ್ತ್ವಾಪ್ರತ್ಯಯದ ಸ್ಥಾನದಲ್ಲಿ ಬಂದದ್ದರಿಂದ ಸ್ಥಾನಿವದ್ಭಾವ ಹೊಂದುತ್ತದೆ. ಆದ್ದರಿಂದ ಕ್ತ್ವಾ ಪ್ರತ್ಯಯದಂತೆ ಈ ಲ್ಯಪ್‌ಗೂ ಝಲಾದಿತ್ವ ಬರುತ್ತದೆ. ಆದ್ದರಿಂದ ಝಲಾದಿಯಾದದ್ದು ಪರದಲ್ಲಿರುವುದರಿಂದ ದೀರ್ಘ ಏಕೆ ಬರುವುದಿಲ್ಲ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ 'ಸ್ಥಾನಿವದಾದೇಶೋಽನಲ್ವಿಧೌ' ಎಂಬ ಸೂತ್ರದಲ್ಲಿ 'ಅನಲ್ವಿಧೌ' ಎಂದು ಅಲ್ ಅನ್ನು ಆಶ್ರಯಿಸಿಕೊಂಡು ಕಾರ್ಯ ಮಾಡುವಾಗ ಸ್ಥಾನಿವದ್ಭಾವ ಬರುವುದಿಲ್ಲವೆಂದು ಹೇಳಿದ್ದಾರೆ. ದೀರ್ಘರೂಪಕಾರ್ಯವು 'ಝಲ್' ಎಂಬ ಅಲ್ ಅನ್ನು ಆಶ್ರಯಿಸಿ ಕೊಂಡಿರುವುದರಿಂದ ಈ ಕಾರ್ಯವನ್ನು ಮಾಡುವಾಗ ಲ್ಯಪ್‌ಗೆ ಸ್ಥಾನಿವದ್ಭಾವ ಬರುವುದಿಲ್ಲ. ಆದ್ದರಿಂದ ದೀರ್ಘ ಬರಲು ಸಾಧ್ಯವಿಲ್ಲ. ಹಾಗಾದರೆ ಕ್ತ್ವಾ ಪ್ರತ್ಯಯದ ಮೇಲೆ ಲ್ಯಪ್ ಪ್ರತ್ಯಯ ಬರುವುದಕ್ಕಿಂತ ಮೊದಲೇ ಕ್ತ್ವಾ ಪ್ರತ್ಯಯವನ್ನು ಆಶ್ರಯಿಸಿಕೊಂಡು ದೀರ್ಘಮಾಡಬಹುದಿಲ್ಲವೇ? ಎಂದರೆ ಅದೂ ಸಾಧ್ಯವಿಲ್ಲ. ಅಂತರಂಗವಾದ ವಿಧಿಗಳನ್ನೂ ಕೂಡ ಬಹಿರಂಗವಾದ ಲ್ಯಪ್ ಬಾಧಿಸುತ್ತದೆ. ಎಂದು ಹೇಳಿರುವುದರಿಂದ ಅಂತರಂಗವಾದ ದೀರ್ಘವನ್ನು ಬಾಧಿಸಿ ಬಹಿರಂಗವಾದ ಲ್ಯಪ್ ಪ್ರತ್ಯಯವೇ ಕ್ತ್ವಾ ಪ್ರತ್ಯಯದ ಮೇಲೆ ಬರುತ್ತದೆ. ಆದ್ದರಿಂದ ಸರ್ವಥಾ 'ವಿಭ್ರಾಮ್ಯ' ಎಂದಾಗಲು ಸಾಧ್ಯವಿಲ್ಲ. ಭ್ರಮ್ ಧಾತುವನ್ನು 'ಣಿಜಂತ' ವೆಂದಿಟ್ಟುಕೊಂಡರೂ 'ಮಿತಾಂ ಹ್ರಸ್ವ:' ಎಂಬುದರಿಂದ ಹ್ರಸ್ವ ಹಾಗೂ 'ಲಘುಪೂರ್ವಾತ್' ಎಂಬುದರಿಂದ ಅಯಾದೇಶ ಬಂದರೆ 'ವಿಭ್ರಮಯ್ಯ' ಎಂದು ರೂಪವಾಗುತ್ತದಷ್ಟೇ ಹೊರತು ವಿಭ್ರಾಮ್ಯ ಎಂದಾಗುವುದಿಲ್ಲ. ವಿಭ್ರಾಮ್ಯನ್ ಎಂದು ಪಾಠವಿದ್ದರೂ ಅದು ಸರಿಯಾಗುತ್ತದೆ.

**ಯಥಾರ್ಥಶಬ್ದದ ಸಮಾಸ**

ಯಥಾರ್ಥಂ= ಯಥಾವಸ್ಥಿತಾರ್ಥಜ್ಞೇಯವಿಷಯಿಕಾರಿ ಪ್ರಮಾಣಂ (ಯಥಾರ್ಥವಾದದ್ದು - ವಸ್ತು ಹೇಗಿರುತ್ತದೋ ಹಾಗೇ ಅದನ್ನು ತಿಳಿಸುವುದು ಪ್ರಮಾಣ) ಎಂದು ಯಥಾರ್ಥವೇ ಪ್ರಮಾಣವೆಂದಿದ್ದಾರೆ. ಇಲ್ಲಿ ಯಥಾರ್ಥ ಶಬ್ದದ ಸಮಾಸ ಹೀಗೆ -

ಯಥಾ ಶಬ್ದದ ಯೋಗ್ಯತಾ, ವೀಪ್ಸಾ, ಪದಾರ್ಥಾನತಿವೃತ್ತಿ, ಸಾದೃಶ್ಯಗಳೆಂಬ ನಾಲ್ಕು ಅರ್ಥಗಳಲ್ಲಿ ಪದಾರ್ಥಾನತಿವೃತ್ತಿಯೆಂಬ ಅರ್ಥದಲ್ಲಿ 'ಯಥಾಽಸಾದೃಶ್ಯೇ ' ಎಂಬುದರಿಂದ ಯಥಾ ಶಬ್ದಕ್ಕೆ ಅರ್ಥ ಶಬ್ದದೊಂದಿಗೆ ಅವ್ಯಯೀಭಾವ ಸಮಾಸವಾಗಿ ಯಥಾರ್ಥಂ ಎಂದಾಗುತ್ತದೆ ಹೀಗೆ ಸುಧಾದಲ್ಲಿ ಹೇಳಿದ್ದಾರೆ.

ಆದರೆ - ಉಪಾಧಿಖಂಡನ ಮಂದಾರಮಂಜರಿಯಲ್ಲಿ ವ್ಯಾಸರಾಜರು ಸಾದೃಶ್ಯಾರ್ಥಕವಾದ ಯಥಾ ಶಬ್ದಕ್ಕೇ ಯಥಾ=ಸಾದೃಶ್ಯವಿಶಿಷ್ಟಃ ಅರ್ಥಃ ಯಸ್ಯ ಸ (ಜ್ಞಾನದಂತೆ ಸತ್ ಆದ ಅರ್ಥದಿಂದ ಯುಕ್ತವಾದದ್ದು) ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕೆಂದು ತೋರಿಸಿಕೊಟ್ಟಿದ್ದಾರೆ. ಹೀಗೆ ಬಹುವ್ರೀಹಿ ಸಮಾಸ ಮಾಡುವುದರಿಂದಲೇ ಯಥಾರ್ಥಾ ಪ್ರತೀತಿಃ (ಸರಿಯಾದ ಜ್ಞಾನ) ಮುಂತಾದ ಪ್ರಯೋಗಗಳಲ್ಲಿ ಯಥಾರ್ಥ ಶಬ್ದವು ವಿಶೇಷ್ಯ ಲಿಂಗವನ್ನು ಹೊಂದಿದೆ. ಅವ್ಯಯೀಭಾವ ಸಮಾಸ ಮಾಡಿದ್ದರೆ ನಿತ್ಯ ನಪುಂಸಕ ಲಿಂಗವಾಗುತ್ತಿತ್ತು.

ಅರ್ಥಂ ನಾತಿವರ್ತತೇ ಇತಿ ಯಥಾರ್ಥಂ ಎಂಬ ಸುಧಾ ಪಂಕ್ತಿಯು (ಪು-೭೪೧) ಬಹುವ್ರೀಹಿ ಸಮಾಸಮಾಡಿದರೂ ಅಂತಿಮವಾಗಿ, ಜ್ಞಾನಾರ್ಥಗಳಲ್ಲಿ ಸತ್ತೆಯ ಸಾದೃಶ್ಯ ವಿರುವುದರಿಂದ ಜ್ಞಾನವು ಅರ್ಥಾತಿ ಕ್ರಮವನ್ನು ಹೊಂದಿಲ್ಲವೆಂದೇ ಪರ್ಯವಸಾನವಾಗುತ್ತದೆ ಎಂಬ ಅಭಿಪ್ರಾಯದಿಂದ ಹೊರಟಿದೆ ಎಂದು ವ್ಯಾಸರಾಜರು ಹೇಳುತ್ತಾರೆ.

**ಸ್ಮೃತಿ ಪ್ರಾಮಾಣ್ಯವಿಷಯದಲ್ಲಿ ಮೀಮಾಂಸಾ ದೃಷ್ಟಾಂತ**

ಸಾಧಕತಮವೇ ಕರಣ. ಕರಣವಿಶೇಷವೇ ಪ್ರಮಾಣ. ಅದರಂತೆ ಸ್ಮೃತಿ ಕರಣವು ಪ್ರಮಾಣವಾಗಬೇಕಾದರೆ ಸಾಧಕ ತಮವಾಗಬೇಕು. ಆದರೆ

ಏಕೆಂದರೆ ವಿ ಉಪಸರ್ಗಪೂರ್ವಕ ಭ್ರಮ್ ಧಾತುವಿನ ಪರದಲ್ಲಿ 'ಲ್ಯಪ್' ಎಂಬುದು ಇದ್ದಾಗ. ಲ್ಯಪ್‌ನ ಯ ಎಂಬುದು 'ಝಲ್' ಆದಿಯಾಗಿ ಉಳ್ಳದ್ದಲ್ಲವಾದ್ದರಿಂದ ಝಲಾದಿಯಾದದ್ದು ಪರದಲ್ಲಿದ್ದಾಗ ದೀರ್ಘವನ್ನು ಹೇಳುವ 'ಅನುನಾಸಿಕಸ್ಯ ಕ್ವಿಪ್ ಝಲೋಃ ಕ್ಙಿತಿ' ಎಂಬ ಸೂತ್ರದ ಪ್ರಕಾರ ದೀರ್ಘಪ್ರಾಪ್ತಿಯಿಲ್ಲ. ಆದ್ದರಿಂದ ವಿಭ್ರಾಮ್ಯ ಎಂಬ ರೂಪವಿರುವುದಿಲ್ಲ. ಇಲ್ಲಿ ಲ್ಯಪ್ ಪ್ರತ್ಯಯವು ಕ್ತ್ವಾಪ್ರತ್ಯಯದ ಸ್ಥಾನದಲ್ಲಿ ಬಂದದ್ದರಿಂದ ಸ್ಥಾನಿವದ್ಭಾವ ಹೊಂದುತ್ತದೆ. ಆದ್ದರಿಂದ ಕ್ತ್ವಾ ಪ್ರತ್ಯಯದಂತೆ ಈ ಲ್ಯಪ್‌ಗೂ ಝಲಾದಿತ್ವ ಬರುತ್ತದೆ. ಆದ್ದರಿಂದ ಝಲಾದಿಯಾದದ್ದು ಪರದಲ್ಲಿರುವುದರಿಂದ ದೀರ್ಘ ಏಕೆ ಬರುವುದಿಲ್ಲ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ 'ಸ್ಥಾನಿವದಾದೇಶೋಽನಲ್ವಿಧೌ 'ಎಂಬ ಸೂತ್ರದಲ್ಲಿ 'ಅನಲ್ವಿಧೌ' ಎಂದು ಅಲ್ ಅನ್ನು ಆಶ್ರಯಿಸಿಕೊಂಡು ಕಾರ್ಯ ಮಾಡುವಾಗ ಸ್ಥಾನಿವದ್ಭಾವ ಬರುವುದಿಲ್ಲವೆಂದು ಹೇಳಿದ್ದಾರೆ. ದೀರ್ಘರೂಪಕಾರ್ಯವು 'ಝಲ್' ಎಂಬ ಅಲ್ ಅನ್ನು ಆಶ್ರಯಿಸಿ ಕೊಂಡಿರುವುದರಿಂದ ಈ ಕಾರ್ಯವನ್ನು ಮಾಡುವಾಗ ಲ್ಯಪ್‌ಗೆ ಸ್ಥಾನಿವದ್ಭಾವ ಬರುವುದಿಲ್ಲ. ಆದ್ದರಿಂದ ದೀರ್ಘ ಬರಲು ಸಾಧ್ಯವಿಲ್ಲ. ಹಾಗಾದರೆ ಕ್ತ್ವಾ ಪ್ರತ್ಯಯದ ಮೇಲೆ ಲ್ಯಪ್ ಪ್ರತ್ಯಯ ಬರುವುದಕ್ಕಿಂತ ಮೊದಲೇ ಕ್ತ್ವಾ ಪ್ರತ್ಯಯವನ್ನು ಆಶ್ರಯಿಸಿಕೊಂಡು ದೀರ್ಘಮಾಡಬಹುದಿಲ್ಲವೇ? ಎಂದರೆ ಅದೂ ಸಾಧ್ಯವಿಲ್ಲ. ಅಂತರಂಗವಾದ ವಿಧಿಗಳನ್ನೂ ಕೂಡ ಬಹಿರಂಗವಾದ ಲ್ಯಪ್ ಬಾಧಿಸುತ್ತದೆ. ಎಂದು ಹೇಳಿರುವುದರಿಂದ ಅಂತರಂಗವಾದ ದೀರ್ಘವನ್ನು ಬಾಧಿಸಿ ಬಹಿರಂಗವಾದ ಲ್ಯಪ್ ಪ್ರತ್ಯಯವೇ ಕ್ತ್ವಾ ಪ್ರತ್ಯಯದ ಮೇಲೆ ಬರುತ್ತದೆ. ಆದ್ದರಿಂದ ಸರ್ವಥಾ 'ವಿಭ್ರಾಮ್ಯ' ಎಂದಾಗಲು ಸಾಧ್ಯವಿಲ್ಲ. ಭ್ರಮ್ ಧಾತುವನ್ನು 'ಣಿಜಂತ' ವೆಂದಿಟ್ಟುಕೊಂಡರೂ 'ಮಿತಾಂ ಹ್ರಸ್ವಃ' ಎಂಬುದರಿಂದ ಹ್ರಸ್ವ ಹಾಗೂ 'ಲಘುಪೂರ್ವಾತ್' ಎಂಬುದರಿಂದ ಅಯಾದೇಶ ಬಂದರೆ 'ವಿಭ್ರಮಯ್ಯ' ಎಂದು ರೂಪವಾಗುತ್ತದಷ್ಟೇ ಹೊರತು ವಿಭ್ರಾಮ್ಯ ಎಂದಾಗುವುದಿಲ್ಲ. ವಿಭ್ರಾಮ್ಯನ್ ಎಂದು ಪಾಠವಿದ್ದರೂ ಅದು ಸರಿಯಾಗುತ್ತದೆ.

**ಯಥಾರ್ಥಶಬ್ದದ ಸಮಾಸ**

ಯಥಾರ್ಥಂ= ಯಥಾವಸ್ಥಿತಾರ್ಥಜ್ಞೇಯವಿಷಯಿಕಾರಿ ಪ್ರಮಾಣಂ (ಯಥಾರ್ಥವಾದದ್ದು - ವಸ್ತು ಹೇಗಿರುತ್ತದೋ ಹಾಗೇ ಅದನ್ನು ತಿಳಿಸುವುದು ಪ್ರಮಾಣ) ಎಂದು ಯಥಾರ್ಥವೇ ಪ್ರಮಾಣವೆಂದಿದ್ದಾರೆ. ಇಲ್ಲಿ ಯಥಾರ್ಥ ಶಬ್ದದ ಸಮಾಸ ಹೀಗೆ -

ಯಥಾ ಶಬ್ದದ ಯೋಗ್ಯತಾ, ವೀಪ್ಸಾ, ಪದಾರ್ಥಾನತಿವೃತ್ತಿ, ಸಾದೃಶ್ಯಗಳೆಂಬ ನಾಲ್ಕು ಅರ್ಥಗಳಲ್ಲಿ ಪದಾರ್ಥಾನತಿವೃತ್ತಿಯೆಂಬ ಅರ್ಥದಲ್ಲಿ 'ಯಥಾಽಸಾದೃಶ್ಯೇ ' ಎಂಬುದರಿಂದ ಯಥಾ ಶಬ್ದಕ್ಕೆ ಅರ್ಥ ಶಬ್ದದೊಂದಿಗೆ ಅವ್ಯಯೀಭಾವ ಸಮಾಸವಾಗಿ ಯಥಾರ್ಥಂ ಎಂದಾಗುತ್ತದೆ ಹೀಗೆ ಸುಧಾದಲ್ಲಿ ಹೇಳಿದ್ದಾರೆ.

ಆದರೆ - ಉಪಾಧಿಖಂಡನ ಮಂದಾರಮಂಜರಿಯಲ್ಲಿ ವ್ಯಾಸರಾಜರು ಸಾದೃಶ್ಯಾರ್ಥಕವಾದ ಯಥಾ ಶಬ್ದಕ್ಕೇ ಯಥಾ=ಸಾದೃಶ್ಯವಿಶಿಷ್ಟಃ ಅರ್ಥಃ ಯಸ್ಯ ಸ (ಜ್ಞಾನದಂತೆ ಸತ್ ಆದ ಅರ್ಥದಿಂದ ಯುಕ್ತವಾದದ್ದು) ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕೆಂದು ತೋರಿಸಿಕೊಟ್ಟಿದ್ದಾರೆ. ಹೀಗೆ ಬಹುವ್ರೀಹಿ ಸಮಾಸ ಮಾಡುವುದರಿಂದಲೇ ಯಥಾರ್ಥಾ ಪ್ರತೀತಿಃ (ಸರಿಯಾದ ಜ್ಞಾನ) ಮುಂತಾದ ಪ್ರಯೋಗಗಳಲ್ಲಿ ಯಥಾರ್ಥ ಶಬ್ದವು ವಿಶೇಷ್ಯ ಲಿಂಗವನ್ನು ಹೊಂದಿದೆ. ಅವ್ಯಯೀಭಾವ ಸಮಾಸ ಮಾಡಿದ್ದರೆ ನಿತ್ಯ ನಪುಂಸಕ ಲಿಂಗವಾಗುತ್ತಿತ್ತು.

ಅರ್ಥಂ ನಾತಿವರ್ತತೇ ಇತಿ ಯಥಾರ್ಥಂ ಎಂಬ ಸುಧಾ ಪಂಕ್ತಿಯು (ಪು-೭೪೧) ಬಹುವ್ರೀಹಿ ಸಮಾಸಮಾಡಿದರೂ ಅಂತಿಮವಾಗಿ, ಜ್ಞಾನಾರ್ಥಗಳಲ್ಲಿ ಸತ್ತೆಯ ಸಾದೃಶ್ಯ ವಿರುವುದರಿಂದ ಜ್ಞಾನವು ಅರ್ಥಾತಿ ಕ್ರಮವನ್ನು ಹೊಂದಿಲ್ಲವೆಂದೇ ಪರ್ಯವಸಾನವಾಗುತ್ತದೆ ಎಂಬ ಅಭಿಪ್ರಾಯದಿಂದ ಹೊರಟಿದೆ ಎಂದು ವ್ಯಾಸರಾಜರು ಹೇಳುತ್ತಾರೆ.

**ಸ್ಮೃತಿ ಪ್ರಾಮಾಣ್ಯವಿಷಯದಲ್ಲಿ ಮೀಮಾಂಸಾ ದೃಷ್ಟಾಂತ**

ಸಾಧಕತಮವೇ ಕರಣ. ಕರಣವಿಶೇಷವೇ ಪ್ರಮಾಣ. ಅದರಂತೆ ಸ್ಮೃತಿ ಕರಣವು ಪ್ರಮಾಣವಾಗಬೇಕಾದರೆ ಸಾಧಕ ತಮವಾಗಬೇಕು. ಆದರೆ

(ಸ್ಮೃತಿಯು ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಟ್ಟ ವಸ್ತುವನ್ನೇ ತಿಳಿಸುವುದರಿಂದ) ಜ್ಞಾನರೂಪ ಫಲವು ಮೊದಲೇ ಪ್ರತ್ಯಕ್ಷಾದಿಕರಣಗಳಿಂದ ಬಂದಿದೆ. ಆದ್ದರಿಂದ ಸ್ಮೃತಿ ಕರಣದ ಕಾರ್ಯ ಮೊದಲೇ ಇರುವುದರಿಂದ ಈ ಸ್ಮೃತಿಕರಣದಲ್ಲಿ ಸಾಧಕತಮತ್ವವೇ ಇಲ್ಲ. ಆದ್ದರಿಂದ ಸ್ಮೃತಿಕರಣ (ಸಂಸ್ಕಾರವಿಶಿಷ್ಟ ಮನಸ್ಸು) ಕರಣವಲ್ಲವಾದ್ದರಿಂದ ಪ್ರಮಾಣವೂ ಅಲ್ಲ. ಆದ್ದರಿಂದ ಸ್ಮೃತಿಯನ್ನೂ ಪ್ರಮಾ ಎಂದು ಹೇಗೆ ಅಂಗೀಕರಿಸುವುದು ಎಂಬ ಪ್ರಶ್ನೆಗೆ ಉತ್ತರ ಹೀಗಿದೆ.

ಕರಣವು ಸಾಧಕತಮವಾಗಬೇಕೆಂದು ಹೇಳಿದ್ದು ಆ ಕ್ರಿಯೆಗೆ ಬೇಕಾದ ಕರ್ತೃ, ಕರ್ಮ ಮುಂತಾದ ಬೇರೆ ಕಾರಕಗಳಿಗಿಂತ ಹೆಚ್ಚು ಸಾಧಕವಾಗಿರಬೇಕು. ಎಂಬ ಅಭಿಪ್ರಾಯದಿಂದ. ಆ ಕ್ರಿಯೆಗೆ ಕರಣವಾದ ಇನ್ನೊಂದಕ್ಕಿಂತ ಈ ಕರಣವು ಸಾಧಕತಮವಾಗಬೇಕೆಂಬ ಅಭಿಪ್ರಾಯ ದಿಂದಲ್ಲ. ಹೀಗೆ ಹೇಳದಿದ್ದರೆ ಅಜಯಾ ಕ್ರೀಣಾತಿ, ವಾಸಸಾ ಕ್ರೀಣಾತಿ, ಹಿರಣ್ಯೇನ ಕ್ರೀಣಾತಿ (ಆಡು, ಬಟ್ಟೆ, ಬಂಗಾರ ಆಕಳು ಮುಂತಾದ ಹತ್ತು ದ್ರವ್ಯಗಳನ್ನೂ ಕೊಟ್ಟು ಸೋಮಲತೆಯನ್ನು ಖರೀದಿಸುತ್ತಾರೆ) ಎಂದು ಒಂದೇ ಕಾರ್ಯಕ್ಕೆ ಅನೇಕ ಕರಣಗಳನ್ನು ಸಮುಚ್ಚಯದಿಂದ ನಿರ್ದೇಶ ಮಾಡಿರುವ ಸ್ಥಳದಲ್ಲಿ ಒಂದು ಕರಣವು ಇನ್ನೊಂದು ಕರಣಕ್ಕಿಂತ ಅತಿಶಯಿತಸಾಧಕವಲ್ಲವಾದ್ದರಿಂದ ಕರಣವೇ ಆಗದೆ ಹೋಗಬೇಕಾದೀತು. ಆಗ ಆ ಹತ್ತು ಕರಣಗಳ ಸಮುಚ್ಚಯವು ಕೂಡಲಿಕ್ಕಿಲ್ಲ. ಆದ್ದರಿಂದ ಈ ಸೋಮಕ್ರಯವೆಂಬ ಕ್ರಿಯೆಯನ್ನು ಕುರಿತು ಈ ಹತ್ತೂ ಸಾಧಕತಮವೇ ಆಗಿವೆ (ಇತರ ಕರ್ತೃ ಕರ್ಮಾದಿಗಳಿಗಿಂತ ಹೆಚ್ಚು ಸಾಧಕವಾಗಿವೆ) ಆದ್ದರಿಂದ ಆ ಹತ್ತನ್ನೂ ಕರಣವೆಂದು ಹೇಳಿದ್ದು ಯುಕ್ತವಾಗುತ್ತದೆ. ಅದರಂತೆ ಪ್ರತ್ಯಕ್ಷ ಅನುಮಾನ ಮುಂತಾದ ಪ್ರಮಾಣಗಳಂತೆ ಸಂಸ್ಕಾರ ವಿಶಿಷ್ಟ ಮನಸ್ಸೂ ಕೂಡ ಸಾಧಕತಮವೇ ಆಗಿರುವುದರಿಂದ ಒಂದು ಪ್ರಮಾಣದಿಂದ ಇನ್ನೊಂದು ಪ್ರಮಾಣಕ್ಕೆ ಗತಾರ್ಥತ್ವವಿಲ್ಲ.

### ತಾಮಸರ ಸಾಕ್ಷಿಯ ನಿರ್ದೋಷತ್ವ ನಿಯಮ

ನಿರ್ದೋಷವಾದಂತಹ ಸಾಕ್ಷಿಯು ಸರ್ವತ್ರ ಯಥಾರ್ಥವಾಗಿರುತ್ತದೆ. ಸಾತ್ವಿಕರು ಸಾಕ್ಷಿಯು ಸದಾ ನಿರ್ದೋಷವಾಗಿದ್ದರೂ ತಾಮಸರ

ಸಾಕ್ಷಿಯ ಸ್ವಭಾವ ಹೀಗಿದೆ. ಮಿಥ್ಯಾಜ್ಞಾನ ಸ್ವಭಾವರಾದಂತಹ ಈ ತಾಮಸರ ಸಾಕ್ಷಿಯು ತಮ್ಮ ಸುಖದು:ಖಾದಿಗಳಲ್ಲಿರುವ ಈಶಾಧೀನತ್ವ- ಸತ್ಯತ್ವಾದಿ ಅಂಶಗಳಲ್ಲಿ ಅಯಥಾ ರ್ಥವಾಗಿದ್ದರೂ ಸುಖದು:ಖಾದಿಗಳಲ್ಲಿನ ಸುಖತ್ವ ದು:ಖತ್ವಾದಿ ಅಂಶಗಳಲ್ಲಿ ನಿಯಮೇನ ಯಥಾರ್ಥವಾಗಿರುತ್ತದೆ. ಆದ್ದರಿಂದ ಸಾತ್ವಿಕ - ರಾಜಸ - ತಾಮಸರೆಂಬ ಮೂರು ವಿಧ ಜೀವರಲ್ಲೂ ಸಾಕ್ಷಿಯು ನಿರ್ದೋಷವಾಗಿರುತ್ತದೆ ಎಂದು ಸುಧೆಯಲ್ಲಿ ತ್ರಿವಿಧ ಜೀವ ಸಾಧಾರಣವಾಗಿ ಸಾಕ್ಷಿಗೆ ನಿರ್ದೋಷತ್ವವನ್ನು ಹೇಳಿದ್ದಾರೆ.

ತಾಮಸರ ಸಾಕ್ಷಿಯು ಕೆಲವೊಂದು ಪ್ರಕಾರಗಳಲ್ಲಿ ಅಯಥಾರ್ಥ ವಾದರೆ ಉಳಿದೆಲ್ಲ ಪ್ರಕಾರಗಳಲ್ಲಿಯೂ ಅಯಥಾರ್ಥವೇ ಆಗಬೇಕೆಂಬ ನಿಯಮವಿಲ್ಲ. ಹಾಗೆ ಹೇಳುವುದಾದರೆ ಸುಖಾದಿ ರೂಪಧರ್ಮ್ಯಂಶದಲ್ಲಿ ಹಾಗೂ ಅವುಗಳಲ್ಲಿನ ಇದಂತ್ವಾದಿ ಧರ್ಮಾಂಶದಲ್ಲಿಯೂ ಅಯಥಾರ್ಥವಾಗಬೇಕಾದೀತು. ಆದರೆ ಹಾಗೆ ಕಂಡಿಲ್ಲ. ಆದ್ದರಿಂದ ಕೆಲವು ಕಡೆ ಅಯಥಾರ್ಥವಾದರೂ ಮತ್ತೆ ಕೆಲವು ಕಡೆ ಅಯಥಾರ್ಥ ವಾಗಿಲ್ಲವೆಂದಗೀಕರಿಸಬೇಕು.

**ಭೂತಾಕಾಶವು ಮೂರ್ತಪದಾರ್ಥ**

ಸಂಕರವೆಂಬ ಜಾತಿಬಾಧಕದ ಲಕ್ಷಣವನ್ನು ಹೇಳುವಾಗ ಸುಧೆಯಲ್ಲಿ ಆಕಾಶದಲ್ಲಿ ಮೂರ್ತತ್ವವಿಲ್ಲ. ಆದರೆ ಭೂತತ್ವವಿದೆ. ಹಾಗೂ ಮನಸ್ಸಿನಲ್ಲಿ ಭೂತತ್ವವಿಲ್ಲ, ಮೂರ್ತತ್ವವಿದೆ . ಈ ಭೂತತ್ವಮೂರ್ತತ್ವಗಳೆರಡೂ ಪೃಥಿವೀ, ಅಪ್, ತೇಜಸ್, ವಾಯು, ಎಂಬ ನಾಲ್ಕು ಭೂತಗಳಲ್ಲಿವೆ. ಎಂದು ಉದಾಹರಣೆ ಕೊಟ್ಟಿದ್ದಾರೆ. ಇಲ್ಲಿ ಆಕಾಶದಲ್ಲಿ ಮೂರ್ತತ್ವವಿಲ್ಲವೆಂದು ಹೇಳಿದ್ದು ನ್ಯಾಯಮತದಂತೆ. ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ ಆಕಾಶದಲ್ಲಿಯೂ ಮೂರ್ತತ್ವವಿದೆ, ಹಾಗೂ ಮನಸ್ಸಿನಲ್ಲಿ ಭೂತತ್ವವೂ ಇದೆ. (ಮನಸ್ಸು ಸೃಷ್ಟಿಕಾಲದಲ್ಲಿ ಭೂತಾಂಶಗಳಿಂದ ವೃದ್ಧಿ ಹೊಂದುತ್ತದೆಂದು ಹೇಳಿರುವುದರಿಂದ ಅದೂ ಭೂತವೇ)

**ಮೃದಬ್ರವೀತ್ ಇತ್ಯಾದಿ ವಾಕ್ಯಗಳು ಮುಖ್ಯ ಪ್ರಯೋಗಗಳೇ**

ಮೃದಬ್ರವೀತ್ (ಮಣ್ಣು ಮಾತಾಡಿತು) ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟಿರುವ ಮಣ್ಣೆಂದರೆ ಜಡವಾದ ಮಣ್ಣಲ್ಲ. ಮಣ್ಣಿಗೆ

ಅಭಿಮಾನಿಯಾದ ದೇವತೆ ಎಂದು ಅಭಿಮಾನಿವ್ಯಪದೇಶಸ್ತು ಎಂಬ ಸೂತ್ರದಲ್ಲಿ ಹೇಳಿದ್ದಾರೆ.

ಆದರೆ ಹೀಗೆ ಹೇಳಿದರೆ ಈ ಮೃದಬ್ರವೀತ್ ಎಂಬ ವಾಕ್ಯದ ಕಡೆಯಲ್ಲಿರುವ ತಾಸಾಂ ತ್ರಿವೃತಂ ತ್ರಿವೃತಂ ಏಕೈಕಾಮಕರೋತ್ (ಆ ಮಣ್ಣು ನೀರು ಮತ್ತು ತೇಜಸ್ಸುಗಳನ್ನು ತೆಗೆದುಕೊಂಡು ಅವುಗಳನ್ನು ಬೆರಸಿ ಎಲ್ಲ ಪದಾರ್ಥಗಳನ್ನು ವಿಷ್ಣುವು ಸೃಷ್ಟಿಸಿದ್ದಾನೆ) ಎಂಬ ವಾಕ್ಯದಲ್ಲೂ ಮೃದಭಿಮಾನಿ ದೇವತೆಯನ್ನು ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಜಡವಾದ ಮೃದಾದಿಗಳನ್ನು ಪರಸ್ಪರ ಕೂಡಿಸಿ ಪದಾರ್ಥ ಸೃಷ್ಟಿ ಮಾಡಬಹುದು. ಅವುಗಳ ಅಭಿಮಾನಿ ಚೇತನರನ್ನು ಸೇರಿಸಿ ಪದಾರ್ಥ ಸೃಷ್ಟಿ ಮಾಡಲು ಸಾಧ್ಯವಿಲ್ಲ.

ಈ ಶಂಕೆಯನ್ನು ಅಭಿಮಾನಿವ್ಯಪದೇಶಸ್ತು ಎಂಬ ಸೂತ್ರಕಾರರ ವಚನಕ್ಕೆ ಪರಸ್ಪರ ವಿರೋಧವಾಗದಂತೆ ಪರಿಹಸುವ ಬಗೆ ಹೀಗೆ.

ಅಭಿಮಾನಿವ್ಯಪದೇಶಸ್ತು ಎಂಬಲ್ಲಿ 'ತು' ಶಬ್ದವಿದೆ. ಅದಕ್ಕೆ ಅವಧಾರಣವೆಂದರ್ಥ. ಅದಕ್ಕೆ ಅಭಿಮಾನಿಪದದೊಂದಿಗೆ ಅನ್ವಯವಿದೆ. ಆದ್ದರಿಂದ ಈ ಮೃದಬ್ರವೀತ್ ಮುಂತಾದ ವಾಕ್ಯಗಳು ಅಭಿಮಾನಿಯನ್ನೇ ಹೇಳುತ್ತದೆ. ಜಡವಾದ ಮಣ್ಣು ಮುಂತಾದವುಗಳನ್ನಲ್ಲ ಎಂದರ್ಥವಾಗುತ್ತದೆ. ಅಭಿಮಾನಿಯದೇ ವ್ಯಪದೇಶ ಎಂದು ಹೇಳಿದಾಗ ಆ ಶಬ್ದಗಳು ಮುಖ್ಯ ವೃತ್ತಿಯಿಂದ ಅಭಿಮಾನಿದೇವತೆಯನ್ನೇ ಹೇಳುತ್ತವೆ, ಹೊರತು ಜಡಪದಾರ್ಥಗಳಲ್ಲಿ ಮುಖ್ಯವಾದ ಮೃತ್ ಮುಂತಾದ ಪದಗಳು ಅಮುಖ್ಯ ವೃತ್ತಿಯಿಂದ ಅಭಿಮಾನಿಯನ್ನು ಹೇಳುವುದಿಲ್ಲ. ಎಂದು ಗೊತ್ತಾಗುತ್ತದೆ. ಹಾಗೂ ತ್ರಿವೃತ್ ಕರಣವಾಕ್ಯದಲ್ಲಿ ಆ ಮೃದಾದಿಪದಗಳು ಮುಖ್ಯ ವೃತ್ತಿಯಿಂದ ಜಡವಾದ ಮಣ್ಣು ಮುಂತಾದುವುಗಳನ್ನು ಹೇಳುತ್ತವೆಂದು ಸ್ವೀಕರಿಸುವುದರಿಂದ ಪರಸ್ಪರ ವಿರೋಧವಿಲ್ಲ. ಹೀಗೆ ಮೃದಬ್ರವೀತ್ ಮುಂತಾದ ಪ್ರಯೋಗಗಳು ಮುಖ್ಯ ವೃತ್ತಿಯಿಂದ ಮಾಡಲ್ಪಟ್ಟಿದೆ.

**ಮಾನೈಕ್ಯವಿದ್ದರೂ ಪ್ರಮೇಯವು ಭಿನ್ನವಾದಾಗ ಪುನರುಕ್ತಿಯಿಲ್ಲ**

ನಿರ್ಣಯಮಾಡಲು ಉಪಯೋಗಿಸ್ಪಡುವ ಯುಕ್ತಿಯು ಒಂದೇ ಆದರೂ ಅದರಿಂದ ನಿರ್ಣಯಿಸಲ್ಪಡುವ ವಿಷಯಗಳು ಬೇರೆ ಬೇರೆ ಇದ್ದಾಗ

ಪುನರುಕ್ತಿಯಿಲ್ಲವೆಂದು ಸುಧೆಯಲ್ಲಿ ಹೇಳಿದ್ದಾರೆ. ಅತ ಏವ ಪ್ರಾಣಃ ಎಂಬಧಿಕರಣ ಇದಕ್ಕೆ ಉದಾಹರಣೆ. ಮೊದಲಿಗೆ 'ಅಂತ: ಪ್ರವಿಷ್ಟಂ ಕರ್ತಾರಂ' (ಒಳಗಿರುವ ಕರ್ತಾ) ಮೊದಲಾದ ಶ್ರುತಿಗಳಲ್ಲಿ ಪ್ರತಿಪಾದ್ಯನು ವಿಷ್ಣುವೇ. ಅವನಲ್ಲೇ ಸಮುದ್ರಾಂತಃಸ್ಥಿತತ್ವ ಮೊದಲಾದ ಲಿಂಗಗಳಿವೆಯೆಂದು 'ಸಮುದ್ರೇಽಂತಃ ಕವಯೋ ವಿಚಕ್ಷತೆ' (ಸಮುದ್ರದ ಒಳಗೆ ವಿಷ್ಣುವನ್ನು ಜ್ಞಾನಿಗಳು ನೋಡುತ್ತಾರೆ) ಮುಂತಾದ ಶ್ರುತಿಗಳಿಂದ ತಿಳಿದುಬರುತ್ತದೆ. ಎಂದು'ಅಂತಸ್ತದ್ಧರ್ಮೋ ಪದೇಶಾತ್' ಎಂಬ ಸೂತ್ರದಲ್ಲಿ ಲಿಂಗಗಳಿಂದ ನಿರ್ಣಯಿಸಲಾಗಿದೆ.

ನಂತರ ಆಕಾಶಾಧಿಕರಣದಲ್ಲಿಯೂ 'ಕೋ ಹ್ಯೇವಾನ್ಯಾತ್ ಕ: ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' (ಈ ಆಕಾಶವು ಆನಂದ ರೂಪವಾಗದಿದ್ದರೆ ಬೇರೆ ಯಾರು ಪ್ರವೃತ್ತಿ ಹೊಂದುತ್ತಾರೆ? ಬೇರಾರು ಬದುಕುತ್ತಾರೆ?) ಎಂಬ ಶ್ರುತಿಯಲ್ಲಿರುವ ಆಕಾಶನು ವಿಷ್ಣುವೇ ಏಕೆಂದರೆ 'ಸ ಏಷ ಪರೋವರೀಯಾನ್' (ಈ ಅಕಾಶವು ಸರ್ವೋತ್ಕೃಷ್ಟ ) ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವೋತ್ಕೃಷ್ಟತ್ವವು ಈ ಪರಮಾತ್ಮನಿಗೇ ಯುಕ್ತವಾಗಿದೆ. ಅನೇಕ ಶ್ರುತಿಸ್ಮೃತಿಗಳು ಪರಮಾತ್ಮನೇ ಸರ್ವೋತ್ತಮ ನೆಂದು ಸಾರುತ್ತವೆ. ಆದ್ದರಿಂದ ಸರ್ವೋತ್ಕೃಷ್ಟನು ವಿಷ್ಣುವೇ ಎಂದು ಲಿಂಗಗಳಿಂದಲೇ ತೀರ್ಮಾನಿಸಿದ್ದಾರೆ.

ನಂತರದ 'ಅತ ಏವ ಪ್ರಾಣ:' ಎಂಬಧಿಕರಣದಲ್ಲಿಯೂ 'ತದ್ವೈತ್ವಂ ಪ್ರಾಣೋ ಅಭವ:' (ನೀನು ಪ್ರಾಣನಾಗಿದ್ದೀ) ಎಂದು ಹೇಳಲ್ಪಟ್ಟ ಪ್ರಾಣನು ವಿಷ್ಣವೇ. ಅವನಲ್ಲೇ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಅಹೋರಾತ್ರೇ ಪಾರ್ಶ್ವೇ' (ಎದೆಯಲ್ಲಿರುವ ಶ್ರೀ ಮತ್ತು ಲಕ್ಷ್ಮೀದೇವಿಯರು ಹಗಲಿರುಳೂ ನಿನ್ನ ಬದಿಯಲ್ಲಿರುತ್ತಾರೆ) ಎಂದು ಹೇಳಲ್ಪಟ್ಟ ಶ್ರೀಲಕ್ಷ್ಮೀಪತಿತ್ವ ಲಿಂಗವು ಕೂಡತ್ತದೆ. ಆದ್ದರಿಂದ ವಿಷ್ಣುವೇ ಪ್ರಾಣನು ಎಂದು ಲಿಂಗದಿಂದಲೇ ತೀರ್ಮಾನಿಸಲಾಗಿದೆ.

ಹೀಗೆ ಮೂರು ಅಧಿಕರಣಗಳಲ್ಲಿ ನಿರ್ಣಾಯಕ ಪ್ರಮಾಣವು ನಿರವಕಾಶ ಲಿಂಗವೇ ಆದರೂ ಪುನರುಕ್ತಿಯಿಲ್ಲ 'ಅಂತಸ್ತದ್ಧರ್ಮೋಪ

ದೇಶಾತ್' ಎಂಬಲ್ಲಿ ಇಂದ್ರ,ವರುಣ ಮೊದಲಾದ ಅಧಿದೈವ (ದೇವತಾ ವಾಚಕ) ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ.

ಆಕಾಶಾಧಿಕರಣದಲ್ಲಿ ಆಕಾಶ ಮೊದಲಾದ ಅಧಿಭೂತ ವಾಚಕ ಶಬ್ದಗಳ ಪ್ರವೃತ್ತಿನಿಮಿತ್ತಧರ್ಮಗಳು ಪರಮಾತ್ಮನ ಅಧೀನವಾಗಿರುವು ದರಿಂದ ಅವುಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ.

ಪ್ರಾಣಾಧಿಕರಣದಲ್ಲಿ ಪ್ರಾಣ ಮೊದಲಾದ ಅಧ್ಯಾತ್ಮ ವಾಚಕ ಶಬ್ದಗಳ ಪ್ರವೃತ್ತಿ ನಿಮಿತ್ತ ಧರ್ಮಗಳು ಪರಮಾತ್ಮನಲ್ಲಿರುವುದರಿಂದ ಆ ಶಬ್ದಗಳ ಸಮನ್ವಯ ಮಾಡಲಾಗಿದೆ. ಆದ್ದರಿಂದ ಲಿಂಗಗಳೇ ನಿರ್ಣಾಯಕವಾದ ಅಧಿದೈವ-ಅಧಿಭೂತ-ಅಧ್ಯಾತ್ಮಗತ ಶಬ್ದಗಳ ಭೇದದಿಂದ ನಿರ್ಣಯಿಸಲ್ಪಡುವ ಪ್ರಮೇಯ ಬೇರೆಯಾದ್ದರಿಂದ ಮೂರು ಅಧಿಕರಣಗಳಿವೆ. ಮೊದಲ ಎರಡು ಅಧಿಕರಣಗಳಿಂದ ಮೂರನೇ ಪ್ರಾಣಾಧಿಕರಣವು ಪುನರುಕ್ತವಾಗುವುದಿಲ್ಲ ಹಾಗೆಯೇ ಎಲ್ಲ ಕಡೆಗಳಲ್ಲಿ ಪ್ರಮೇಯ ಭೇದವಿದ್ದಾಗ ಪುನರುಕ್ತಿಯಿರುವುದಿಲ್ಲ. ಹಾಗೆಯೇ ಪ್ರಮೇಯ ಒಂದೇ ಆದರೂ ಪ್ರಮಾಣ ಭೇದವಿದ್ದಾಗ ಪುನರುಕ್ತಿಯಿರುವುದಿಲ್ಲ.

**ಫಲವೂ ತಾತ್ಪರ್ಯಲಿಂಗ (ಅರ್ಥನಿರ್ಣಾಯಕ)**

'ಉಪಕ್ರಮೋಪಸಂಹಾರೌ ಅಭ್ಯಾಸೋऽಪೂರ್ವತಾ ಫಲಮ್ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ' (ಪ್ರಾರಂಭ, ಅಂತ್ಯ, ಪುನರುಕ್ತಿ, ಅಪೂರ್ವತೆ, ಫಲಂ, ಅರ್ಥವಾದ, ಹಾಗೂ ಯುಕ್ತಿಗಳು ತಾತ್ಪರ್ಯನಿರ್ಣಾಯಕ ಹೇತುಗಳು) ಎಂದು ಹೇಳಲ್ಪಟ್ಟ ಲಿಂಗಗಳಲ್ಲಿ ಫಲವೂ ಒಂದು. ಅದು ನಿರ್ಣಾಯಕವಾಗುವುದಕ್ಕೆ ನಿದರ್ಶನಗಳು ಹೀಗಿವೆ - ಜೀವಬ್ರಹ್ಮರ ಅಭೇದವನ್ನು ಪ್ರತಿಪಾದಿಸುತ್ತವೆಂದು ತೋರುವ 'ತತ್ತ್ವಮಸಿ' ಮುಂತಾದ ವಾಕ್ಯಗಳು ನಿಜವಾಗಿಯೂ ಅಭೇದವನ್ನೇ ಪ್ರತಿಪಾದಿಸುತ್ತವೋ? ಅಥವಾ ಉಳಿದೆಲ್ಲ ವೇದವಾಕ್ಯಗಳಂತೆ ಪರಮಾತ್ಮನ ಗುಣೋತ್ಕರ್ಷವನ್ನು ಪ್ರತಿಪಾದಿಸುತ್ತವೋ? ಎಂಬುದಾಗಿ ವಿಚಾರವು ಪ್ರಸ್ತುತವಾಗಿದೆ. ಆಗ ಯಾವನು ರಾಜನೆದುರು ನಿಂತು ನಾನೇ ರಾಜನೆಂದು ಅನ್ನುತ್ತಾನೋ ಅವನನ್ನು ರಾಜನು ಶಿಕ್ಷಿಸುತ್ತಾನೆ. ಯಾವನು ರಾಜನನ್ನು ಚೆನ್ನಾಗಿ ಪ್ರಶಂಸಿಸುತ್ತಾನೋ ರಾಜನು ಅವನಿಗೆ ಬೇಕಾದ ಸಕಲ

ಸಂಪತ್ತನ್ನೂ ಕೊಡುತ್ತಾನೆ ಎಂಬ ದೃಷ್ಟಾಂತವನ್ನು ತೋರಿಸಿ ಪರಮಾತ್ಮನೂ ಹಾಗೆ ನಾನೇ ಪರಮಾತ್ಮನೆಂಬುವರನ್ನು ಶಿಕ್ಷಿಸುತ್ತಾನೆ. ಹಾಗೂ ತನ್ನ ಗುಣೋತ್ಕರ್ಷವನ್ನು ತಿಳಿದವರಿಗೆ ಸಕಲ ಅಭೀಷ್ಟವನ್ನು ಕೊಡುತ್ತಾನೆ. ಎಂದು ಶ್ರುತಿಗಳು ಹೇಳುತ್ತವೆ. ಆದ್ದರಿಂದ ಗುಣೋತ್ಕರ್ಷಜ್ಞಾನವು ಸಫಲವಾದ್ದರಿಂದ 'ತತ್ವಮಸಿ' ಮುಂತಾದ ವೇದವಾಕ್ಯಗಳಿಗೂ ಗುಣೋತ್ಕರ್ಷ ಪ್ರತಿಪಾದಕತ್ವವೇ ಇದೆ. ಅಭೇದ ಜ್ಞಾನವು ಸಫಲವಲ್ಲವಾದ್ದರಿಂದ ಈ ವಾಕ್ಯಗಳಿಗೆ ಅಭೇದ ಪ್ರತಿಪಾದಕತ್ವವಿಲ್ಲ. 'ತತ್ವಮಸಿ' ಮಂತಾದ ವಾಕ್ಯಗಳು ಪರಮಾತ್ಮನಂತೆ ಜೀವನೂ ಆನಂದಾದಿಗುಣವುಳ್ಳವನಾದ್ದರಿಂದಲೇ ಪರಮಾತ್ಮನೇ ಜೀವನೆಂದು ಹೇಳಲ್ಪಡುತ್ತಾನೆ ವಾಸ್ತವಿಕವಾಗಿ ಅಭೇದವಿಲ್ಲವೆಂದು ತದ್ಗುಣಸಾರತ್ವಾಧಿ ಕರಣದಲ್ಲಿ ತೀರ್ಮಾನಿಸಲಾಗಿದೆ. ಹಾಗೆಯೇ 'ಅಸತ: ಸದಜಾಯತ' (ಅಸತ್ತಿನಿಂದ ಸತ್ ಹುಟ್ಟಿತು) ಎಂಬ ವಾಕ್ಯ ಅಸತ್ತಿನಿಂದ ಸತ್ ಆದ ಪರಮಾತ್ಮನ ಉತ್ಪತ್ತಿಯನ್ನು ಹೇಳುತ್ತದೋ ಅಥವಾ ಅಸತ್ ನಾಮಕ ಭಗವಂತನಿಂದ ಸನ್ನಾಮಕವಾಯುವಿನ ಉತ್ಪತ್ತಿಯನ್ನು ಹೇಳುತ್ತದೋ ಎಂದು ನಿರ್ಣಯಿಸಬೇಕಾದಾಗ ಪರಮಾತ್ಮನ ಉತ್ಪತ್ತಿಯು ನಿಷ್ಫಲ ವಾದ್ದರಿಂದ ಹಾಗೂ ಅಸಂಭವಿಯಾದ್ದರಿಂದ ಅದನ್ನು ಹೇಳಿ ಏನೂ ಪ್ರಯೋಜನವಿಲ್ಲ. ಆದರೆ ವಾಯುವಿನ ಉತ್ಪತ್ತಿಯು ಪ್ರಯೋಜನ ವುಳ್ಳದ್ದಾದ್ದರಿಂದ ಈ ವಾಕ್ಯವು ವಾಯೂತ್ಪತ್ತಿ ಪ್ರತಿಪಾದಕವೆಂದು 'ಅಸಂಭ ವಸ್ತು ಸತೋಽನುಪಪತ್ತೇ:' ಎಂಬ ಅಧಿಕರಣದಲ್ಲಿ ತೀರ್ಮಾನಿಸಲಾಗಿದೆ.

## ಯತೇತ್ ಎಂಬ ಪ್ರಯೋಗ ಸಾಧು

'ಸ್ವನಾಶಾರ್ಥಂ ಚ ಕೋ ಯತೇತ್' (ತನ್ನ ನಾಶಕ್ಕಾಗಿ ತಾನೇ ಪ್ರಯತ್ನಿಸುವವನು ಯಾರು?) ಎಂದು 'ಯತೇತ್' ಎಂಬ ಧಾತುವನ್ನು ಪರಸ್ಮೈಪದವಾಗಿ ಪ್ರಯೋಗಿಸಿದ್ದಾರೆ. ಅದು ವಾಸ್ತವಿಕವಾಗಿ ಆತ್ಮನೇಪದ ದಲ್ಲಿದ್ದು 'ಯತೇತ' ಎಂದಾಗಬೇಕಾಗಿತ್ತು. ಆದರೆ ಪಾಣಿನಿಗಳು ತಮ್ಮ ಧಾತುಪಾಠದಲ್ಲಿಯೇ ಧಾತುಗಳ ಪರಸ್ಮೈಪದ ಆತ್ಮನೇಪದಗಳು ಹೆಚ್ಚಾಗಿ ಹೀಗೆಯೇ ಇವೆ. ಆದರೆ ಎಷ್ಟೋ ಕಡೆ ದೊಡ್ಡವರ ಪ್ರಯೋಗಗಳಲ್ಲಿ ಅವುಗಳು ವ್ಯತ್ಯಾಸವಾಗಬಹುದು ಎಂದು ಹೇಳಿದ್ದಾರೆ. ಆದ್ದರಿಂದ ಇಂದ -

ಚಂದ್ರ- ಕಾಶಕೃತ್ಸ್ನ - ಆಪಿಶಲಿ- ಶಾಕಟಾಯನ - ಪಾಣಿನಿ- ಅಮರ - ಜೈನೇಂದ್ರ ಎಂಬ ಎಂಟು ವ್ಯಾಕರಣಕಾರರ ಮತದಂತೆ ಅವುಗಳು ಬೇರೆ ಬೇರೆ ಆಗಬಹುದು. ಆದ್ದರಿಂದಲೇ ಚಾಂದ್ರ ಮೊದಲಾದ ವ್ಯಾಕರಣಕಾರರು (ಚಾಂದ್ರಾದಯಸ್ತು ಮನ್ಯಂತೇ ಸರ್ವಸ್ಮಾದುಭಯಂ ಪದಮ್) ಎಲ್ಲ ಧಾತುಗಳೂ ಈ ಎರಡು ಆತ್ಮನೇಪದ ಪರಸ್ಮೈ ಪದಗಳಲ್ಲಿವೆ ಎಂದು ಹೇಳುತ್ತಾರೆ'. ಎಂಬ ಮಾತಿನಂತೆ ಯತೀ ಪ್ರಯತ್ನೇ ಎಂಬ ಧಾತುವನ್ನು ಪರಸ್ಮೈಪದದಲ್ಲಿ ಪ್ರಯೋಗಿಸಿದ್ದು ತಪ್ಪಲ್ಲ.

**ವೈಶೇಷಿಕರ ವಿಶೇಷಲಕ್ಷಣ ಪರಿಷ್ಕಾರ.**

ಸುಧಾದಲ್ಲಿ ವೈಶೇಷಿಕಮತದ ಅನುವಾದ ಸಂಧರ್ಭದಲ್ಲಿ 'ನಿತ್ಯೇಷ್ವೇವ ದ್ರವ್ಯೇಷ್ವೇವ ವರ್ತಂತೇ ಏವ ಯೇ ತೇ ವಿಶೇಷಾ:' ಎಂದು ಲಕ್ಷಣ ಹೇಳಿದ್ದಾರೆ. (ನಿತ್ಯವಾದ ದ್ರವ್ಯಗಳಲ್ಲಿ ಮಾತ್ರ ನಿಯತವಾಗಿ ಇರುವ ಪದಾರ್ಥಗಳೇ ವಿಶೇಷಗಳು ಎಂದು ಅದಕ್ಕೆ ಸಾಮಾನ್ಯವಾದ ಅರ್ಥ) ಅದರ ಪ್ರತಿಯೊಂದು ಪದಗಳಿಗೂ ಈ ರೀತಿ ಪ್ರಯೋಜನಗಳಿವೆ.

೧) 'ವರ್ತಂತೇ' ಎಂದಷ್ಟೇ ಹೇಳಿದರೆ ಘಟಪಟಾದಿಗಳೂ ವರ್ತಮಾನವಾದ್ದರಿಂದ ಅವುಗಳಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ವರ್ತಂತೇ ಏವ' ಎಂದು ಹೇಳಬೇಕು. 'ಯಾವಾಗಲೂ ಇರುವವು' ಎಂದು ಅದರರ್ಥ. ಘಟಾದಿಗಳು ಯಾವಾಗಲೂ ಇರುವುದಿಲ್ಲವಾದ್ದರಿಂದ ಅವುಗಳಲ್ಲಿ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ರೂಪತ್ವಾದಿ ನಿತ್ಯವಾದ ಜಾತಿಗಳಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ದ್ರವ್ಯೇಷು' (ದ್ರವ್ಯಗಳಲ್ಲಿರುವುದು) ಎಂದು ಹೇಳಿದ್ದಾರೆ. ರೂಪತ್ವಾದಿಗಳು ರೂಪಾದಿಗುಣಗಳಲ್ಲಿ ಮಾತ್ರ ಇವೆ. ದ್ರವ್ಯಗಳಲ್ಲಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ದ್ರವ್ಯದಲ್ಲೂ ಇರುವ ನಿತ್ಯವಾದ ಸತ್ತಾ ಜಾತಿಯಲ್ಲಿ ಅತಿವ್ಯಾಪ್ತಿ. ಆದ್ದರಿಂದ ದ್ರವ್ಯೇಷ್ವೇವ (ದ್ರವ್ಯಗಳಲ್ಲೇ ಇರುವುದು) ಎಂದು ಹೇಳಿದ್ದಾರೆ. ಸತ್ತಾ ಜಾತಿಯು ಗುಣದಲ್ಲೂ ಇರುವುದರಿಂದ ಅಲ್ಲಿ ಈಗ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ಘಟಾದಿ ದ್ರವ್ಯದಲ್ಲಿ ಮಾತ್ರ ಇರುವ ಘಟತ್ವಾದಿ ನಿತ್ಯಜಾತಿಯಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ನಿತ್ಯೇಷು' (ನಿತ್ಯವಾದ ದ್ರವ್ಯದಲ್ಲಿರುವುದು) ಎಂದು ಹೇಳಿದ್ದಾರೆ. ಎಲ್ಲ ಘಟಗಳು ಅನಿತ್ಯವೇ

ಆದ್ದರಿಂದ ಘಟತ್ವ ಜಾತಿಯು ನಿತ್ಯದ್ರವ್ಯವೃತ್ತಿಯಾಗಿಲ್ಲ. ಆದ್ದರಿಂದ ಈಗ ಅದರಲ್ಲಿ ಅತಿ ವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ಮತ್ತೆ ನಿತ್ಯದ್ರವ್ಯಗಳಲ್ಲೂ ಇರುವ ನಿತ್ಯವಾದ ದ್ರವ್ಯತ್ವ ಜಾತಿಯಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ನಿತ್ಯೇಷ್ವೇವ' (ನಿತ್ಯದ್ರವ್ಯಗಳಲ್ಲಿ ಮಾತ್ರ ಇರುವುದು) ಎಂದು ಹೇಳಿದ್ದಾರೆ. ಆದ್ದರಿಂದ ನಿತ್ಯಾ ನಿತ್ಯದ್ರವ್ಯಗಳಲ್ಲಿರುವ ದ್ರವ್ಯತ್ವ ಜಾತಿಯಲ್ಲಿ ಅತಿವ್ಯಾಪ್ತಿಯಿಲ್ಲ.

೨) 'ನಿತ್ಯೇಷು ವರ್ತಂತೇ ವಿಶೇಷಾ:' (ನಿತ್ಯವಾದವುಗಳಲ್ಲಿ ಇರುವವು ವಿಶೇಷಗಳು) ಎಂದಷ್ಟೇ ಹೇಳಿದರೆ ನಿತ್ಯವಾದ ಪರಮಾಣುಗಳಲ್ಲಿರುವ ರೂಪರಸಾದಿಗಳಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ವರ್ತಂತೇ ಏವ' (ಯಾವಾಗಲೂ ಇರುವವು) ಎಂದು ಹೇಳಿದ್ದಾರೆ. ಪರಮಾಣು ರೂಪಾದಿಗಳು ಪಾಕದಿಂದ ಉತ್ಪತ್ತಿ ನಾಶಗಳನ್ನು ಹೊಂದುವುದರಿಂದ ಯಾವಾಗಲೂ ಇರುವುದಿಲ್ಲ. ಆದ್ದರಿಂದ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ನಿತ್ಯವಾದವುಗಳಲ್ಲೂ ಇರುವ ನಿತ್ಯವಾದ ಸತ್ತಾ ಜಾತಿಯಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ನಿತ್ಯೇಷ್ವೇವ' (ನಿತ್ಯವಾದವುಗಳಲ್ಲಿ ಮಾತ್ರ ಇರುವವು) ಎಂದು ಹೇಳಿದ್ದಾರೆ. ಸತ್ತಾ ಜಾತಿಯು ಅನಿತ್ಯವಾದ ಘಟಾದಿಗಳಲ್ಲೂ ಇರುವುದರಿಂದ ಅದರಲ್ಲಿ ಈಗ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ಆಪ್ಯ ಪರಮಾಣುವಿನ ನಿತ್ಯವಾದ ರೂಪದಲ್ಲಿರುವ ರೂಪತ್ವವು ನಿತ್ಯವಾದವುಗಳಲ್ಲಿ ಮಾತ್ರ ಇರುವುದರಿಂದ ಅದರಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ದ್ರವ್ಯೇಷು' (ನಿತ್ಯದ್ರವ್ಯಗಳಲ್ಲಿರುವವು) ಎಂದು ಹೇಳಿದ್ದಾರೆ. ಅಷ್ಟೇ ಹೇಳಿದರೆ ಪರಮಾಣು ಮತ್ತು ಅದರ ಪರಿಮಾಣ (ಪಾರಿಮಾಂಡ್ಲ್ಯ) ಗಳಲ್ಲಿರುವ ಅನ್ಯತರತ್ವವೆಂಬ ಧರ್ಮವೂ ನಿತ್ಯವಾದ ಪರಮಾಣುವೆಂಬ ದ್ರವ್ಯದಲ್ಲಿರುವುದರಿಂದ ಅದರಲ್ಲಿ ಅತಿವ್ಯಾಪ್ತಿ. ಆದ್ದರಿಂದ 'ದ್ರವ್ಯೇಷ್ವೇವ' (ನಿತ್ಯವಾದ ದ್ರವ್ಯಗಳಲ್ಲಿ ಮಾತ್ರ ಇರುವವು) ಎಂದು ಹೇಳಿದ್ದಾರೆ. ಆ ಅನ್ಯತರತ್ವವು ಪರಿಮಾಣದಲ್ಲೂ ಇರುವುದರಿಂದ ದ್ರವ್ಯದಲ್ಲಿ ಮಾತ್ರವಿಲ್ಲ. ಆದ್ದರಿಂದ ಅದರಲ್ಲಿ ಅತಿವ್ಯಾಪ್ತಿಯಿಲ್ಲ. 'ನಿತ್ಯೇಷು ದ್ರವ್ಯೇಷ್ವೇವ ವರ್ತಂತೇ ಏವ ಯೇ ತೇ ವಿಶೇಷಾ:'. (ನಿತ್ಯವಾದ ದ್ರವ್ಯಗಳಲ್ಲಿ ಮಾತ್ರ ನಿಯತವಾಗಿರುವವು ವಿಶೇಷಗಳು) ಎಂದಷ್ಟೇ ಹೇಳಿದರೂ ದ್ರವ್ಯತ್ವ - ಹಾಗೂ ದ್ರವ್ಯದಲ್ಲಿನ ಗುಣಕರ್ಮಗಳ ಧ್ವಂಸಗಳಲ್ಲಿ ಅತಿವ್ಯಾಪ್ತಿ.

(ಅವುಗಳೂ ನಿತ್ಯವಾದ್ದರಲ್ಲೂ ಇವೆ. ಹಾಗೆ ಸದಾ ದ್ರವ್ಯಗಳಲ್ಲೇ ಇವೆ.) ಆದ್ದರಿಂದ 'ನಿತ್ಯೇಷ್ವೇವ' (ನಿತ್ಯವಾದವುಗಳಲ್ಲಿ ಮಾತ್ರ ಇರುವವು) ಎಂದು ಹೇಳಿದ್ದಾರೆ. ದ್ರವ್ಯತ್ವಾದಿಗಳು ನಿತ್ಯಾನಿತ್ಯ ದ್ರವ್ಯಗಳಲ್ಲಿರುವುದರಿಂದ ಅಲ್ಲಿ ಅತಿವ್ಯಾಪ್ತಿಯಿಲ್ಲ. ಹೀಗೆ 'ನಿತ್ಯೇಷ್ವೇವ ದ್ರವ್ಯೇಷ್ವೇವ ವರ್ತಂತೇ ಏವ ಯೇ ತೇ ವಿಶೇಷಾ:' ಎಂಬ ವಿಶೇಷ ಲಕ್ಷಣಕ್ಕೆ ಎಲ್ಲೂ ಅತಿವ್ಯಾಪ್ತಿಯಿಲ್ಲ. ಹಾಗೂ ವಿಶೇಷಗಳು ನಿತ್ಯವಾದ ಪರಮಾಣು ಆಕಾಶಾದಿಗಳಲ್ಲಿ ಮಾತ್ರವಿರುವುದರಿಂದ ಅವುಗಳಲ್ಲಿ ಲಕ್ಷಣಕ್ಕೆ ಸಮನ್ವಯವಿದೆ. (ಹೀಗೆ ಕ್ರಮ ವ್ಯುತ್ಕ್ರಮಗಳಿಂದ ಎರಡು ರೀತಿ ವಿಶೇಷಣ ಪ್ರಯೋಜನ ತೋರಿಸಲಾಗಿದೆ.)

## 'ದೃಷ್ಟಾಂತಾಚ್ಚ' ಎಂಬ ನ್ಯಾಯಸೂತ್ರದ ವ್ಯಾಖ್ಯಾನ

ಒಂದೇ ಪದಾರ್ಥದಲ್ಲಿ ಪರಸ್ಪರ ವಿರುದ್ಧವಾದ ಅಣುತ್ವ ಮತ್ತು ಮಹತ್ವಗಳು ಇರಲು ಸಾಧ್ಯವಿಲ್ಲವೆಂದು ವೈಶೇಷಿಕರ ಅಭಿಪ್ರಾಯ. (ಅದನ್ನು ಅನುವ್ಯಾಖ್ಯಾನದಲ್ಲಿ ನಿರಾಕರಿಸಿದ್ದಾರೆ) ಒಂದೇ ವಸ್ತುವಿನಲ್ಲಿ ಅಣುತ್ವ ಮಹತ್ವಗಳು ಇಲ್ಲದೇ ಹೋದರೆ 'ಕಮಲಬೀಜಕ್ಕಿಂತ ನೆಲ್ಲಿಕಾಯಿ ದೊಡ್ಡದು ಅದಕ್ಕಿಂತ ಬಿಲ್ವದ ಫಲ ದೊಡ್ಡದೆಂದು ಲೌಕಿಕರು ವ್ಯವಹರಿಸುವುದು ಸರಿಯಲ್ಲವೆಂದಾಗುತ್ತದೆ. ಕಮಲಬೀಜಕ್ಕಿಂತ ನೆಲ್ಲಿಕಾಯಿ ದೊಡ್ಡದೆಂದು ಅಂಗೀಕರಿಸಿದಾಗ ಅದರಲ್ಲಿ ಮಹತ್ವ ಒಪ್ಪಿದಂತಾಯಿತು. ಹಾಗೂ ನೆಲ್ಲಿಕಾಯಿಗಿಂತ ಬಿಲ್ವ ಫಲ ದೊಡ್ಡದೆಂದು ಹೇಳಿದಾಗ ಅರ್ಥಾತ್ ಬಿಲ್ವ ಫಲಕ್ಕಿಂತ ನೆಲ್ಲಿಕಾಯಿ ಸಣ್ಣದೆಂದು ಒಪ್ಪಿದಂತಾಯಿತು. ಆದ್ದರಿಂದ ಅದರಲ್ಲಿ ಬಿಲ್ವ ಫಲಕ್ಕಿಂತ ಅಣುತ್ವ ಇದೆಯೆಂದು ಸ್ವೀಕರಿಸಬೇಕು. ಹೀಗೆ ಒಂದೇ ನೆಲ್ಲಿಕಾಯಿಯಲ್ಲಿ ಅಣುತ್ವ ಮಹತ್ವಗಳು ಸೇರುತ್ತವೆ. ಇಲ್ಲದಿದ್ದರೆ ಹಾಗೆ ಲೌಕಿಕವ್ಯವಹಾರವು ಯುಕ್ತವಾಗುವುದಿಲ್ಲ ಎಂಬ, ಶಂಕೆಗೆ ವೈಶೇಷಿಕರ ಉತ್ತರ ಹೀಗಿದೆ - ಬಿಳಿ ಬಟ್ಟೆ- ಶಂಖ - ಹಾಗೂ ಸ್ಫಟಿಕಗಳಲ್ಲಿ ಬಟ್ಟೆಗಿಂತ ಶಂಖ ಹೆಚ್ಚು ಬಿಳಿ. ಹಾಗೂ ಶಂಖಕ್ಕಿಂತ ಸ್ಫಟಿಕವು ಮತ್ತೂ ಹೆಚ್ಚು ಬಿಳಿ ಎಂದು ಲೌಕಿಕರು ವ್ಯವಹಾರ ಮಾಡುತ್ತಾರೆ. ಆದರೆ ಸ್ಫಟಿಕ ಮತ್ತು ಶಂಖಗಳಿಗಿಂತ ಬಟ್ಟೆಯು ಹೆಚ್ಚು ಬಿಳಿಯೆಂದು ಲೌಕಿಕರು ವ್ಯವಹಾರ ಮಾಡದಿದ್ದರೂ ಬಟ್ಟೆಯು ಎಂದೂ ನೀಲಿ ಆಗುವುದಿಲ್ಲ. ಅದು ಯಾವತ್ತೂ ಬಿಳಿಯೇ

ಆಗಿರುತ್ತದೆ. ಹಾಗೆಯೇ ಆ ದೃಷ್ಟಾಂತದಂತೆ ಕಮಲ ಬೀಜಕ್ಕಿಂತ ನೆಲ್ಲಿಕಾಯಿ ದೊಡ್ಡದು =ಮಹತ್ತರ , ಹಾಗೂ ನೆಲ್ಲಿಕಾಯಿಗಿಂತ ಬಿಲ್ವ ಫಲವು ಇನ್ನೂ ಹೆಚ್ಚು ದೊಡ್ಡದು =ಮಹತ್ತಮ. ಆದ್ದರಿಂದ ಹಿಂದಿನವುಗಳನ್ನು ಅಣುವೆಂದು ವ್ಯವಹಾರ ಮಾಡುತ್ತಾರೆ. ಅಂದ ಮಾತ್ರಕ್ಕೆ ಹಿಂದಿನವುಗಳು ಅಣುವೇ ಆಗುವುದಿಲ್ಲ, ಮಹತ್ತೇ ಆಗಿರುತ್ತವೆ. ಹಿಂದಿನವುಗಳಲ್ಲಿರುವ ಅಣುತ್ವವ್ಯವಹಾರವು ಗೌಣ. ಮುಖ್ಯವಲ್ಲ. (ಪರಮಾಣು ಮತ್ತು ದ್ವ್ಯಣುಕಗಳು ಮಾತ್ರ ಅಣು ಪರಿಮಾಣ ಉಳ್ಳವುಗಳು. ಬೇರೆ ತ್ರ್ಯಣುಕಾದಿಗಳು ಮಹತ್ತೇ ಎಂದು ಅವರ ಮತ.)

**ಆಚಾರ್ಯರ ಪ್ರಕಾರ ಪರಮಾಣು ಲಕ್ಷಣ.**

'ಅವಿಭಾಗ: ಪರಾಣುತಾ' ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಪರಮಾಣುವಿನ ಲಕ್ಷಣ ಹೇಳಿದ್ದಾರೆ. ಅದಕ್ಕೆ ಜಯತೀರ್ಥರು 'ಯಸ್ಯ ವಿಭಿನ್ನಾವಯವೇಷು ಸತ್ಸ್ವಪಿ ತೇಷಾಂ ವಿಭಾಗೋ ನ ಕದಾಪಿ ಭವಿತು ಮರ್ಹತಿ ಸ ಪರಮಾಣು:' (ಯಾವುದಕ್ಕೆ ವಿಭಿನ್ನವಾದ ಅವಯವಗಳಿದ್ದರೂ ಅವುಗಳು ಯಾವತ್ತೂ ವಿಭಾಗ ಹೊಂದುವುದಿಲ್ಲವೋ ಅದೇ ಪರಮಾಣು) ಎಂದು ವ್ಯಾಖ್ಯಾನಿಸಿದ್ದಾರೆ. ಆ ಲಕ್ಷಣದ ದಲಗಳ ಪ್ರಯೋಜನಗಳು ಹೀಗಿವೆ. ಯಾವುದರ ಅವಯವಗಳ ವಿಭಾಗವಾಗುವುದಿಲ್ಲವೋ ಅದು ಪರಮಾಣು ಎಂದಷ್ಟೇ ಹೇಳಿದರೆ ಆಕಾಶವು ಸಾಂಶವಾಗಿದ್ದರೂ ಅದರ ಅವಯವಗಳಿಗೂ ಪರಸ್ಪರ ವಿಭಾಗವಿಲ್ಲವಾದ್ದರಿಂದ ಆಕಾಶದಲ್ಲಿ ಪರಮಾಣು ಲಕ್ಷಣಕ್ಕೆ ಅತಿವ್ಯಾಪ್ತಿ ಆದ್ದರಿಂದ 'ವಿಭಿನ್ನಾವಯವೇಷು ಸತ್ಸು' (ಭಿನ್ನವಾದ ಅವಯುವಗಳಿದ್ದರೂ) ಎಂದು ಸೇರಿಸಬೇಕು. ಆಕಾಶದ ಅವಯುವಗಳು ಭಿನ್ನವಲ್ಲವಾದ್ದರಿಂದ ಅದರಲ್ಲಿ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ. ಅಷ್ಟೇ ಹೇಳಿದರೆ ಯಾವ ಘಟವು ತನ್ನ ಅವಯುವ ಕಪಾಲಗಳ ನಾಶದಿಂದ ನಷ್ಟವಾಗಿದೆಯೋ ಅಲ್ಲಿಯೂ ವಿಭಿನ್ನವಾದ ಅವಯುವಗಳಿದ್ದರೂ ಅವುಗಳಿಗೆ ಪರಸ್ಪರ ವಿಭಾಗವಾಗಿಲ್ಲ (ವಿಭಾಗವಾಗುವ ಮೊದಲೇ ಕಪಾಲಗಳು ನಾಶಹೊಂದಿವೆ.) ಹಾದ್ದರಿಂದ ಆ ಘಟದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ 'ವಿಭಾಗೋ ನ ಭವಿತುಮರ್ಹತಿ' ಎಂದು ಅವಯುವಗಳಲ್ಲಿ

ವಿಭಾಗದ ಯೋಗ್ಯತೆಯೇ ಇರಬಾರದೆಂದು ಹೇಳಿದ್ದಾರೆ. ಈ ಕಪಾಲ ನಾಶದಿಂದ ನಷ್ಟವಾದ ಘಟದಲ್ಲಿ ಅವಯವಗಳಿಗೆ ಪರಸ್ಪರ ವಿಭಾಗವಿಲ್ಲದಿದ್ದರೂ, ತತ್‌ಸಜಾತೀಯವಾದ ಇನ್ನೊಂದು ಘಟದಲ್ಲಿ (ಅವಯವ ನಾಶದಿಂದ ನಾಶ ಹೊಂದದ ಘಟದಲ್ಲಿ) ಅವಯವಗಳು ಪರಸ್ಪರ ವಿಭಾಗ ಹೊಂದುವುದು ಕಂಡಿದೆಯಾದ್ದರಿಂದ ಈ ಘಟದ ಅವಯವಗಳಿಗೆ ವಿಭಾಗ ಯೋಗ್ಯತೆಯಿದೆಯೆಂದು ಗೊತ್ತಾಗುತ್ತದೆ.

ಆದ್ದರಿಂದ ವಿಭಾಗ ಯೋಗ್ಯವಾದ ಅವಯವಗಳುಳ್ಳ ಈ ಘಟದಲ್ಲಿ ಪರಮಾಣು ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ.

ಇಲ್ಲಿ 'ವಿಭಿನ್ನಾವಯವೇಷು ಸತ್‌ಸು' ಎಂಬಲ್ಲಿ ವಿಭಿನ್ನ ಎಂದು ಹೇಳಿದ್ದರ ಉದ್ದೇಶವೇನೆಂಬ ವಿಷಯದಲ್ಲಿ ಮೂರು ಅಭಿಪ್ರಾಯಗಳಿವೆ.

೧) ಕೆಲವರು 'ನಚಾವಯವಭೇದೇನ ಸ್ಯಾದೇವ ಹ್ಯನವಸ್ಥಿತಿ:' (ಅವಯವಗಳು ಭಿನ್ನವಾಗಿದ್ದರೂ ಅನವಸ್ಥಾ ಬರುವುದಿಲ್ಲ) ಎಂಬ ಗೀತಾತಾತ್ಪರ್ಯ ವಚನದಂತೆ ಪರಮಾಣುವಿನಲ್ಲೂ ಅವಯವಗಳು ಪರಸ್ಪರ ಹಾಗೂ ಪರಮಾಣುವಿನಿಂದ ಭಿನ್ನವಾಗಿವೆ ಎಂದು ಅಂಗೀಕರಿಸಿ, ಅದರ ಪ್ರಕಾರ 'ವಿಭಿನ್ನಾವಯವೇಷು ಸತ್ಸು' ಎಂದು ಹೇಳಿದ್ದಾರೆ'. ಎಂದು ಹೇಳುತ್ತಾರೆ.

೨) ಮತ್ತೆ ಕೆಲವರು ಈ ಲಕ್ಷಣವನ್ನು ನೈಯಯಿಕರ ಮತದ ಪ್ರಕಾರ ಹೇಳಿದ್ದು. ನ್ಯಾಯಮತದಲ್ಲಿ ಆಕಾಶದಲ್ಲಿ ಅವಯವಗಳಿವೆಯೋ ಇಲ್ಲವೋ ಎಂದು ವಿಪ್ರತಿಪತ್ತಿಯಿರುವುದರಿಂದ (ಅವಯವಗಳಿವೆ ಎಂಬುದೇ ಸಿದ್ಧಾಂತವಲ್ಲವಾದ್ದರಿಂದ) ಬರೀ 'ಅವಯವೇಷು ಸತ್ಸು (ಅವಯವಗಳಿದ್ದಾಗಲೂ)ಎಂದಷ್ಟೇ ಹೇಳಿದರೂ ಆಕಾಶದಲ್ಲಿ ಅತಿವ್ಯಾಪ್ತಿಯಿಲ್ಲ. ಆದ್ದರಿಂದ ಇಲ್ಲಿ 'ಭಿನ್ನಾವಯವೇಷು' ಎಂದು ಭಿನ್ನಪದಪ್ರಯೋಗ ಕೇವಲ ವಾಸ್ತವಿಕ ದೃಷ್ಟಿಯಿಂದ. (ನಮ್ಮ ಮತದಲ್ಲಿ ಪರಸ್ಪರ ಭಿನ್ನವಾದ ಅವಯವಗಳಿವೆಯೆಂದು ತಿಳಿಸಲೋಸುಗ) ಅದಕ್ಕೆ ಬೇರೆ ಅತಿವ್ಯಾಪ್ತಿ ಪರಿಹಾರ ಪ್ರಯೋಜನವಿಲ್ಲ. ಸ್ವರೂಪ ಕಥನದ ಪ್ರಯೋಜನವು ಹೀಗಿದೆ - ನ್ಯಾಯಮತದಲ್ಲಿ ಭೇದ ಪ್ರತಿನಿಧಿ ವಿಶೇಷವನ್ನೊಪ್ಪಿಲ್ಲ.

ಆದ್ದರಿಂದ ಪರಮಾಣುವಿನ ಅವಯವಕ್ಕೂ ಅವಯವಿಗೂ ಭೇದವಿಲ್ಲದಿದ್ದಾಗ ಅವಯವ ಮತ್ತು ಅವಯವಿಗಳು ಒಂದೇ. ಆದ್ದರಿಂದ ಎರಡನ್ನೂ ಪ್ರತ್ಯೇಕವಾಗಿ ಅಂಗೀಕರಿಸದೆ ಒಂದೇ ಅವಯವಾಭಿನ್ನ ಅವಯವಿ ಇದೆಯೆಂದು ಸ್ವೀಕರಿಸಬೇಕು, ಆದ್ದರಿಂದ ಭೇದವಿಲ್ಲದಿದ್ದಾಗ ಪ್ರತ್ಯೇಕ ಅವಯವಗಳನ್ನೊಪ್ಪುವುದು ಹೇಗೆ? ಎಂಬ ನೈಯಾಯಿಕರ ಆಶಂಕೆಗೆ ಉತ್ತರವಾಗಿ 'ಭಿನ್ನಾವಯವೇಷು ಸತ್ಸು' ಎಂದು ಸ್ವರೂಪ ಕಥನವನ್ನು ಮಾಡಿದ್ದಾರೆ. ಆದ್ದರಿಂದ ಪರಮಾಣುವಿಗೆ ಅವಯವಗಳು ಇವೆ. ಎರಡಕ್ಕೂ ವಿಶೇಷಬಲದಿಂದ ಭೇದಾಭೇದಗಳಿವೆ. ಆದ್ದರಿಂದ ಭಿನ್ನವಾದ ಅವಯವಗಳು ಇವೆಯೆಂದು ತಿಳಿಯುತ್ತದೆ. ಇದೇ ಸ್ವರೂಪಕಥನದ ಪ್ರಯೋಜನ.

೩) ವಸ್ತುತ: ಭಿನ್ನ ಎಂಬುದಕ್ಕೆ 'ಅವಯವಿಯಿಂದ ಭಿನ್ನ'ವೆಂದು ಅರ್ಥವಲ್ಲ. ಕಿಂತು ಪರಮಾಣುವಿನ ಪ್ರತಿಯೊಂದು ಅವಯವವೂ ಪ್ರತ್ಯೇಕವಾಗಿ ಸಖಂಡವಾಗಿದೆ (ಅವಯವಗಳಿಂದ ಯುಕ್ತವಾಗಿದೆ) ಎಂದರ್ಥ. ಆದ್ದರಿಂದ ಯಾವುದಕ್ಕೆ ಅನೇಕಾಂಶಗಳಿಂದ ಕೂಡಿದ ಅವಯವಗಳಿದ್ದಾಗಲೂ ಅವುಗಳಿಗೆ ವಿಭಾಗವು ಯಾವತ್ತೂ ಆಗುವುದಿಲ್ಲವೋ ಅದೇ ಪರಮಾಣುವೆಂದರ್ಥ.

**ನೈಯಾಯಿಕರ ಪಾಕಜಪ್ರಕ್ರಿಯೆ**

ಪೀಲುಗಳೆಂದರೆ ಪರಮಾಣುಗಳು. ಅವುಗಳಲ್ಲಿ ಪಾಕದಿಂದ ಬೇರೆ ರೂಪಾದಿಗಳು ಹುಟ್ಟುವ ಬಗೆ ಹೀಗಿದೆ. ಮೊದಲು ಘಟದ ಅವಯವಗಳಾದ ಕಪಾಲಗಳಲ್ಲಿ ಹುಟ್ಟುವ ಕರ್ಮದಿಂದ ಆ ಎರಡು ಕಪಾಲಗಳ ಸಂಯೋಗವು ನಾಶವಾಗುತ್ತದೆ. ನಂತರ ಘಟದ ನಾಶ. ಆಗ ಘಟದಲ್ಲಿರುವ ಶ್ಯಾಮರೂಪವು ನಾಶವಾಗುತ್ತದೆ. ಹೀಗೆ ಕಪಾಲ ಕಾಪಾಲಿಕ ಅದರ ಅವಯವ ಎಲ್ಲವೂ ನಾಶಹೊಂದಿದಾಗ ಅವುಗಳಲ್ಲಿರುವ ರೂಪಾದಿಗಳೂ ನಾಶವಾಗುತ್ತವೆ. ಹೀಗೇ ದ್ವ್ಯಣುಕನಾಶದಿಂದ ಅದರ ಶ್ಯಾಮರೂಪನಾಶ. ಆದರೆ ಪರಮಾಣು ನಿತ್ಯವಾದ್ದರಿಂದ ಅದು ನಾಶಹೊಂದುವುದಿಲ್ಲ. ಅದರ ಶ್ಯಾಮರೂಪ ಮಾತ್ರ ನಾಶವಾಗುತ್ತದೆ. ನಂತರ ಆತ್ಮನ ಅದೃಷ್ಟದಿಂದ ಆ ಪರಮಾಣುಗಳಲ್ಲಿ ಪೀತರೂಪ

ಹುಟ್ಟುತ್ತದೆ. ಹಾಗೂ ಆ ಪರಮಾಣುಗಳ ಸಂಯೋಗದಿಂದ ದ್ವ್ಯಣುಕದ ಉತ್ಪತ್ತಿ ಅದರಲ್ಲಿ ಪೀತರೂಪದ ಉತ್ಪತ್ತಿ. ಹೀಗೇ ಕಪಾಲ ಘಟಗಳೂ ಹುಟ್ಟಿ ಅವುಗಳಲ್ಲಿ ಪೀತ ರೂಪಾದಿಗಳೂ ಉತ್ಪನ್ನವಾಗುತ್ತವೆ. (ಇದೆಲ್ಲವೂ ಪ್ರಾಮಾಣಿಕವಲ್ಲವೆಂದು ಜಯತೀರ್ಥರು ತೋರಿಸಿದ್ದಾರೆ.)

**ನ್ಯಾಯಮತದ ಜಾತಿ ಬಾಧಕಗಳು**

ನ್ಯಾಯಮತದಲ್ಲಿ ಜಾತಿಯೆಂಬ ಪದಾರ್ಥವನ್ನು ಒಪ್ಪಿದ್ದಾರೆ. ಯಾವುದೇ ಧರ್ಮ ಜಾತಿಯಾಗಬೇಕಾದರೆ ಅದರಲ್ಲಿ ಈ ಆರು ಬಾಧಕಗಳಿರಬಾರದು. ಆ ಆರು ಬಾಧಕಗಳೇ ಜಾತಿಬಾಧಕಗಳು.

೧) ವ್ಯಕ್ತೇರಭೇದಃ - ಆಶ್ರಯ ವ್ಯಕ್ತಿಯ ಅಭೇದ. ಆಕಾಶತ್ವವನ್ನು ಜಾತಿಯೆಂದು ಅಂಗೀಕರಿಸಲು ಸಾಧ್ಯವಿಲ್ಲ. ಆಕಾಶವು ಒಂದೇ ಆದ್ದರಿಂದ ಜಾತಿಲಕ್ಷಣದ ಅನೇಕಾನುಗತತ್ವ (ಅನೇಕ ಆಶ್ರಯಗಳಲ್ಲಿ ಇರುವಿಕೆ) ಎಂಬ ಅಂಶವು ಈ ಆಕಾಶತ್ವದಲ್ಲಿ ಬರುವುದಿಲ್ಲ. ಆದ್ದರಿಂದ ಆಶ್ರಯ ವ್ಯಕ್ತಿಯ ಏಕತ್ವವು ಆಕಾಶತ್ವದ ಜಾತಿತ್ವಕ್ಕೆ ಬಾಧಕವಾಗುತ್ತದೆ.

೨) ವ್ಯಕ್ತೇಸ್ತುಲ್ಯತ್ವಂ - ಬೇರೊಂದು ಜಾತಿಗೆ ಆಶ್ರಯವಾದದ್ದೇ ತನಗೂ ಆಶ್ರಯವಾಗಿರುವುದು. ಘಟತ್ವವನ್ನು ಜಾತಿಯೆಂದು ಅಂಗೀಕರಿಸಿದ ಮೇಲೆ ಕಲಶತ್ವ ಕರೀರತ್ವಗಳನ್ನು ಜಾತಿಯೆಂದು ಅಂಗೀಕರಿಸಲು ಬರುವುದಿಲ್ಲ. ಏಕೆಂದರೆ ಘಟತ್ವಕ್ಕೆ ಆಶ್ರಯವಾದದ್ದೇ ಕಲಶತ್ವಕ್ಕೆ ಆಶ್ರಯವಾಗಿದೆ. ಘಟತ್ವವೂ ಘಟದಲ್ಲಿ ಮಾತ್ರವಿದೆ, ಕಲಶತ್ವವೂ ಘಟದಲ್ಲಿ ಮಾತ್ರ ಇದೆಯಾದ್ದರಿಂದ ಎರಡನ್ನೂ ಪ್ರತ್ಯೇಕ ಜಾತಿಗಳೆಂದು ಅಂಗೀಕರಿಸಲು ಸಾಧ್ಯವಿಲ್ಲ. ಘಟತ್ವವೊಂದನ್ನೇ ಜಾತಿಯೆಂದಂಗೀಕರಿಸಬೇಕು.

೩) ಸಂಕರ - ಪರಸ್ಪರ ಒಂದನ್ನು ಬಿಟ್ಟು ಇನ್ನೊಂದು ಕಡೆ ಇರುವ ಎರಡು ಧರ್ಮಗಳು ಒಂದು ಕಡೆ ಒಟ್ಟಾಗಿರುವುದು. ಉದ್ಭೂತ ಸ್ಪರ್ಶದಲ್ಲಿ ಉದ್ಭೂತತತ್ವವಿದೆ. ಆದರೆ ರೂಪತ್ವವಿಲ್ಲ. ಅನುದ್ಭೂತರೂಪದಲ್ಲಿ ರೂಪತ್ವವಿದೆ. ಆದರೆ ಉದ್ಭೂತತ್ವವಿಲ್ಲ ಹೀಗೆ ಪರಸ್ಪರ ಒಂದನ್ನೊಂದು ಬಿಟ್ಟಿರುವ ಉದ್ಭೂತತ್ವ ರೂಪತ್ವಗಳು ಉದ್ಭೂತರೂಪದಲ್ಲಿ ಸಮಾವೇಶಗೊಂಡಿವೆ. ಆದ್ದರಿಂದ ರೂಪತ್ವದಿಂದ ಉದ್ಭೂತತ್ವಕ್ಕೆ ಸಾಂಕರ್ಯವಿದೆ. ಆದ್ದರಿಂದ ಉದ್ಭೂತತ್ವವು ಜಾತಿಯಲ್ಲ.

೪) ಅನವಸ್ಥಾ - ಅನಂತ ಅಪ್ರಾಮಾಣಿಕವಾದ ಪದಾರ್ಥಗಳ ಕಲ್ಪನೆ. ಜಾತಿಯಲ್ಲೂ ಜಾತಿಯನ್ನಂಗೀಕರಿಸಿದರೆ ಅದರಲ್ಲೂ ಜಾತಿ, ಅದರಲ್ಲೂ ಜಾತಿ ,ಆ ಜಾತಿಯಲ್ಲೂ ಜಾತಿ ಎಂದು ಅನಂತ ಜಾತಿಗಳನ್ನು ಕಲ್ಪಿಸ ಬೇಕಾಗುತ್ತದೆ. ಆದ್ದರಿಂದ ಅನವಸ್ಥಾ ಬರುವುದರಿಂದ ಜಾತಿಯಲ್ಲಿ ಜಾತಿಯಿಲ್ಲ.

೫) ರೂಪಹಾನಿ - ತನ್ನ ಸ್ವರೂಪಕ್ಕೆ ಆಗುವ ಹಾನಿ - ವಿಶೇಷಗಳಲ್ಲೂ ಜಾತಿಯಿದೆಯೆಂದಗೀಕರಿಸಿದರೆ ಅಂತ್ಯವ್ಯಾವರ್ತಕತ್ವವೆಂಬ ವಿಶೇಷ ಸ್ವರೂ ಪಕ್ಕೆ ಹಾನಿಯಾಗುತ್ತದೆ. ವಿಶೇಷದಲ್ಲೂ ಜಾತಿಯನ್ನಂಗೀಕರಿಸಿದರೆ ಆಗ ವಿಶೇಷಗಳೂ ಅನುಗತ ಪ್ರತೀತಿಗೆ ಕಾರಣವಾಗುವುದರಿಂದ ವ್ಯಾವೃತ್ತ ಪ್ರತೀತಿ ಮಾತ್ರ ಕಾರಣತ್ವವೆಂಬ ವಿಶೇಷದ ಸ್ವರೂಪಕ್ಕೆ ಹಾನಿಯಾಗುತ್ತದೆ. ಆದ್ದರಿಂದ ವಿಶೇಷದಲ್ಲಿ ಜಾತಿಯನ್ನೊಪ್ಪಿಲ್ಲ.

೬) ಅಸಂಬಂಧ - ಸಮವಾಯ ಸಂಬಂಧವಿಲ್ಲದಿರುವುದು. ಸಮವಾಯದಲ್ಲಿ ಸಮವಾಯ ಸಂಬಂಧವಿಲ್ಲದಿರುವುದರಿಂದ ಸಮವಾಯ ಸಂಬಂಧದಿಂದಲೇ ತನ್ನ ಆಶ್ರಯದಲ್ಲಿರಬೇಕಾದ ಸಮವಾಯತ್ವ ಜಾತಿಯನ್ನು ಅಂಗೀಕರಿಸಲು ಸಾಧ್ಯವಿಲ್ಲ.

ಇವುಗಳನ್ನು ಜಾತಿಬಾಧಕಗಳೆಂದು ಪರಿಗಣಿಸಿದ್ದಾರೆ

**ಭೇದ ವಿಷಯ ಆಕ್ಷೇಪಗಳು ಜಾತ್ಯುತ್ತರಗಳು**

ಘಟಾತ್ ಪಟಸ್ಯ ಭೇದಃ ಎಂಬುದಾಗಿ ಅಥವಾ ಘಟಾತ್ ಪಟೋ ಭಿನ್ನಃ ಎಂದು ಎರಡು ರೀತಿಯಲ್ಲಿ ಭೇದ ಜ್ಞಾನವು ಬರಬಹುದು. ಆದರೆ ಎರಡು ಪಕ್ಷಗಳಲ್ಲಿಯೂ ಅನ್ಯೋನ್ಯಾಶ್ರಯ ಬರುತ್ತದೆ. ಘಟಪಟಗಳು ಧರ್ಮಿ ಮತ್ತು ಪ್ರತಿಯೋಗಿಗಳೆಂದು ತಿಳಿದ ಮೇಲೆ ಧರ್ಮಿಪ್ರತಿಯೋಗಿ ನಿರೂಪ್ಯವಾದ ಭೇದದ ಜ್ಞಾನ. ಧರ್ಮಿತ್ವ ಪ್ರತಿಯೋಗಿತ್ವಗಳು ಭೇದ ಘಟಿತವಾದ್ದರಿಂದ ಭೇದ ಜ್ಞಾನವಾದ ಮೇಲೆಯೇ ಧರ್ಮಿಪ್ರತಿಯೋಗಿಗಳ ಜ್ಞಾನ ಎಂದು ಅನ್ಯೋನ್ಯಾಶ್ರಯ.

ಹಾಗೂ ಪ್ರತ್ಯಕ್ಷದಿಂದ ಭೇದದ ಪ್ರತೀತಿಯು ಕೂಡುವುದಿಲ್ಲ. ಕೇವಲ ಭೇದ ಎಂದು ಪ್ರತೀತಿಯಂತೂ ಇಲ್ಲ. ಆದ್ದರಿಂದ ವಸ್ತು ಸಹಿತವಾಗಿಯೇ ಇದು ಭಿನ್ನ ಎಂದು ಭೇದದ ಪ್ರತೀತಿ ಬರಬೇಕು. ಆದರೆ ವಸ್ತುವಿನ

ಪ್ರತೀತಿಯು ಭೇದದ ಪ್ರತೀತಿಯ ನಂತರ ಬರಲು ಸಾಧ್ಯವಿಲ್ಲ. ಏಕೆಂದರೆ ಮೊದಲು ಭೇದ ಪ್ರತೀತಿ ಬರುವುದಾದರೆ ಭೇದ ಎಂದಷ್ಟೇ ಬರಬೇಕು. ಆದರೆ ಹಾಗೆ ಬರಲು ಸಾಧ್ಯವಿಲ್ಲವೆಂದು ಹೇಳಿಯಾಗಿದೆ. ಮೊದಲಿಗೆ ವಸ್ತುವಿನ ಪ್ರತೀತಿ ಬಂದ ಮೇಲೆ ನಂತರವೂ ಭೇದದ ಪ್ರತೀತಿ ಬರಲೂ ಸಾಧ್ಯವಿಲ್ಲ. ಮೊದಲಿಗೆ ವಸ್ತು ಪ್ರತೀತಿ ಬರುವಾಗ (ಭೇದವು ಪ್ರತೀತವಾಗಿರುವುದಿಲ್ಲ ವಾದ್ದರಿಂದ) ಅಭೇದವೇ ಪ್ರತೀತವಾದ ಮೇಲೆ ಭೇದದ ಪ್ರತೀತಿ ಹೇಗೆ ಬರಲು ಸಾಧ್ಯ? ಭೇದ ಪ್ರತೀತಿ ಮತ್ತು ವಸ್ತು ಪ್ರತೀತಿಗಳು ಒಟ್ಟಿಗೆ ಬರಲೂ ಸಾಧ್ಯವಿಲ್ಲ. ಏಕೆಂದರೆ ವಸ್ತುವಿನ ಪ್ರತೀತಿಯು ಭೇದ ಪ್ರತೀತಿಗೆ ಕಾರಣವಾಗಿದೆ. ಆದ್ದರಿಂದ ಏರಡೂ ಪ್ರತೀತಿಗಳು ಒಟ್ಟಿಗೆ ಬರಲು ಸಾಧ್ಯವಿಲ್ಲ.

ಹೀಗೆ ಭೇದವಿಷಯದಲ್ಲಿ ಆಕ್ಷೇಪಗಳನ್ನು ಮಾಡಿದರೆ ಅದು ಜಾತ್ಯುತ್ತರವಾಗುತ್ತದೆಂದು ಸುಧೆಯಲ್ಲಿ ಹೇಳಿದ್ದಾರೆ. ಹೀಗೆ ವಸ್ತುಪ್ರತೀತಿಯು ಭೇದ ಪ್ರತೀತಿಗೆ ಮೊದಲು, ಒಟ್ಟಿಗೆ, ನಂತರವೂ ಹೇತುವಲ್ಲವೆಂದು ಹೇಳುವುದು ಅಹೇತುಸಮವೆಂಬ ಜಾತಿಯಲ್ಲಿ ಸೇರುತ್ತವೆ. ''ಹೇತೋರ್ವಿಕಲ್ಪಸಾಧ್ಯಾರ್ಥ ಪೂರ್ವಾಪರ ಸಹೋದಯಂ ತ್ರೇಧಾಪಿ ತಸ್ಯ ಹೇತುತ್ವ ಭಂಗೋಽಹೇತುಸಮೋ ಭವೇತ್'' ಎಂಬ ಲಕ್ಷಣದಂತೆ ಇಲ್ಲಿ ಆಕ್ಷೇಪವು ಇರುವುದರಿಂದ ಈ ಆಕ್ಷೇಪಗಳು ಅಹೇತುಸಮ. ಅನ್ಯೋನ್ಯಾಶ್ರಯವನ್ನು ಹೇಳುವ ಪಕ್ಷದಲ್ಲೂ ಧರ್ಮ್ಯಾದಿ ಬುದ್ಧಿಯು ಮೊದಲು ಒಟ್ಟಿಗೆ, ನಂತರ ಯಾವಾಗಲೂ ಹೇತುವಲ್ಲವೆಂದು ಹೇಳಿದಂತಾದ್ದರಿಂದ ''ಮೊದಲು, ಒಟ್ಟಿಗೆ, ನಂತರವೂ ಹೇತುವಾಗ ಬೇಕಾದುದು ಹೇತುವಾಗುವುದಿಲ್ಲವೆಂದು ಹೇಳುವುದು ಅಹೇತುಸಮ'' ವೆಂಬ ಅದರ ಲಕ್ಷಣ ಆಕ್ಷೇಪಗಳಲ್ಲಿ ಬರುತ್ತದೆ. ಹಾಗೂ ಭೇದಕ್ಕೂ ಭೇದ್ಯವಸ್ತುವಿಗೂ ಇನ್ನೊಂದು ಭೇದ ಬೇಕು. ಆ ಭೇದಕ್ಕೂ ವಸ್ತುವಿಗೂ ಮತ್ತೆ ಭೇದ. ಹೀಗೇ ಅನವಸ್ಥಾ ಬರುತ್ತದೆ ಎಂದು ಆಕ್ಷೇಪಿಸುವುದು ಪ್ರಸಂಗಸಮವಾಗುತ್ತದೆ. ಏಕೆಂದರೆ ''ಅನವಸ್ಥಾಭಾಸವಚಃ ಪ್ರಸಂಗ ಸಮಜಾತಿತಾ'' (ಅನವಸ್ಥೆಯಂತೆ ಕಾಣುವ ಆದರೆ ವಾಸ್ತವಿಕವಾಗಿ ಅನವಸ್ಥೆಯಲ್ಲದ್ದನ್ನು ಹೇಳುವುದು ಪ್ರಸಂಗಸಮ) ಎಂಬುಕ್ತಿಯಂತೆ

ಇಲ್ಲಿಯೂ ವಾಸ್ತವಿಕವಾಗಿ ಅನವಸ್ಥಾ ಇಲ್ಲದಿದ್ದರೂ ಅನವಸ್ಥಾವನ್ನು ಹೇಳಿರುವುದರಿಂದ ಆ ಲಕ್ಷಣವಿಲ್ಲಿದೆ. ಹಾಗೇ ಭಿನ್ನವಾದದ್ದರಲ್ಲಿ ಭೇದವಿದೆ. ಅದು ಭಿನ್ನವಾಗಬೇಕಾದರೆ ಬೇರೊಂದು ಭೇದ ಬೇಕೆಂದು ಅನವಸ್ಥಾ ಹೇಳುವುದೂ ಪ್ರಸಂಗ ಸಮಜಾತಿಯಾಗಿದೆ.

ಸತ್ತಾವತ್ ಕಾರಣವಾಗಿದೆಯೋ ಎಂಬ ಪ್ರಶ್ನೆಯ ಅಭಿಪ್ರಾಯ ಹೀಗಾಗುತ್ತದೆ ಸತ್ತಾ ಸತ್ತಾವುಳ್ಳದ್ದೋ? ಅಲ್ಲವೋ? ಸತ್ತಾವುಳ್ಳದ್ದೆಂದು ಹೇಳಿದರೆ ತನ್ನಲ್ಲೇ ತಾನಿರುವುದರಿಂದ ಆತ್ಮಾಶ್ರಯ ಮತ್ತು ಅಪಸಿದ್ಧಾಂತ. ಆದ್ದರಿಂದ ಸತ್ತಾದಲ್ಲಿ ಸತ್ತಾ ಇಲ್ಲವೆಂದು ಹೇಳಬೇಕು. ಆದ್ದರಿಂದ ಸತ್ತಾ ಅಸತ್ ಎಂದಾಯಿತು. ಆದ್ದರಿಂದ ಕಾರಣವು ಸತ್ತಾ ವಿಶಿಷ್ಟವಲ್ಲವೆಂದಾಗುತ್ತದೆ. ಹೀಗೆ ಸತ್ತಾ ವಿಷಯದಲ್ಲಿ ಹಾಗೋ ಹೀಗೋ ಎಂಬ ಧರ್ಮ ವಿಕಲ್ಪ ಮಾಡಿ ಖಂಡಿಸುತ್ತಿರುವುದರಿಂದ ಧರ್ಮಸ್ಯ ತದತದ್ರೂಪವಿಕಲ್ಪಾನುಪಪತ್ತಿತಃ ಧರ್ಮಿಣಸ್ತದ್ವಿಶಿಷ್ಟತ್ವ ಭಂಗೋ ನಿತ್ಯಸಮೋ ಭವೇತ್ (ಧರ್ಮಿಯ ಧರ್ಮಗಳ ವಿಷಯದಲ್ಲಿ ಬೇರೆ ಬೇರೆ ರೀತಿ ವಿಕಲ್ಪ ಮಾಡಿ ಧರ್ಮಿಯಲ್ಲಿ ಆ ಧರ್ಮವೇ ಇಲ್ಲವೆಂದು ಖಂಡಿಸುವುದು ನಿತ್ಯಸಮ) ಎಂಬ ಲಕ್ಷಣವು ಈ ಆಕ್ಷೇಪದಲ್ಲಿದೆ. ಆದ್ದರಿಂದ ಸತ್ತಾವತ್ ಕಾರಣವಾಗಿದೆಯೋ ಎಂಬ ಆಕ್ಷೇಪವು ನಿತ್ಯ ಸಮಜಾತಿಯಾಗುತ್ತದೆ.

**ಉಪಸರ್ಗಗಳು ವಾಚಕಗಳೇ**

ಸುಧೆಯಲ್ಲಿ ''ಉಪಸರ್ಗಾ ಹಿ ಧಾತುಲೀನ ಸ್ವಾರ್ಥಸ್ಯ ವ್ಯಂಜಕಾ ಏವ '' (ಉಪಸರ್ಗಗಳು ಧಾತುವಿನಲ್ಲಿ ಅಡಗಿರುವ ಅರ್ಥವನ್ನು ಪ್ರಕಟಿಸುತ್ತವೆ. ಸ್ವತಃ ವಾಚಕವಲ್ಲ) ಎಂದು ಹೇಳಿದ್ದಾರೆ. ಆದರೆ ವಾಸ್ತವವಾಗಿ ಉಪಸರ್ಗಗಳು ಪ್ರತ್ಯೇಕವಾಗಿ ಅರ್ಥಕ್ಕೆ ವಾಚಕಗಳೇ ಆಗಿವೆ. ಆದನ್ನು ತರ್ಕತಾಂಡವದಲ್ಲಿ ವಿಸ್ತಾರವಾಗಿ ಹೇಳಲಾಗಿದೆ/

ಅದರ ರೀತಿ ಹೀಗಿದೆ. 'ಪ್ರ' ಮುಂತಾದ ಉಪಸರ್ಗಗಳಿಂದ ಪ್ರಕರ್ಷ ಮುಂತಾದ ಅರ್ಥ ಪ್ರತೀತಿಯು ಹುಟ್ಟುತ್ತದೆಯೆಂದು ಅನ್ವಯವ್ಯತಿರೇಕಗಳಿಂದ ತಿಳಿದು ಬಂದಿದೆ. ಆದ್ದರಿಂದ ಉಪಸರ್ಗಗಳು ವಾಚಕಗಳೇ 'ಅವು ಸ್ವತಂತ್ರವಾಗಿ ಯಾವುದೇ ಅರ್ಥವನ್ನು ಹೇಳುವುದಿಲ್ಲವಾದ್ದರಿಂದ ವಾಚಕಗಳಲ್ಲ ಎಂಬುದು ಸರಿಯಲ್ಲ. ಏಕೆಂದರೆ 'ಚ' ಶಬ್ದ 'ಇವ' ಶಬ್ದ

'ಏವ'ಶಬ್ದಗಳೂ ಸ್ವತಂತ್ರವಾಗಿ ಯಾವುದೇ ಅರ್ಥ ಬೋಧಿಸದಿದ್ದರೂ ಅವುಗಳಿಗೆ ವಾಚಕತ್ವವಿದೆ. ಹಾಗೆಯೇ ಉಪಸರ್ಗಗಳಿಗೂ ವಾಚಕತ್ವವನ್ನು ಅಂಗೀಕರಿಸಬೇಕು.

ಮತ್ತು ವ್ಯ ತಿಸೇ'ಇತ್ಯಾದಿ ಕಡೆಗಳಲ್ಲಿ ಉಪಸರ್ಗಗಳು ಸ್ವಾತಂತ್ರ್ಯೇಣ ಅರ್ಥಬೋಧಕವೂ ಆಗಿವೆ.

ಉಪಸರ್ಗಗಳು ವಾಚಕಗಳಲ್ಲದಿದ್ದರೆ 'ಪ್ರಜಯತಿ' ಎಂಬಲ್ಲಿ ಪ್ರೋತ್ತರ( ಪ್ರ ಉಪಸರ್ಗದ ನಂತರ ಇರುವ ) ಜಿ ಧಾತುವೇ ಪ್ರಕೃಷ್ಟಜಯವಾಚಕವೆಂದು ಹೇಳಬೇಕು. ಅದರ ಬದಲು ಧಾತುವು ಅರ್ಥವಾಚಕವಲ್ಲವೆಂದಂಗೀಕರಿಸಿ ಜಿಪೂರ್ವವಾದ (ಜಿ ಧಾತುವಿನ ಮೊದಲಿರುವ ) ಪ್ರ ಉಪಸರ್ಗವೇ ವಾಚಕವೆಂದು ಏಕೆ ಅಂಗೀಕರಿಸಬಾರದು? ಎಂದು ಆಕ್ಷೇಪಿಸಬಹುದು. ಹೀಗೆ ಅನೇಕ ಯುಕ್ತಿಗಳಿವೆ. ಆದ್ದರಿಂದ ಉಪಸರ್ಗಗಳೂ ವಾಚಕಗಳೆಂದೇ ಅಂಗೀಕರಿಸಬೇಕು.

### ಜೈನರ ಸ್ಯಾದ್ವಾದ

ಜೈನರ ಸ್ಯಾದ್ವಾದ ಹೀಗೆ - ಪ್ರಪಂಚವನ್ನು ಹೀಗೇ ಎಂದು ಹೇಳಲು ಬರುವುದಿಲ್ಲ. ಅದು ೧)ಸ್ಯಾದಸ್ತಿ ೨)ಸ್ಯಾನ್ನಾಸ್ತಿ ೩) ಸ್ಯಾದಸ್ತಿ ನಾಸ್ತಿ ಚ ೪) ಸ್ಯಾದವಕ್ತವ್ಯಂ ೫) ಸ್ಯಾದಸ್ತಿಚಾವಕ್ತವ್ಯಂ ಚ ೬) ಸ್ಯಾನ್ನಾಸ್ತಿ ಚಾವಕ್ತವ್ಯಂ ಚ ೭) ಸ್ಯಾದಸ್ತಿ ಚ ಸ್ಯಾನ್ನಾಸ್ತಿ ಚಾವಕ್ತವ್ಯಂ ಚ ಎಂದು ಏಳು ರೀತಿ.

ಇಲ್ಲಿ ಸ್ಯಾತ್ ಎಂಬುದು ಅನೇಕಾಂತ ದ್ಯೋತಕ ಶಬ್ದ. (ಅನೇಕಾಂತ ಎಂದರೆ (ಅನಿಯಮ) ಅನೇಕ ಬಗೆ) ಅವಕ್ತವ್ಯಂ ಎಂಬುದಕ್ಕೆ ವಿಲಕ್ಷಣ ಎಂದರ್ಥ. ಆದ್ದರಿಂದ ೧) ಸತ್ವ ೨) ಅಸತ್ವ ೩) ಸದಸತ್ವ ೪)ಸದಸದ್ವಿಲಕ್ಷಣತ್ವ ೫) ಸತ್ವೇ ಸತಿ ತದ್ವಿಲಕ್ಷಣತ್ವ ೬) ಅಸತ್ವೇ ಸತಿ ತದ್ವಿಲಕ್ಷಣತ್ವ ೭) ಸದಸತ್ವೇ ಸತಿ ತದ್ವಿಲಕ್ಷಣತ್ವ ಎಂಬ ಏಳು ಪ್ರಕಾರಗಳು ಸಿಗುತ್ತವೆ. ಹೀಗೆ ಪ್ರಪಂಚ ಸತ್, ಅಸತ್, ಸದಸತ್, ಸದಸದ್ವಿಲಕ್ಷಣ, ಸತ್ ಆದರೂ ಸದ್ವಿಲಕ್ಷಣ, ಅಸತ್ ಆದರೂ ಅಸದ್ವಿಲಕ್ಷಣ, ಸದಸತ್ ಆದರೂ ಸದಸದ್ವಿಲಕ್ಷಣ ಹೀಗೆ ಅನೇಕ ರೀತಿಯಾಗಿದೆ. ಅದನ್ನು ಕೇವಲ ಸತ್ ಎಂದಾಗಲೀ ಅಸತ್ ಎಂದಾಗಲೀ ಹೇಳಲಾಗುವುದಿಲ್ಲವೆಂದು ಜೈನರ ಅಭಿಪ್ರಾಯ.

'ನೈಕಸ್ಮಿನ್ನಸಂಭವಾತ್' ಸೂತ್ರದಲ್ಲಿ ಒಂದು ವಸ್ತು ಸತ್ತೋ ಅಥವಾ ಅಸತ್ತೋ ಆಗಿರಬೇಕು. ಎಲ್ಲವೂ ಆಗಿರಲು ಸಾಧ್ಯವಿಲ್ಲವೆಂದು ಜೈನರ ಈ ಅನೇಕಾಂತವಾದವನ್ನು ನಿರಾಕರಿಸಿದ್ದಾರೆ.

**ದ್ವಿತೀಯಾಧ್ಯಾಯ ತೃತೀಯಪಾದದ ನ್ಯಾಯಮಾಲಾ**

**ಅನುಭೂತಿಯುಕ್ತಿ ಬಹುವಾಗ್ವೈಲೋಮ್ಯಂ ಚ ತತೋಽಧಿಕಮ್।**
**ಏತತ್ ಸರ್ವಂ ತತಸ್ಸಾಮ್ಯಂ ದ್ವಾರವೈಯರ್ಥ್ಯಮೇವ ಚ ।**
**ದೃಷ್ಟಿಯುಕ್ತ್ಯನುಸಾರಿತ್ವಮುಕ್ತಾನ್ಯಾರ್ಥಾವಿರೋಧತಃ ।**
**ಪ್ರಸಿದ್ಧನಾಮ ಸ್ವೀಕಾರೋ ಬಹುವಾಕ್ಯಾನುವರ್ತಿತಾ ।**
**ಲೋಕದೃಷ್ಟಾನುಸಾರಿತ್ವಂ ಜೀವಸಾಮ್ಯಮನಾದಿತಾ ।**
**ತತ್ರ ತತ್ರಪರಿಜ್ಞಾನಂ ಗುಣಸಾಮ್ಯಶ್ರುತೀ ತಥಾ ।**
ಉತ್ಪತ್ತಿಮತತ್ತ್ವಂ ಸ್ವಗುಣಾನನುಭೂತ್ಯಲ್ಪಕಲ್ಪನೇ ।
**ನಾನಾಶ್ರುತಿಶ್ಚ ವೈಚಿತ್ರ್ಯಂ ಯುಕ್ತಯಃ ಪೂರ್ವಪಕ್ಷಗಾಃ ।**

ವ್ಯವಸ್ಥಾಽನುಪಪತ್ತಿಶ್ಚ ಸ್ವಾತಂತ್ರ್ಯಮನುಸಾರಿತಾ ।
**ಮುಖ್ಯತಾ ಶಕ್ತಿಮತ್ತ್ವಂ ಚ ವೈರೂಪ್ಯಂ ಸರ್ವಸಂಗ್ರಹಃ ।**
'ತ್ಯಾದಿರೀಶಶಕ್ತಿಶ್ಚ ಸರ್ವಮಾನವಿರೋಧಿತಾ ।
ಅಭೀಷ್ಟಾಸಿದ್ಧಿಸುವ್ಯಕ್ತೀ ಶಾಸ್ತ್ರಸಿದ್ಧಿರ್ವಿಪರ್ಯಯಃ ।
ವಿಶೇಷಕಾರಣಂ ಚೇತಿ ಸಿದ್ಧಾಂತಸ್ಯೈವ ಸಾಧಿಕಾಃ ।

೧) ಓಂ ನ ವಿಯದಶ್ರುತೇಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ವಿಯಧಿಕರಣದ ಪೂರ್ವಪಕ್ಷ:-

ಅನಾದಿರ್ವಾಽಯಮಾಕಾಶಃ (ಆಕಾಶವು ಅನಾದಿ) ಎಂಬ ಶ್ರುತಿಯಿಂದ ಆಕಾಶಕ್ಕೆ ಅನಾದಿತ್ವ ತಿಳಿಯುತ್ತದೆ. ಆಕಾಶವು ಸರ್ವತ್ರ ವ್ಯಾಪ್ತವಾದ್ದರಿಂದ ಉತ್ಪತ್ತಿಯುಳ್ಳದ್ದಲ್ಲ ಎಂಬ ಅನುಮಾನದಿಂದಲೂ ಆಕಾಶಕ್ಕೆ ಅನಾದಿತ್ವವನ್ನು ಗ್ರಹಿಸುವ ಸಾಕ್ಷಿಯಿಂದಲೂ ಆಕಾಶಕ್ಕೆ ಅನಾದಿತ್ವವು ಸಿದ್ಧವಾಗುವುದರಿಂದ 'ಆತ್ಮನ ಆಕಾಶಸ್ಸಂಭೂತಃ' ಎಂದು ಆತ್ಮನಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಅಪ್ರಮಾಣವೇ. ಅದೇ ದೃಷ್ಟಾಂತದಿಂದ ಇತರ ವೇದವಾಕ್ಯಗಳೂ ಅಪ್ರಮಾಣವೇ ಆದ್ದರಿಂದ ವೇದವಾಕ್ಯಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು 'ಅನುಭೂತಿಯುಕ್ತಿ ಬಹುವಾಗ್ವ್ಯಲೋಮ್ಯಂ (ಆಕಾಶಕ್ಕೆ ಅನಾದಿತ್ವ ಗ್ರಾಹಕವಾದ ಸಾಕ್ಷ್ಯನುಭವ- ಅನುಮಾನ-ಶ್ರುತಿಗಳವಿರೋಧ).

ಸಿದ್ಧಾಂತ: ಆಕಾಶಶಬ್ಧಕ್ಕೆ ಭೂತಾಕಾಶ-ತದಭಿಮಾನಿ ವಿನಾಯಕ-ಅವ್ಯಾಕೃತಾಕಾಶ-ತದಭಿಮಾನಿರಮಾ ಎಂಬ ನಾಲ್ಕುಅರ್ಥಗಳಿವೆ. ಇಲ್ಲಿ ಆಕಾಶಕ್ಕೆ ಅನಾದಿತ್ವ ಬೋಧಕಪ್ರಮಾಣಗಳು ಅವ್ಯಾಕೃತಾಕಾಶಕ್ಕೆ ಅನಾದಿತ್ವ ಹೇಳುತ್ತವೆ ಭೂತಾಕಾಶಾದಿಗಳಿಗಲ್ಲ. ಉತ್ಪತ್ತಿಯನ್ನು ಹೇಳುವ ಪ್ರಮಾಣಗಳು ಈ ನಾಲ್ಕು ಅರ್ಥಗಳಿಗೂ ಉತ್ಪತ್ತಿಯನ್ನು ಹೇಳುತ್ತವೆ. ಹೀಗೆ ಉತ್ಪತ್ತ್ಯನುತ್ಪತ್ತಿಬೋಧಕ ಶ್ರುತಿಗಳಿಗೆ ಬೇರೆ ಬೇರೆ ವಿಷಯಗಳಿರುವುದರಿಂದ ವ್ಯವಸ್ಥೆಯನ್ನು ಅಂಗೀಕರಿಸುವುದರಿಂದ ವೇದ ಗಳಿಗೆ ಅಪ್ರಾಮಾಣ್ಯವಿಲ್ಲ. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವಕ್ಕೆ ಯವುದೇ ವಿರೋಧವಿಲ್ಲ

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ವ್ಯವಸ್ಥಾ. ಉತ್ಪತ್ತಿ ಅನುತ್ಪತ್ತಿ ಶ್ರುತಿಗಳಿಗೆ ಭಿನ್ನವಿಷಯಗಳ ವ್ಯವಸ್ಥೆ.

೨) ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ಎಂಬ ಮಾತರಿಶ್ವಾಧಿಕರಣದ ಪೂರ್ವಪಕ್ಷ:-

'ಸಾ ವಾ ಏಷಾ ದೇವತಾ ಅನಾದಿರ್ಯೋಽಯಂ ಪವತೇ ' (ಸದಾ ಸಂಚರಿಸುವ ಈ ಮುಖ್ಯವಾಯು ದೇವತೆ) ಎಂಬ ಶ್ರುತಿಯಿಂದ ಮುಖ್ಯವಾಯುವಿಗೆ ಅನಾದಿತ್ವವಿದೆಯೆಂದು ತಿಳಿಯಿತ್ತದೆ. ಹಿಂದಿನ ಅಧಿಕರಣದ ನ್ಯಾಯದಂತೆ ಮುಖ್ಯವಾಯುವಿಗೂ ಉತ್ಪತ್ತ್ಯನುತ್ಪತ್ತಿಗಳು ಎರಡೂ ಇದೆಯೆಂದು ಕೂಡಿಸಲು ಬರುವುದಿಲ್ಲ.

ಏಕೆಂದರೆ 'ಅಥ ಹ ನಿತ್ಯಾಶ್ಚ ಅನಿತ್ಯಾಶ್ಚ ತೇಜೋಽಬನ್ನಾನ್ಯಾಕಾಶಃ ವಾಯುರ್ವಾ ವ ನಿತ್ಯಃ' ಎಂಬ ಶ್ರುತಿಯಲ್ಲಿ ಪೃಥಿವ್ಯಪ್‌ತೇಜಸ್ಸುಗಳು ಅನಿತ್ಯವೆಂದು ಹೇಳಿ ವಾಯುವಿಗೆ ನಿತ್ಯತ್ವ ಹೇಳಿದ್ಧಾರೆ. ಆದ್ದರಿಂದ ಈ ಮುಖ್ಯ ವಾಯುವಿಗೇ ನಿತ್ಯತ್ವ ಅನಿತ್ಯತ್ವಗಳೆರಡೂ ಬರಲು ಸಾಧ್ಯವಿಲ್ಲ ಮತ್ತು ವಾಯುವು ಪರಮಚೇತನನೆಂದು ಶ್ರುತಿಗಳಿಂದ ಭೋಧ್ಯವಾಗಿರುವುದರಿಂದ ಉತ್ಪತ್ತಿವುಳ್ಳವನಲ್ಲ ಎಂಬ ಅನುಮಾನದಿಂದ ಮತ್ತು

ಅನುಭವದಿಂದಲೂ ವಾಯುವಿಗೆ ಅನುತ್ಪತ್ತಿ ಸಿದ್ಧವಾಗಿದೆ. ಹೀಗೆ ಅನುಭವ-ಯುಕ್ತಿ-ಶ್ರುತಿಗಳ ಜೊತೆಗೆ ಸ್ವಾತಂತ್ರ್ಯವೂ ಸೇರಿರುವುದರಿಂದ (ಸ್ವಾತಂತ್ರ್ಯವು ಹಿಂದಿನ ಅಧಿಕರಣಕ್ಕಿಂತ ಹೆಚ್ಚಿನದ್ದಾದ್ದರಿಂದ ಅಧಿಕಾಶಂಕಾಕಾರಣ) ವಾಯುವಿಗೆ ಉತ್ಪತ್ತಿಯಿಲ್ಲವೆಂದೇ ಸಿದ್ಧವಾಗುವುದರಿಂದ ಈ ವಾಯುಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿ ಅಪ್ರಮಾಣ. ಅದರಂತೆ ಉಳಿದ ವೇವಾಕ್ಯಗಳೂ ಅಪ್ರಮಾಣವಾದ್ದರಿಂದ ಈ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಯಾಗುವುದಿಲ್ಲ. ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ತತೋಽಧಿಕಂಏತತ್ಸರ್ವಂ. ಅಧಿಕಾಶಂಕಾಸಹಿತವಾದ ಅನುಭವ-ಯುಕ್ತಿ-ಶ್ರುತಿಗಳು.

ಸಿದ್ಧಾಂತ:- ವಾಯುವಿಗೆ ಉತ್ಪತ್ತಿಯೇ ಇದೆ. ಅನುತ್ಪತ್ತಿಯಿಲ್ಲ. ಉತ್ಪತ್ತಿಯೆಂದರೆ ಪರತಂತ್ರತ್ವ ವಾಯುವಿಗೆ ಉತ್ಪತ್ತಿಯಿಲ್ಲವೆಂದರೆ ಪಾರತಂತ್ರ್ಯ ಇಲ್ಲ ಸ್ವಾತಂತ್ರ್ಯವೇ ಇದೆಯೆಂದಾಯಿತು. ಆದರೆ ಈಶ್ವರನೇ ಸ್ವತಂತ್ರನೆಂದು ಶ್ರುತಿಗಳು ಘೋಷಿಸುವುದರಿಂದ ಇದು ಯುಕ್ತವಲ್ಲ. ವಾಯು ಮತ್ತು ವಿಷ್ಣು ಇಬ್ಬರೂ ಸ್ವತಂತ್ರರಾಗಲಾರರು. ಏಕೆಂದರೆ ಪರಸ್ಪರವಾಗಿ ವಾಯುವಿಷ್ಣುಗಳಿಗೆ ಇಬ್ಬರಿಗೂ ಒಬ್ಬರಮೇಲೊಬ್ಬರಿಗೆ ನಿಯಂತ್ರಣವಿದೆಯೋ? ಇಲ್ಲವೋ? ಪರಸ್ಪರವಾಗಿ ನಿಯಂತ್ರಣವಿದ್ದರೆ ಇಬ್ಬರೂ ಪರಾಧೀನರಾಗುತ್ತಾರೆ. ನಿಯಂತ್ರಣವಿಲ್ಲದಿದ್ದರೆ ಸಂಪೂರ್ಣ ಅಧಿಕಾರವಿಲ್ಲದಿರುವುದರಿಂದ ಅಪೂರ್ಣರಾಗುತ್ತಾರೆ. ಹೀಗೆ ಸ್ವಾತಂತ್ರ್ಯಾನುಪಪತ್ತಿಯಿರುವುದರಿಂದ ವಾಯುವಿಗೆ ಅನುತ್ಪತ್ತಿಯಿಲ್ಲ. ವಾಯುವಿನ ಅಂತಃಕರಣರೂಪಜ್ಞಾನವು ಅನಾದಿಯಾಗಿದೆ. ಅದೇ ಈ ಅನಾದಿತ್ವ ಶ್ರುತಿಗೆ ವಿಷಯ. ಹೀಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ವಿಷ್ಣುವಿಗೇ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ಅನುಪಪತ್ತಿ (ಸ್ವಾತಂತ್ರ್ಯಾನುಪಪತ್ತಿ). ಮುಖ್ಯವಾದ ಯುಕ್ತಿ ಹಿಂದಿನ ಅಧಿಕರಣದಂತೆ ವ್ಯವಸ್ಥೆಯೇ ವ್ಯವಸ್ಥಾಕಾರಣವಾದದ್ದು ಅನುಪಪತ್ತಿ.

೩) ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ ಎಂಬ ಅಸಂಭವಾಧಿಕರಣದ ಪೂರ್ವಪಕ್ಷ-

ಅಸದೇವೇದಮಗ್ರ ಆಸೀತ್ ಅಸತಃ ಸದಜಾಯತ (ಸೃಷ್ಟ್ಯಾದಿಯಲ್ಲಿ ಅಸತ್ತೇ ಇತ್ತು. ಆದರಿಂದ ಸತ್ತಾದ ಬ್ರಹ್ಮ ಹುಟ್ಟಿತು) ಎಂಬ ಶ್ರುತಿಯಿಂದ ಬ್ರಹ್ಮನಿಗೂ ಉತ್ಪತ್ತಿಯಿದೆಯೆಂದು ಗೊತ್ತಾಗುತ್ತದೆ. ಬ್ರಹ್ಮನಿಗೆ ಶರೀರ ಲಾಭರೂಪೋತ್ಪತ್ತಿಯಿಲ್ಲದಿದ್ದರೂ ಪರಾಧೀನ ವಿಶೇಷವತ್ವರೂಪ ಉತ್ಪತ್ತಿ ಯನ್ನಂಗೀಕರಿಸಬಹುದಾಗಿದೆ. ಆದ್ದರಿಂದ ಬ್ರಹ್ಮನೂ ಆಕಾಶಾದಿ ಗಳಂತೆಯೇ ಆದದ್ದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಸತಸ್ಸಾಮ್ಯಂ (ಸತ್‌ಗೂ ಉತ್ಪತ್ತಿಯೂ ಸಮವೇ)

ಸಿದ್ಧಾಂತ - ಬ್ರಹ್ಮನು ಸ್ವತಂತ್ರನೆಂದು ಶ್ರುತಿಸಿದ್ಧನಾಗಿರುವುದರಿಂದ ಅವನಿಗೆ ಉತ್ಪತ್ತಿಯಿಲ್ಲ. ಓೀಗೆ ಬ್ರಹ್ಮನಿಗೆ ಸ್ವಾತಂತ್ರ್ಯವಿರುವುದರಿಂದ ಆಕಾಶಾದಿಗಳ ಸಾಮ್ಯವಿಲ್ಲ. ಆದ್ದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವು ಯುಕ್ತವೇ.

ಈ ಸಿದ್ಧಾಂತಾಧಾರ ಯುಕ್ತಿ ಸ್ವಾತಂತ್ರ್ಯ (ಬ್ರಹ್ಮನ ಸ್ವಾತಂತ್ರ್ಯ)

೪) ಓಂ ತೇಜೋಽತಸ್ತಥಾ ಹ್ಯಾಹ ಓಂ ಎಂಬ ತೇಜೋಽಧಿಕರಣದ ಪೂರ್ವಪಕ್ಷ-

ವಾಯೋರಗ್ನಿಃ ಎಂಬ ಶ್ರುತಿಯಿಂದ ವಾಯುವಿನಿಂದ ಅಗ್ನಿ (ತೇಜಸ್ಸು) ಹುಟ್ಟಿತು ಎಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವಿಗೆ ಸರ್ವಕಾರಣತ್ವವಿಲ್ಲವೆಂದಾಯಿತು. ವಾಯುದ್ವಾರಾ ಈಶ್ವರನಿಂದಲೇ ಅಗ್ನಿ ಹುಟ್ಟಿತು ಎಂದು ಅಂಗೀಕರಿಸಲೂ ಬರುವುದಿಲ್ಲ. ಏಕೆಂದರೆ ವಾಯುದ್ವಾರಾ ಅಲ್ಲದೇ ಸ್ವತಂತ್ರವಾಗಿ ಈಶ್ವರನಿಗೆ ಅಗ್ನಿ ಸೃಷ್ಟಿಯ ಸಾಮರ್ಥ್ಯವಿದೆಯೋ ಇಲ್ಲವೋ? ಇಲ್ಲವೆಂದಾದರೆ ವಾಯು - ಈಶ್ವರ ಇಬ್ಬರೂ ಕಾರಣವೆಂದಾಯಿತು. ಇದೆಯೆಂದರೆ ವಾಯುವನ್ನು ದ್ವಾರವನ್ನಾಗಿ ಮಾಡುವುದು ವ್ಯರ್ಥ. ಆದ್ದರಿಂದ ಆ ಸಾಮರ್ಥ್ಯವಿಲ್ಲ ವೆನ್ನಬೇಕು. ಆಗ ಕೇವಲ ಈಶ್ವರನೊಬ್ಬನೇ ಕಾರಣನಾಗಲಿಲ್ಲ. ಆದ್ದರಿಂದ ಸರ್ವಕಾರಣತ್ವ ವಿಷ್ಣುವಿಗೇ ಎಂದು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ದ್ವಾರವೈಯರ್ಥ್ಯ. (ವಾಯುವನ್ನು ದ್ವಾರವನ್ನಾಗಿಟ್ಟುಕೊಳ್ಳುವುದು ವ್ಯರ್ಥ)

ಸಿದ್ಧಾಂತ - ವಿಷ್ಣುವಿಗೆ ವಾಯುವನ್ನು ಬಿಟ್ಟು ತಾನೇ ಅಗ್ನಿಯನ್ನು ಸೃಷ್ಟಿಸುವ ಸಾಮರ್ಥ್ಯವಿದೆಯೆಂದು ತತ್ತೇಜೋಽಸೃಜತ (ಬ್ರಹ್ಮನೇ ತೇಜಸ್ಸನ್ನು ಸೃಷ್ಟಿಸಿತು) ಎಂಬ ಶ್ರುತಿಯಿಂದ ಗೊತ್ತಾಗುತ್ತದೆ. ಆದರೂ ಲೀಲಯಾ ವಾಯುವಿನ ಮೂಲಕ ಸೃಷ್ಟಿಸುತ್ತಾನೆ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ಅನುಸಾರಿತಾ (ಸಕಲಶ್ರುತಿ ಸ್ಮೃತಿಗಳಂತೆ ನಡೆಯುವುದು)

೫) ಓಂ ಆಪಃ ಓಂ ಎಂಬ ಅಬಧಿಕರಣದ ಪೂರ್ವಪಕ್ಷ - ಅಗ್ನೇರಾಪಃ (ಅಗ್ನಿಯಿಂದ ನೀರು ಹುಟ್ಟಿತು) ಎಂಬ ಶ್ರುತಿಯಿಂದ ಅಗ್ನಿಯಿಂದಲೇ ನೀರು ಹುಟ್ಟಿತು ಎಂಬ ತಿಳಿಯುತ್ತದೆ. ಮತ್ತು ಲೋಕದಲ್ಲಿ ಸೆಕೆಯಿಂದ ಬೆವರು ಬರುವುದು ಕಂಡಿದೆ. ಆದ್ದರಿಂದ ಬೆವರಿನಂತೆ ಬೇರೆ ನೀರೂ ಅಗ್ನಿಯಿಂದಲೇ ಹುಟ್ಟುತ್ತದೆ. ನೀರಾದ್ದರಿಂದ ಎಂಬ ಅನುಮಾನದಿಂದಲೂ ನೀರು ಅಗ್ನಿಜನ್ಯವೆಂದು ಸಿದ್ಧವಾಗುತ್ತದೆ. ( ಹೀಗೆ ಪ್ರತ್ಯಕ್ಷವೂ ಇರುವುದರಿಂದ ಹಿಂದಿನ ಅಧಿಕರಣದಿಂದ ಗತಾರ್ಥತ್ವವಿಲ್ಲ) ಆದ್ದರಿಂದ ಈಶ್ವರನಿಗೇ ಜಗತ್ಕಾರಣತ್ವವೆಂಬುದು ಸರಿಯಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಕಾರಣವಾದ ಯುಕ್ತಿಯು ದೃಷ್ಟಿಯುಕ್ತ್ಯನು ಸಾರಿತ್ವಂ. (ಪ್ರತ್ಯಕ್ಷ ಮತ್ತು ಅನುಮಾನಗಳ ಅನುಸಾರ ಕಲ್ಪಿಸುವುದು)

ಸಿದ್ಧಾಂತ - ತದಪೋಽಸೃಜತ (ಆ ಬ್ರಹ್ಮ ನೀರನ್ನು ಸೃಷ್ಟಿಸಿತು) ಎಂಬ ಶ್ರುತಿಯಿಂದ ಬ್ರಹ್ಮನಿಂದಲೇ ನೀರಿನ ಸೃಷ್ಟಿಯೂ ಸಿದ್ಧವಾಗುತ್ತದೆ. ಅಗ್ನೇರಾಪಃ ಎಂಬುದು ಅಗ್ನಿಗೆ ಕೇವಲ ದ್ವಾರತ್ವವನ್ನು ಹೇಳುತ್ತದೆ. ಆದ್ದರಿಂದ ವಿಷ್ಣುವೇ ಮುಖ್ಯ ಕರ್ತೃವಾದ್ದರಿಂದ ಅವನೇ ಸರ್ವ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ಮುಖ್ಯತಾ (ಈಶ್ವರನಿಗೇ ಇರುವ ಮುಖ್ಯ ಕರ್ತೃತ್ವ)

೬) ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ಎಂಬ ಪೃಥಿವ್ಯಧಿಕರಣದ ಪೂರ್ವಪಕ್ಷ - ತಾ ಅನ್ನಮಸೃಜಂತ (ನೀರುಗಳು ಅನ್ನವನ್ನು ಸೃಷ್ಟಿ ಮಾಡಿದವು) ಎಂಬ ಶ್ರುತಿಯಿಂದ ನೀರಿನಿಂದ ಅನ್ನ ಹುಟ್ಟಿತು ಎಂದು ಗೊತ್ತಾಗುತ್ತದೆ. ಆದರೆ ಅದ್ಭ್ಯಃ ಪೃಥಿವೀ (ನೀರಿನಿಂದ ಪೃಥಿವೀ - ಹುಟ್ಟಿತು) ಎಂಬ ಶ್ರುತಿಯು ನೀರಿನಿಂದ ಪೃಥಿವೀ ಹುಟ್ಟಿತೆಂದು ಹೇಳುತ್ತದೆ.

ಇಲ್ಲಿರುವ ಅನ್ನ-ಪೃಥಿವೀ ಶಬ್ದಗಳು ಪ್ರಸಿದ್ಧವಾದ ಅನ್ನ ಪೃಥಿವಿಗಳನ್ನೇ ಹೇಳುತ್ತವಾದ್ದರಿಂದ ಅನ್ನ ಶಬ್ದಕ್ಕೆ ಪೃಥಿವೀ ಎಂದಾಗಲೀ, ಪೃಥಿವೀ ಶಬ್ದಕ್ಕೆ ಅನ್ನವೆಂದಾಗಲೀ ಅರ್ಥವನ್ನಿಟ್ಟುಕೊಳ್ಳಲು ಬರುವುದಿಲ್ಲ. ಆದ್ದರಿಂದ ಪರಸ್ಪರ ವಿರುದ್ಧವಾದ ಈ ಎರಡೂ ಶ್ರುತಿಗಳು ಅಪ್ರಮಾಣವೇ. ಇಂತಹ ಅಪ್ರಮಾಣವಾದ ಶ್ರುತಿಗಳಿಗೆ ಬ್ರಹ್ಮನಲ್ಲಿ ಸಮನ್ವಯವನ್ನಂಗೀಕರಿಸುವುದು ಸರಿಯಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ - ಉಕ್ತಾನ್ಯಾರ್ಥಾವಿರೋಧತಃ। ಪ್ರಸಿದ್ಧನಾಮಸ್ವೀಕಾರೇ ಬಹುವಾಕ್ಯಾನುವರ್ತಿತಾ । ಅನ್ನಕ್ಕೆ, ಪೃಥಿವೀ ಎಂಬ ಅರ್ಥಕ್ಕಿಂತ ಭಿನ್ನವಾದ ಪ್ರಸಿದ್ಧವಾದ ಅನ್ನ ಎಂಬ ಅರ್ಥವಾಚಕವಾದ ಅನ್ನ ಶಬ್ದಸ್ವೀಕಾರಮಾಡಿದರೆ ಪ್ರಸಿದ್ಧವಾದ ಅನ್ನವನ್ನೇ ಅನ್ನಶಬ್ದವು ಹೇಳುತ್ತದೆಂದು ಅಂಗೀಕರಿಸಿದರೆ, ಅನ್ನಪದವುಳ್ಳ ಅದ್ಭ್ಯ ಏವ ತದ್ಧ್ಯನ್ನಾದ್ಯಂ ಜಾಯತೇ ಮುಂತಾದ ಅನೇಕ ಶ್ರುತಿಗಳ ಸಂವಾದ ಸಿಗುತ್ತದೆ. ಹೀಗೆಯೇ ಪೃಥಿವೀಶಬ್ದಕ್ಕೂ.

ಸಿದ್ಧಾಂತ - ಇಲ್ಲಿ ಅನ್ನಶಬ್ದವು ಪೃಥಿವೀವಾಚಕವೇ ಆಗಿದೆ. ಪೃಥಿವೀಯಲ್ಲೇ ಅನೇಕ ಬಾರಿ ಈ ಅನ್ನ ಶಬ್ದ ಬಳಸಿರುವುದರಿಂದ ಈ ಅನ್ನಶಬ್ದಕ್ಕೆ ಪೃಥಿವಿಯಲ್ಲಿ ಶಕ್ತಿಯಿದೆಯೆಂದು ಸಿದ್ಧವಾಗುತ್ತದೆ. ಅನ್ನ ಶಬ್ದವು ಪ್ರಸಿದ್ಧಾನ್ನ=ಪೃಥಿವೀ ಉಭಯವಾಚಕವಾಗಿದ್ದರೂ ಈ ಪ್ರಕರಣದಲ್ಲಿ ಪಂಚಭೂತಗಳ ಸೃಷ್ಟಿಯನ್ನು ಹೇಳುತ್ತಿರುವುದರಿಂದ ಅನ್ನ ಶಬ್ದದಿಂದ ಪೃಥಿವೀಯನ್ನೇ ಇಟ್ಟುಕೊಳ್ಳಬೇಕು. ಪೂರ್ವಪಕ್ಷಿಗೆ ಅನ್ನವಾಚಕತ್ವೇನ ಅಭಿಮತವಾದ ಅನೇಕ ಶ್ರುತಿಗಳೂ ಪೃಥಿವೀ ಮತ್ತು ಪಾರ್ಥಿವ ಎಂಬ ಅರ್ಥವನ್ನೇ ಹೇಳುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ

ವಿರೋಧ - ಅಪ್ರಾಮಾಣ್ಯಗಳಿಲ್ಲವಾದ್ದರಿಂದ ವಿಷ್ಣುವಿನಲ್ಲಿ ಶ್ರುತಿ ಸಮನ್ವಯವು ಯುಕ್ತವೇ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ಶಕ್ತಿಮತ್ವಂ (ಅನ್ನ ಶಬ್ದಕ್ಕೆ ಪೃಥಿವೀವಾಚಕತ್ವರೂಪ ಶಕ್ತಿಯಿರುವುದು)

೭) ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ಓಂ ಎಂಬ ಅಧಿಕರಣದ ಪೂರ್ವಪಕ್ಷ.

ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ, ತೇನಾನ್ನೇನಾಪ್ಯಾಯಸ್ವ (ರುದ್ರನೇ! ನೀನು ಪ್ರಾಣಗಳಿಗೆ ಆಶ್ರಯ ಮತ್ತು ಸಂಹಾರಕನೂ ಆಗಿದ್ದಿ. ನೀನು ನನ್ನನ್ನು ಪ್ರವೇಶಿಸು. ಆಹುತಿರೂಪ ಅನ್ನವನ್ನು ತಿಂದು ನನ್ನನ್ನು ಸಂತೋಷಪಡಿಸು) ಎಂಬ ಶ್ರುತಿಯಿಂದ ರುದ್ರನು ಜಗತ್ಸಂಹಾರಕನೆಂದು ತಿಳಿಯುತ್ತದೆ. ಲೋಕದಲ್ಲಿ ಮಗನನ್ನು ಹುಟ್ಟಿಸಿದ ತಂದೆಯೇ ಅವನನ್ನು ಕೊಲ್ಲುವುದಿಲ್ಲ. ಅದರಂತೆ ವಿಷ್ಣುವು ಜಗತ್ಕಾರಣವಾದರೂ ಜಗತ್‌ಸಂಹಾರಕನಾಗಲು ಸಾಧ್ಯವಿಲ್ಲ. ಆದ್ದರಿಂದ ಸೃಷ್ಟಿ-ಸ್ಥಿತಿ-ಲಯ ಕಾರಣತ್ವವು ವಿಷ್ಣುವಿಗೆ ಇಲ್ಲವೆಂದಾಗುತ್ತದೆ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಲೋಕದೃಷ್ಟ್ಯನುಸಾರಿತ್ವಂ (ಲೋಕದಲ್ಲಿ ಹುಟ್ಟಿಸಿದವನೇ ಸಂಹಾರಕನಾಗಿ ಕಾಣದಿರುವುದು)

ಸಿದ್ಧಾಂತ - ಇದಂ ಸರ್ವಂ ವಿಲಾಪಯತಿ (ಬ್ರಹ್ಮನು ಈ ಪ್ರಪಂಚವನ್ನೆಲ್ಲ ನಾಶಪಡಿಸುತ್ತಾನೆ) ನ ವಿಷ್ಣೋರನ್ಯೋ ವಿಮುಕ್ತಿದಃ (ವಿಷ್ಣುವನ್ನು ಬಿಟ್ಟು ಬೇರೆ ಯಾರೂ ಮೋಕ್ಷವನ್ನು ಕೊಡಲಾರರು) ಮುಂತಾದ ಶ್ರುತಿಗಳಿಂದ ವಿಷ್ಣುವೇ ಜಗತ್ಸಂಹಾರಕ. ರುದ್ರನಲ್ಲ. ಲೋಕದಲ್ಲಿ ಜನಕನಿಗೆ ಸಂಹಾರಕತ್ವವು ಕಾಣದಿದ್ದರೂ ಅದು ವಿಷ್ಣುವಿನಲ್ಲಿದೆ. ವಿಷ್ಣುವು ಲೋಕದ ತಂದೆ ತಾಯಂದಿರಂತಲ್ಲ. ವಿಲಕ್ಷಣ ಜನಕನಾಗಿದ್ದಾನೆ.

ರುದ್ರಾದಿಗಳಿಗೆ ಕೆಲವೇ ಕೆಲವು ವಸ್ತುಗಳ ಸಂಹಾರಕತ್ವವಿದೆ. ಆದ್ದರಿಂದ ಆ ಶ್ರುತಿಗಳ ವಿರೋಧವಿಲ್ಲ. ಆದ್ದರಿಂದ ವಿಷ್ಣುವಿಗೇ ಜಗತ್ ಸೃಷ್ಟಿ-ಸ್ಥಿತಿ-ಸಂಹಾರ ಕರ್ತೃತ್ವವೆಂದು ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿವೈರೂಪ್ಯಂ (ಲೋಕದಲ್ಲಿ ಕಾಣುವ ತಂದೆ ತಾಯಂದಿರಂತೆ ವಿಷ್ಣು ಇಲ್ಲ)

೮) ಓಂ ವಿಪರ್ಯಯೇಣ ತು ಕ್ರಮೋತ ಉಪಪದ್ಯತೇ ಓಂ ಎಂಬ ಅಧಿಕರಣದ ಪೂರ್ವಪಕ್ಷ -

ಅತ ಏವ ಹೀದಂ ಪರಾತ್ ಕ್ರಮಾದುತ್ಪದ್ಯತೆ । ಕ್ರಮಾದ್ವಿಲೀಯತೇ (ಪರಮಾತ್ಮನಿಂದ ಈ ಜಗತ್ತು ಯಾವ ಕ್ರಮದಲ್ಲಿ ಉತ್ಪತ್ತಿಯಾಗುತ್ತದೋ ಅದೇ ಕ್ರಮದಲ್ಲಿ ಲಯವಾಗುತ್ತದೆ) ಎಂಬ ಶ್ರುತಿಯು ಕ್ರಮವಾಗಿ ಲಯವನ್ನು ಹೇಳುತ್ತದೆ. ಲೋಕದಲ್ಲೂ ಯಾವ ಕ್ರಮದಲ್ಲಿ ಉತ್ಪತ್ತಿಯೋ ಅದೇ ಕ್ರಮದಲ್ಲಿ ನಾಶವೂ ಕಂಡಿದೆ. ಆದ್ದರಿಂದ ಅಕ್ಷರಾತ್ ಪರಮಾದೇವ ಸರ್ವಮುತ್ಪದ್ಯತೇ ಕ್ರಮಾತ್ । ವ್ಯುತ್ಕ್ರಮಾದ್ವಿಲಯಶ್ಚೈವ (ಈ ಪರಮಾತ್ಮನಿಂದ ಕ್ರಮವಾಗಿ ಎಲ್ಲವೂ ಹುಟ್ಟುತ್ತದೆ ವಿಪರೀತ ಕ್ರಮದಿಂದ ಲಯ ಹೊಂದುತ್ತದೆ) ಎಂದು ವಿಪರೀತ ಕ್ರಮದಿಂದ ಲಯ ಪ್ರತಿಪಾದಕವಾಕ್ಯ ಅಪ್ರಮಾಣ. ಹೀಗೆ ಉಳಿದ ಶ್ರುತಿಗಳೂ ಅಪ್ರಮಾಣವಾದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಲೋಕದೃಷ್ಟ್ಯನುಸಾರಿತ್ವಂ (ಲೋಕಾನುಸಾರ ಕಲ್ಪಿಸಬೇಕು)

ಸಿದ್ಧಾಂತ - ವಿಪರೀತ ಕ್ರಮದಿಂದಲೇ ಲಯ. ಕ್ರಮವಾಗಿ ಲಯವನ್ನು ಹೇಳುವ ಶ್ರುತಿಗೂ ವಿಪರೀತ ಕ್ರಮದಿಂದ ಎಂದೇ ಅರ್ಥ. ಏಕೆಂದರೆ ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ । ಸೃಷ್ಟಾವನ್ಯೋ ಲಯೇ ಚಾನ್ಯಃ (ವ್ಯುತ್ಕ್ರಮ - ಅನುಕ್ರಮವೆಂದು ಕ್ರಮವು ಎರಡು ವಿಧ. ಲಯದಲ್ಲಿ ಮೊದಲನೆಯದು, ಸೃಷ್ಟಿಯಲ್ಲಿ ಎರಡನೆಯದು) ಎಂಬ ಶ್ರುತಿ ಹಾಗೆ ಹೇಳುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ ವೈರೂಪ್ಯ (ಕ್ರಮವು ಅನೇಕ ವಿಧವಾಗಿರುವುದು)

೯) ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಅಂತರಾಧಿಕರಣದ ಪೂರ್ವಪಕ್ಷ-

ಲೋಕದಲ್ಲಿ ತಂದೆಯ ಎದುರಿಗೆ ಮಗನು ಸಾಯುವಂತೆ, ಮಗನ ಮುಂದೆ ತಂದೆಯು ಸಾಯುವಂತೆ ಕೆಲವು ಪದಾರ್ಥಗಳಿಗೆ ಕ್ರಮವಾಗಿ ಲಯ, ಕೆಲವೊಂದಕ್ಕೆ ವ್ಯುತ್ಕ್ರಮವಾಗಿ ಲಯವನ್ನು ಅಂಗೀಕರಿಸಬೇಕು. ಎಲ್ಲ ಪದಾರ್ಥಗಳಿಗೂ ವ್ಯುತ್ಕ್ರಮವಾಗಿಯೇ ಲಯವನ್ನಂಗೀಕರಿಸಬಾರದು. ಹಾಗೆ ಲೋಕದಲ್ಲಿ ಕಂಡಿಲ್ಲ. ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ (ಪ್ರಾಣನಿಂದ ಮನಸ್ತತ್ವ ಹುಟ್ಟಿತು. ಅದರಿಂದ ವಿಜ್ಞಾನತತ್ವ ಹುಟ್ಟಿತು) ಎಂಬ ಶ್ರುತಿಯಂತೆ ಮನಸ್ತತ್ವ ಹುಟ್ಟಿದ ನಂತರ ಹುಟ್ಟುವ ವಿಜ್ಞಾನ ತತ್ವಕ್ಕೆ ಮನಸ್ತತ್ವದ ಲಯವಾದ ಮೇಲೆ ಲಯವಿದೆ. ಅದನ್ನು ಯಚ್ಛೇದ್ವಾಙ್ ಮನಸೀ ಪ್ರಾಜ್ಞಸ್ತದ್ಯಚ್ಛೇತ್ ಜ್ಞಾನ ಆತ್ಮನಿ (ವಾಕ್ ತತ್ವಕ್ಕೆ ಮನಸ್ತತ್ವದಲ್ಲಿ ಲಯ ನಂತರ ಮನಸ್ತತ್ವಕ್ಕೆ ವಿಜ್ಞಾನ ತತ್ವದಲ್ಲಿ ಲಯವೆಂದು ಉಪಾಸಕನು ಸ್ಮರಿಸಬೇಕು) ಎಂಬ ಶ್ರುತಿ ಹೇಳುತ್ತಿದೆ.

ಹೀಗೆ ಈ ಶ್ರುತಿಯಿಂದ ಮೊದಲು ಹುಟ್ಟಿದ ಮನಸ್ತತ್ವಕ್ಕೆ ಮೊದಲು ಲಯ, ನಂತರ ಹುಟ್ಟಿದ ವಿಜ್ಞಾನ ತತ್ವಕ್ಕೆ ನಂತರವೇ ಕ್ರಮವಾಗಿ ಲಯವೆಂದು ಗೊತ್ತಾಗುವುದರಿಂದ ಈ ವಿಜ್ಞಾನ ಮನಸ್ತತ್ವಗಳನ್ನು ಬಿಟ್ಟು ಉಳಿದ ಪದಾರ್ಥಗಳಲ್ಲಿ ಮಾತ್ರ ವ್ಯುತ್ಕ್ರಮೇಣ ಲಯವೆಂದಂಗೀಕರಿಸಬೇಕು.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಲೋಕದೃಷ್ಟ್ಯನುಸಾರಿತ್ವಂ (ಲೋಕದಲ್ಲಿ ಕಾಣುವಂತೆ ಅಂಗೀಕರಿಸುವುದು)

ಸಿದ್ಧಾಂತ - ಎಲ್ಲ ಪದಾರ್ಥಗಳಿಗೂ ವ್ಯುತ್ಕ್ರಮವಾಗಿಯೇ ಲಯ. ಯಚ್ಛೇತ್ - ಎಂಬ ಶ್ರುತಿಯಲ್ಲೂ ವ್ಯುತ್ಕ್ರಮವಾಗಿಯೇ ಲಯ ಹೇಳಿದ್ದಾರೆ. ಆದರೆ ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ ಎಂಬ ಶ್ರುತಿ ಮನಸ್ತತ್ವದಿಂದ ವಿಜ್ಞಾನ ತತ್ವದ ಉತ್ಪತ್ತಿಯನ್ನು ಹೇಳುತ್ತಿಲ್ಲ. ಕೇವಲ ಮನಸ್ಸಿನಿಂದ ವೃತ್ತಿ ರೂಪಜ್ಞಾನ ಹುಟ್ಟುತ್ತದೆಯೆಂದು ಮಾತ್ರ ಹೇಳುತ್ತಿದೆ. ಆದ್ದರಿಂದ ವಸ್ತುತಃ ವಿಜ್ಞಾನ ತತ್ವದಿಂದಲೇ ಮನಸ್ತತ್ವದ ಸೃಷ್ಟಿ. ವಿಜ್ಞಾನ ತತ್ವದಲ್ಲೇ ಲಯ.

ಆದ್ದರಿಂದ ವೇದಗಳಿಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ಅವುಗಳಿಂದ ವಿಷ್ಣುವಿನ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಸರ್ವಂ ವಾ ಏತತ್ ಕ್ರಮಾದುತ್ಪದ್ಯತೇ, ವ್ಯುತ್ಕ್ರಮಾಲ್ಲೀಯತೇ, (ಎಲ್ಲವೂ ಕ್ರಮವಾಗಿ ಉತ್ಪತ್ತಿಯಾಗುತ್ತದೆ. ವ್ಯುತ್ಕ್ರಮವಾಗಿ ನಾಶ ಹೊಂದುತ್ತದೆ) ಎಂದು ಇದನ್ನು ಶ್ರುತಿ ಹೇಳುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ - ಸರ್ವಸಂಗ್ರಹಃ ( ಸರ್ವಂವಾ ಎಂಬ ಶ್ರುತಿಯಲ್ಲಿ ವ್ಯುತ್ ಕ್ರಮವಾಗಿಯೇ ಲಯವೆಂದು ಹೇಳಿರುವುದು)

೧೦) ಓಂ ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ ಎಂಬ ಆತ್ಮಾಧಿಕರಣದ ಪೂರ್ವಪಕ್ಷ-

ಎಲ್ಲ ಚೇತನರಿಗೂ ದೇಹತ್ಯಾಗರೂಪ ಲಯಕಂಡಿದೆ. ಹಾಗೆಯೇ ಪರಮಾತ್ಮನೂ ಚೇತನನಾದ್ದರಿಂದ ಅವನಿಗೂ ಲಯವಿರಲೇಬೇಕು. ಹೀಗೆ ಪರಮಾತ್ಮನಿಗೂ, ಲಯ ಸಿದ್ಧವಾಗುವುದರಿಂದ ಅವನನ್ನು ನಿತ್ಯ ಎಂದು ಹೇಳುವ ನಿತ್ಯೋ ನಿತ್ಯಾನಾಂ ( ನಿತ್ಯರಲ್ಲಿ ನಿತ್ಯ) ಮುಂತಾದ ಶ್ರುತಿಗಳು ಅಪ್ರಮಾಣ. ಆದ್ದರಂದ ಅಪ್ರಮಾಣವಾದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಜೀವಸಾಮ್ಯಂ (ಪರಮಾತ್ಮನೂ ಎಲ್ಲ ಚೇತನರಂತೆ ಇರುವುದು)

ಸಿದ್ಧಾಂತ - ಸರ್ವೇ ವಾ ಏತೇ ಚಿದಾತ್ಮಾನೋ ಬ್ರಹ್ಮಽಲ್ಲಯ ಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತಿ ಎಂಬ ಶ್ರುತಿಯು ಪ್ರಲಯ ಕಾಲದಲ್ಲಿ ಎಲ್ಲ ಜೀವರೂ ಲಯವನ್ನು ಹೊಂದಿ ಪರಮಾತ್ಮನ ಹೊಟ್ಟೆಯಲ್ಲಿ ಪ್ರವೇಶಿಸಿರುತ್ತಾರೆ ಎಂದು ಹೇಳುತ್ತಿರುವುದರಿಂದ ಪರಮಾತ್ಮನ ದೇಹವು ನಿತ್ಯವೆಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನಿಗೆ ದೇಹ ಲಯವಿಲ್ಲ. ಆದ್ದರಿಂದ ವೇದಗಳಿಗೆ ಪರಸ್ಪರ ವಿರೋಧ - ಅಪ್ರಾಮಾಣ್ಯಗಳು ಇಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯು ಸರ್ವಸಂಗ್ರಹ (ಎಲ್ಲವನ್ನೂ ತನ್ನ ಹೊಟ್ಟೆಯಲ್ಲಿಟ್ಟುಕೊಳ್ಳುವುದು)

೧೧) ಓಂ ಜ್ಞೋऽತ ಏವ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಜ್ಞಾऽಧಿಕರಣದ ಪೂರ್ವಪಕ್ಷ -

ನಿತ್ಯೋ ನಿತ್ಯಾನಾಂ ಎಂದು ವೇದವು ಪರಮಾತ್ಮನನ್ನು ನಿತ್ಯರಲ್ಲಿ ನಿತ್ಯ ಎಂದು ಸ್ತುತಿಸಬೇಕಾದರೆ ಜೀವರೂ ನಿತ್ಯರಾಗಲೇಬೇಕು. ಆದ್ದರಿಂದ ಈ ಜೀವನಿಗೆ ಉತ್ಪತ್ತಿಯಿಲ್ಲ. ಜೀವನಿಗೆ ಸ್ವರೂಪತಃ ಉತ್ಪತ್ತಿಯಿಲ್ಲವೆಂಬುದು ಸಿದ್ಧಾಂತಿಗೂ ಸಮ್ಮತವೇ. ಇಲ್ಲಿ ಪರಾಧೀನ ವಿಶೇಷಾಪ್ತಿಯೂ ಇಲ್ಲವೆಂದು ಪೂರ್ವಪಕ್ಷ. ಹೀಗೆ ಜೀವನು ಅನಾದಿಯಾದ್ದರಿಂದ ಹುಟ್ಟುವುದಿಲ್ಲವೆಂಬ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ 'ಅನಾದಿತಾ'

ಸಿದ್ಧಾಂತ - ಇದಂ ಸರ್ವಮಸೃಜತ (ಇದೆಲ್ಲವನ್ನು ಪರಮಾತ್ಮನೇ ಸೃಷ್ಟಿಸಿದನು) ಎಂದು ಶ್ರುತಿಯು ಎಲ್ಲವೂ ಪರಮಾತ್ಮನಿಂದಲೇ ಹುಟ್ಟಿದೆಯೆಂದು ಹೇಳುತ್ತಿದೆ. ಆದ್ದರಿಂದ ಜೀವನು ಸ್ವರೂಪತಃ ಅನಾದಿಯಾದ್ದರಿಂದ ಹುಟ್ಟಲು ಸಾಧ್ಯವಿಲ್ಲದಿದ್ದರೂ ಅವನಿಗೆ ಪರಾಧೀನವಿಶೇಷಾಪ್ತಿಯನ್ನಂಗೀಕರಿಸಲೇಬೇಕು. ಆದ್ದರಿಂದ ಪರಮಾತ್ಮನು ಸರ್ವಕ್ಕೂ ಕಾರಣನೆಂದು ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯು ಸರ್ವಸಂಗ್ರಹಃ (ಶ್ರುತಿಯಿಂದ ಈಶ್ವರನು ಸರ್ವಕಾರಣತ್ವೇನ ಸಿದ್ಧನಾಗಿರುವುದು)

೧೨) ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಉತ್ಕ್ರಾಂತ್ಯಧಿಕರಣದ ಪೂರ್ವಪಕ್ಷ -

ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ (ಎಲ್ಲ ಆತ್ಮರು ಸರ್ವತ್ರ ವ್ಯಾಪ್ತರಾಗಿದ್ದಾರೆ ಮತ್ತು ಚೇತನರೂ ಆಗಿದ್ದಾರೆ) ಎಂಬ ಶ್ರುತಿಯ ಪ್ರಕಾರ ಆತ್ಮರು ಸರ್ವತ್ರ ವ್ಯಾಪ್ತರು = ವಿಭುಗಳೆಂಬುದಾಗಿ ಸಿದ್ಧರಾಗಿದ್ದಾರೆ. ಜೀವರು ಅಣುರೂಪಿಗಳಾಗಿದ್ದರೆ ತಮ್ಮ ತಮ್ಮ ಸಮಗ್ರ ಶರೀರದಲ್ಲಿನ ಸುಖದುಃಖಾದಿಗಳನ್ನು ಅನುಭವಿಸುವ ಸಾಮರ್ಥ್ಯ ಅವರಿಗಿಲ್ಲದೇ ಹೋಗಬೇಕಾದೀತು. ಹೀಗೆ ಜೀವರು ವ್ಯಾಪ್ತರಾದ್ದರಿಂದ ಅವರನ್ನು ಅಣುವೆಂದು ಬೋಧಿಸುವ ಅಣುರ್ಹ್ಯೇಷ ಆತ್ಮಾ (ಈ ಜೀವನು ಅಣು)

ಎಂಬ ಶ್ರುತಿ ಅಪ್ರಮಾಣ. ಹೀಗೆ ಎಲ್ಲ ಶ್ರುತಿಗಳೂ ಅಪ್ರಮಾಣವಾದ್ದರಿಂದ ವೇದಗಳಿಂದ ಈಶ್ವರನಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ತತ್ರ ತತ್ರ ಪರಿಜ್ಞಾನಂ (ಆಯಾ ನಾಲಿಗೆ ಮೊದಲಾದ ಇಂದ್ರಿಯಗಳಿಲ್ಲಿದ್ದು ಆಯಾ ಸುಖದುಃಖಗಳನ್ನನುಭವಿಸುವುದು)

ಸಿದ್ಧಾಂತ - ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತಿ (ಜೀವನು ಈ ಶರೀರದಿಂದ ಹೊರಗೆ ಹೊರಟು ಮೇಲಿನ ಲೋಕಕ್ಕೆ ಬರುತ್ತಾನೆ) ಮುಂತಾದ ಶ್ರುತಿಗಳು ಜೀವರಿಗೆ ಗಮನ - ಆಗಮನಗಳು ಇವೆಯೆಂದು ತಿಳಿಸುತ್ತವೆ. ಜೀವರು ವ್ಯಾಪ್ತರಾದರೆ ಒಬ್ಬ ಜೀವನು ಎಲ್ಲ ಕಡೆಯಲ್ಲೂ ಇದ್ದಾನಾದ್ದರಿಂದ ಹೋಗುವುದೆಲ್ಲಿಂದ? ಬರುವುದಾದರೂ ಎಲ್ಲಿಗೆ? ಆದ್ದರಿಂದ ಜೀವನು ವ್ಯಾಪ್ತನಲ್ಲ. ಅಣುವೇ. ಸಣ್ಣ ಗಂಧದ ಕೊರಡಿನ ವಾಸನೆ ಸುತ್ತೆಲ್ಲ ಹರಡುವಂತೆ, ಸಣ್ಣದೀಪದ ಬೆಳಕು ಎಲ್ಲವನ್ನೂ ಪ್ರಕಾಶಿಸುವಂತೆ, ಜೀವನು ಅಣುವಾಗಿದ್ದರೂ ತನ್ನ ದೇಹದ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಅವನು ವ್ಯಾಪ್ತನೆಂದು ಹೇಳುವುದು ಈ ಅಭಿಪ್ರಾಯದಿಂದಲೇ. (ಅವನ ಜ್ಞಾನಾದಿ ಕ್ರಿಯೆ ಎಲ್ಲ ಕಡೆ ಇದೆ. ಆದ್ದರಿಂದಲೂ ಅವನು ವ್ಯಾಪ್ತನೆಂದು ಶ್ರುತಿ ಹೇಳುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ - ಗತ್ಯಾದಿಃ (ಜೀವನು ಬೇರೆ ಲೋಕಗಳಿಗೆ ಹೋಗುವುದು ಬರುವುದು ಮುಂತಾದವು)

೧೩) ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ ಎಂಬ ವ್ಯತಿರೇಕಾಧಿಕರಣದ ಪೂರ್ವಪಕ್ಷ -

ಜೀವನು ಏಕರೂಪನೋ (ಒಂದೇ ರೂಪವುಳ್ಳವನೋ) ಅಥವಾ ಬಹು ರೂಪವುಳ್ಳವನೋ ಎಂಬ ಸಂದೇಹ ಸರಿಯಲ್ಲ ಜೀವನು ಏಕರೂಪನೇ ಎಂದು ಸ ಏಕಧಾ, ನ ಸಪ್ತಧಾ (ಆ ಜೀವನು ಒಂದೇ ರೂಪವುಳ್ಳವನು. ಏಳು ಹತ್ತು ಮುಂತಾಗಿ ಅನೇಕರೂಪವುಳ್ಳವನಲ್ಲ) ಎಂದು ಶ್ರುತಿ ತಿಳಿಸುತ್ತದೆ. ಜೀವನೂ ಅನೇಕರೂಪವುಳ್ಳವನಾದರೆ

ಅವನಿಗೂ ಈಶ್ವರನಿಗೂ ವ್ಯತ್ಯಾಸವೇನು ಬರುವುದು? ಆದ್ದರಿಂದ ಜೀವನಿಗೆ ಅನೇಕ ರೂಪಗಳನ್ನು ಪ್ರತಿಪಾದಿಸುವ ಶ್ರುತಿಗಳು ಅಪ್ರಮಾಣ. ಹೀಗೆ ಅಪ್ರಮಾಣವಾದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ಗುಣಸಾಮ್ಯ (ಜೀವನು ಅನೇಕ ರೂಪನೆಂದಾದರೆ ಈಶ್ವರನ ಗುಣಗಳಿಂದ ಸಮನಾದ ಗುಣವುಳ್ಳವನೆಂದಾಗುವುದು)

ಸಿದ್ಧಾಂತ - ಅಥೈಕ ಏವ, ತಂ ಯಥಾ ಯಥಾ ಈಶ್ವರಃ ಪ್ರಕುರುತೇ ತಥಾ ತಥಾ ಭವತಿ (ಜೀವನು ಏಕ ರೂಪನೇ, ಆದರೆ ಈಶ್ವರನು ಹೇಗೆ ಹೇಗೆ ಬದಲಾವಣೆ ಮಾಡುತ್ತಾನೋ, ಹಾಗೆ ಮಾರ್ಪಡುತ್ತಾನೆ) ಎಂಬ ಶ್ರುತಿಯಂತೆ ಜೀವನು ಏಕರೂಪನೇ ಆದರೂ ಈಶ್ವರನಿಂದಲೇ ನಾನಾ ರೂಪಗಳನ್ನು ಹೊಂದುವುದರಿಂದ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಮತ್ತು ಅಪ್ರಮಾಣ್ಯವಿಲ್ಲ. ಆದ್ದರಿಂದ ಈಶ್ವರನೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿ- ಈಶಶಕ್ತಿ (ಈಶ್ವರನ ಶಕ್ತಿಯಿಂದ ನಾನಾ ರೂಪವಾಗುವುದು)

೧೪) ಓಂ ಪೃಥುಗುಪದೇಶಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಪೃಥುಗುಪದೇಶಾಧಿಕರಣದ ಪೂರ್ವಪಕ್ಷ-

ತತ್ ತ್ವಮಸಿ (ನೀನು-ಜೀವನು ಬ್ರಹ್ಮನೇ ಆಗಿದ್ದೀ) ಮುಂತಾದ ಶ್ರುತಿಗಳಿಂದ ಜೀವರಿಗೂ ಈಶ್ವರನಿಗೂ ಐಕ್ಯವಿದೆಯೆಂದು ಗೊತ್ತಾಗುತ್ತದೆ. ಆದ್ದರಿಂದ ಅದಕ್ಕೆ ವಿರುದ್ಧವಾಗಿ ಭೇದವನ್ನು ಬೋಧಿಸುವ ವೇದ ವಾಕ್ಯಗಳು ಅಪ್ರಮಾಣ. ಆದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ಶ್ರುತಿ (ಜೀವೇಶರಿಗೆ ಅಭೇದವನ್ನು ಹೇಳುವ ವೇದವಾಕ್ಯಗಳು)

ಸಿದ್ಧಾಂತ - ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್ (ಈ ಈಶ್ವರನು ಎಲ್ಲ ಜೀವರಿಗಿಂತ ಭಿನ್ನನಾಗಿದ್ದಾನೆ. ಅಚಿಂತ್ಯನಾಗಿದ್ದಾನೆ ಮತ್ತು

ಶ್ರೇಷ್ಠನಾಗಿದ್ದಾನೆ) ಮುಂತಾದ ಶ್ರುತಿಗಳಿಂದ ಈಶನು ಜೀವರಿಗಿಂತ ಭಿನ್ನನೆಂದು ತಿಳಿಯುತ್ತದೆ. ಆದ್ದರಿಂದ ಜೀವೇಶರಿಗೆ ಅಭೇದವು ಸರ್ವ ಪ್ರಮಾಣಗಳಿಗೂ ವಿರುದ್ಧವಾದದು ಅಂಗೀಕಾರಾರ್ಹವಲ್ಲ. ಅಭೇದವನ್ನು ಹೇಳುವಂತೆ ಕಾಣುವ ಶ್ರುತಿಗಳು ಜೀವನು ಸ್ವಾಭಾವಿಕವಾಗಿ ಜ್ಞಾನಾನಂದ ರೂಪನಾದ್ದರಿಂದ ಈಶ್ವರನ ಸದೃಶನಾಗಿದ್ದಾನೆಂದು ಮಾತ್ರ ಹೇಳುತ್ತವೆ. ಅಭೇದವನ್ನಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ ಸರ್ವಮಾನವಿರೋಧ (ಅಭೇದವನ್ನಂಗೀಕರಿಸಿದರೆ ಸರ್ವಪ್ರಮಾಣಗಳ ವಿರೋಧ ಬರುವುದು)

೧೫) ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ಎಂಬ ಯಾವದಧಿಕರಣದ ಪೂರ್ವಪಕ್ಷ -

ಬ್ರಹ್ಮಲ್ಲಯಮಭ್ಯುಪೈತಿ ಎಂಬ ಶ್ರುತಿಯ ಪ್ರಕಾರ ಜೀವನಿಗೆ ಬ್ರಹ್ಮನಲ್ಲಿ ಲಯವು ಇದೆಯೆಂದು ತಿಳಿಯುವುದರಿಂದ ಜೀವನು ಅನಿತ್ಯ. ಮತ್ತು ಜ್ಞೋತ ಏವ ಎಂಬಧಿಕರಣದಲ್ಲಿ ಜೀವನು ಉತ್ಪತ್ತಿಯುಳ್ಳವನೆಂದು ನಿರ್ಣಯಿಸಲಾಗಿದೆ. ಅವನು ಉತ್ಪತ್ತಿಯುಳ್ಳವನಾದರೆ ನಾಶವುಳ್ಳವನೂ ಆಗಲೇಬೇಕು. ಹೀಗೆ ನಾಶ ಸಿದ್ಧವಾಗಿರುವುದರಿಂದ ಅವನು ನಿತ್ಯನೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ವೇದಗಳಿಂದ ವಿಷ್ಣುವು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ - ಉತ್ಪತ್ತಿಮತ್ವಂ (ಜೀವನಿಗೆ ಉತ್ಪತ್ತಿಯಿರುವುದು)

ಸಿದ್ಧಾಂತ - ಜೀವನು ಅನಿತ್ಯನಾಗಿಬಿಟ್ಟರೆ ಅವನಿಗೆ ಇಷ್ಟವಾದ ಮೋಕ್ಷವೇ ಇಲ್ಲವೆಂದಾದೀತು. ಆದ್ದರಿಂದ ಜೀವನು ನಿತ್ಯನಾಗಲೇಬೇಕು. ಉತ್ಪತ್ತಿಯಾದದ್ದು ನಾಶವಾಗಲೇ ಬೇಕೆಂದು ವ್ಯಾಪ್ತಿಯಿದ್ದರೂ ಘಟಪಟಾದಿಗಳಂತೆ ಜೀವನಿಗೆ ಉತ್ಪತ್ತಿಯೇ ಇಲ್ಲ. (ಕೇವಲ ಪರಾಧೀನ ವಿಶೇಷಪ್ರಾಪ್ತಿಯಿದೆ) ಆದ್ದರಿಂದ ನಾಶವೂ ಇರಬೇಕಾಗಿಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ - ಅಭೀಷ್ಟಾಸಿದ್ಧಿ (ಇಷ್ಟವಾದ ಮೋಕ್ಷ ಸಿದ್ಧಿಸದಿರುವ ಪ್ರಸಂಗ)

೧೬) ಓಂ ಪುಂಸ್ತ್ವಾದಿವತ್ವಸ್ಯ ಸತೋಽಭಿವ್ಯಕ್ತಿ ಯೋಗಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಪುಂಸ್ತ್ವಾಧಿಕರಣದ ಪೂರ್ವಪಕ್ಷ -

ಸ ದುಃಖಾದ್ವಿಮುಕ್ತ ಆನಂದೀಭವತಿ (ಜೀವನು ದುಃಖದಿಂದ ಬಿಡುಗಡೆ ಹೊಂದಿ ಆನಂದರೂಪನಾಗುತ್ತಾನೆ) ಮುಂತಾದ ಶ್ರುತಿಗಳಿಂದ ಜೀವನು ಕೇವಲ ಜ್ಞಾನಾದಿರೂಪನಲ್ಲವೆಂದು ತಿಳಿಯುತ್ತದೆ. ಜೀವನು ಜ್ಞಾನಾನಂದರೂಪನಾಗಿದ್ದರೆ ಸಂಸಾರದಲ್ಲೂ ಅವನಿಗೆ ತನ್ನ ಸ್ವರೂಪ ಭೂತ ಆನಂದಾದಿಗಳ ಅನುಭವವಾಗಬೇಕಾಗಿತ್ತು. ಅವನ ಸ್ವರೂಪ ಜ್ಞಾನ ಇದ್ದಾಗಲೂ ಆನಂದಾದಿಗಳ ಅನುಭವವಿಲ್ಲವೆಂದಾದ ಮೇಲೆ ಅವನು ಆನಂದಾದಿ ಸ್ವರೂಪನಾಗಲು ಸಾಧ್ಯವಿಲ್ಲ. ಆದ್ದರಿಂದ ಜೀವನು ಆನಂದಾದಿ ರೂಪನೆಂದು ಹೇಳುವ ಶ್ರುತಿಗಳು ಅಪ್ರಮಾಣ. ಇಂತಹ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ-ಸ್ವಗುಣಾನನುಭೂತಿಃ (ಸಂಸಾರದಲ್ಲಿ ತನ್ನ ಗುಣಗಳಾದ ಆನಂದಾದಿಗಳ ಅನುಭವ ವಿಲ್ಲದಿರುವುದು)

ಸಿದ್ಧಾಂತ -ವಿಜ್ಞಾನಾತ್ಮಾ(ಜ್ಞಾನ ಸ್ವರೂಪನಾದ ಜೀವನು) ಮುಂತಾದ ಶ್ರುತಿಗಳಿಂದ ಜೀವನು ಜ್ಞಾನಾದಿ ಸ್ವರೂಪನೇ. ಸಂಸಾರವಸ್ಥೆಯಲ್ಲಿ ಅಜ್ಞಾನ ಕರ್ಮಾದಿಗಳ ಆವರಣವಿರುವುದರಿಂದ ಅವನಿಗೆ ತನ್ನ ಆನಂದಾದಿಗಳ ಅನುಭವವಾಗುವುದಿಲ್ಲ. ಹುಡುಗನಲ್ಲಿ ಇರುವ ಗಂಡಸುತನ ಮೊದಲು ಗೊತ್ತಾಗುವುದಿಲ್ಲ. ಅವನು ದೊಡ್ಡ ವಯಸ್ಸಿಗೆ ಬಂದಾಗ ಗೊತ್ತಾಗುತ್ತದೆ. ಹಾಗೆ ಮೋಕ್ಷದಲ್ಲಿ ಜೀವನ ಆನಂದಾದಿಗಳು ಅನುಭವಕ್ಕೆ ಬರುತ್ತವೆ. ಈಗಲೂ ಸುಷುಪ್ತಿಕಾಲದಲ್ಲಿ ಸ್ವಲ್ಪ ಸ್ವಲ್ಪ ಆನಂದಾದಿಗಳ ಅನುಭವವಿದೆ. ದುಃಖವು ಜೀವನಿಗಿದ್ದರೂ ಅದು ಅಸ್ವಾಭಾವಿಕ. ಆದ್ದರಿಂದ ಶ್ರುತಿಗಳಿಗೆ ಪಸಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ - ಸುವ್ಯಕ್ತಿ (ಮೋಕ್ಷದಲ್ಲಿ ಆನಂದಾದಿಗಳು ಅಭಿವ್ಯಕ್ತವಾಗುವುದು)

೧೭) ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಕರ್ತೃತ್ವಾಧಿಕರಣದ ಪೂರ್ವಪಕ್ಷ -

ನಾನ್ಯೋತೋಸ್ತಿ ಕರ್ತಾ (ಈ ಈಶ್ವರನನ್ನು ಬಿಟ್ಟು ಬೇರೆ ಕರ್ತಾ ಯಾರೂ ಇಲ್ಲ) ಮುಂತಾದ ಶ್ರುತಿಗಳಿಂದ ಈಶ್ವರನನ್ನು ಬಿಟ್ಟು ಬೇರೆ ಯಾರೂ ಕರ್ತೃಗಳಿಲ್ಲವೆಂದು ಸಿದ್ಧವಾಗಿದೆ. ಆದ್ದರಿಂದ ಜೀವನು ಕರ್ತೃವಲ್ಲ. ಮತ್ತು ಈಶ್ವರನೊಬ್ಬನೇ ಕರ್ತೃವೆಂದಂಗೀಕರಿಸಿದರೆ ಲಾಘವವಿದೆ. ಆದ್ದರಿಂದ ಈ ಜೀವನು ಕರ್ತೃವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಇಂಥ ವೇದಗಳಿಂದ ಈಶ್ವರನು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ-ಅಲ್ಪಕಲ್ಪನ (ಈಶ್ವರನೇ ಕರ್ತೃವೆಂದಂಗೀಕರಿಸಿದರೆ ಇರುವ ಕಲ್ಪನಾ ಲಾಘವ)

ಸಿದ್ಧಾಂತ - ಯತ್ಕರ್ಮ ಕುರುತೇ ತದಭಿ ಸಂಪದ್ಯತೇ (ಯಾವುದಕ್ಕಾಗಿ ಕರ್ಮ ಮಾಡುತ್ತಾನೋ ಆ ಫಲ ಸಿದ್ಧಸುತ್ತದೆ) ಮುಂತಾದ ಶ್ರುತಿಗಳಿಂದ ಜೀವನೂ ಕರ್ತೃವೆಂದು ತಿಳಿಯುತ್ತದೆ. ಜೀವನು ಕರ್ತೃವಲ್ಲದಿದ್ದರೆ ಅವನಿಗೆ ಇಂಥದ್ದನ್ನು ಮಾಡಬೇಕು, ಇಂಥದ್ದನ್ನು ಮಾಡಬಾರದು ಎಂದು ಹೇಳುವ ವಿಧಿ ನಿಷೇಧ ವಾಕ್ಯಗಳು ಅರ್ಥಕಳೆದುಕೊಳ್ಳುತ್ತವೆ. ಈಶ್ವರನೇ ಕರ್ತೃವೆಂದು ಹೇಳುವ ಶ್ರುತಿಗಳಿಗೆ ಈಶ್ವರನೇ ಸ್ವತಂತ್ರ ಕರ್ತೃವೆಂದಷ್ಟೇ ಅರ್ಥ ಹೊರತು ಇತರರು ಕರ್ತೃವೇ ಅಲ್ಲವೆಂದಲ್ಲ. ಆದ್ದರಿಂದ ಜೀವನಿಗೆ ಈಶ್ವರನಿಂದ ಕೊಡಲ್ಪಟ್ಟ ಕರ್ತೃತ್ವವಿದೆ. ಆದ್ದರಿಂದ ವೇದಗಳಿಗೆ ಪರಸ್ಪರ ವಿರೋಧವಿಲ್ಲ. ಶ್ರುತಿಗಳಿಂದ ಈಶ್ವರನಿಗೆ ಜಗತ್ಕಾರಣತ್ವ ಸಿದ್ಧಿಸುತ್ತದೆ.

ಪ್ರಯೋಜನ ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ-ಶಾಸ್ತ್ರ ಸಿದ್ಧಿ (ಜೀವನಿಗೆ ಕರ್ತೃತ್ವವಿದ್ದರೇ ಶಾಸ್ತ್ರಗಳಿಗೆ ಪ್ರಾಮಾಣ್ಯ ಸಿದ್ಧಿಸುವುದು)

೧೮) ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತ ವಾದಿತ್ವಮಧೀಯತ ಏಕೇ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಅಂಶಾಧಿಕರಣದ ಪೂರ್ವಪಕ್ಷ -

ಅಂಶಾ ಏವ ಹೀಮೇ ಜೀವಾಃ (ಈ ಜೀವರೆಲ್ಲರೂ ಪರಮಾತ್ಮನ ಅಂಶರು) ಮುಂತಾದ ಕೆಲವು ಶ್ರುತಿಗಳು ಜೀವರು ಈಶ್ವರನ ಅಂಶರೆಂದು ಹೇಳುತ್ತವೆ. ಇನ್ನು ನೈವಾಂಶೋ ನ ಸಂಬಂಧೋ (ಜೀವನು ಈಶ್ವರನ ಅಂಶನಲ್ಲ ಇಬ್ಬರಿಗೆ ಯಾವ ಸಂಬಂಧವೂ ಇಲ್ಲ) ಮುಂತಾದ ಶ್ರುತಿಗಳು ಅಂಶನಲ್ಲವೆಂದು ಹೇಳುತ್ತಿವೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಅಂಶನೆಂದೂ ಸಿದ್ಧವಾಗುವುದಿಲ್ಲ. ಅಂಶನಲ್ಲವೆಂದೂ ಸಿದ್ಧವಾಗುವುದಿಲ್ಲ. ಈ ಅಪ್ರಮಾಣವಾದ ಶ್ರುತಿಗಳಿಂದ ವಿಷ್ಣುವು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ನಾನಾಶ್ರುತಿಃ (ಶ್ರುತಿಗಳು ಅನೇಕರೀತಿಯಾಗಿ ಹೇಳುತ್ತಿರುವುದು)

ಸಿದ್ಧಾಂತ - ಶ್ರುತಿಗಳು ಅಪೌರುಷೇಯವಾದ್ದರಿಂದ ಅಪ್ರಮಾಣವಲ್ಲ. ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು.

ಜೀವೇಶರಿಗೆ ಭೇದವು ಪ್ರತ್ಯಕ್ಷ ಸಿದ್ಧವಾಗಿದೆ. ಆದ್ದರಿಂದ ಅಂಶ ಎಂಬುದಕ್ಕೆ ಪರಮಾತ್ಮನಿಂದಲೇ ಜನ್ಮಾದಿಗಳನ್ನು ಪಡೆದದ್ದರಿಂದ ಪರಮಾತ್ಮನ ಸಂಬಂಧಿಯೆಂದಷ್ಟೇ ಅರ್ಥ. ಅಭೇದವೆಂದರ್ಥವಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧ-ಅಪ್ರಾಮಾಣ್ಯಗಳಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ-ವಿಪರ್ಯಯ. (ಭ್ರಮ). ವಾಕ್ಯದ ಅಪ್ರಾಮಾಣ್ಯವು ವಕ್ತೃವಿನ ಭ್ರಮ ಮೂಲಕವಾದದ್ದು ವೇದದಲ್ಲಿ ವಕ್ತೃವೇ ಇಲ್ಲವಾದ್ದರಿಂದ ಅಪ್ರಮಾಣ್ಯವಿಲ್ಲ ಎಂದು ಅದಕ್ಕೆ ಅರ್ಥ.

೧೯) ಓಂ ಅದೃಷ್ಟಾನಿಯಮಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಅದೃಷ್ಟಾಧಿಕರಣದ ಪೂರ್ವಪಕ್ಷ -

ಜೀವರೆಲ್ಲರೂ ಈಶ್ವರನ ಪ್ರತಿಬಿಂಬರೆಂದು ಹಿಂದಿನಧಿಕರಣದ ಅಭಾಸ ಏವ ಚ ಸೂತ್ರದಲ್ಲಿ ಹೇಳಲಾಗಿದೆ. ಹೀಗೆ ಎಲ್ಲ ಜೀವರೂ ಈಶ್ವರನ ಪ್ರತಿಬಿಂಬರಾದರೆ ಎಲ್ಲರೂ ಒಂದೇ ರೀತಿಯಿರಬೇಕು. ದೇವ-ಅಸುರ ಮುಂತಾದ ವಿಭಾಗ ಕೂಡುವುದಿಲ್ಲ. ಆದ್ದರಿಂದ ಅಂಶತ್ವವನ್ನು ಹೇಳುವ

ಶ್ರುತಿ ಅಪ್ರಮಾಣ. ವೇದಗಳಿಂದ ವಿಷ್ಣುವು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

**ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ವೈಚಿತ್ರ್ಯಂ (ಜೀವರೆಲ್ಲರೂ ಬೇರೆ ಬೇರೆ ರೀತಿ ಇರುವುದು)**

ಸಿದ್ಧಾಂತ - ಎಲ್ಲರೂ ಒಂದೇ ಈಶ್ವರನ ಪ್ರತಿಬಿಂಬರಾದರೂ ಅವರವರ ಕರ್ಮಗಳಿಗೆ ಅನುಸಾರವಾಗಿ ಬೇರೆ ಬೇರೆ ರೀತಿಯಿದ್ದಾರೆ. ಆದ್ದರಿಂದ ಶ್ರುತಿಗಳು ಅಪ್ರಮಾಣವಲ್ಲ. ವಿಷ್ಣುವಿನ ಜಗತ್ಕಾರಣತ್ವಕ್ಕೆ ಯಾವುದೇ ವಿರೋಧವಿಲ್ಲ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ-ವಿಶೇಷಕಾರಣಂ (ಜೀವರು ಬೇರೆ ಬೇರೆ ರೀತಿಯಾಗಿರುವುದಕ್ಕೆ ಅದೃಷ್ಟವು ವಿಶೇಷಕಾರಣವಾಗಿರುವುದು)

ಹೀಗೆ ಬೇರೆ ಬೇರೆ ಸಿದ್ಧಾಂತ ನ್ಯಾಯಗಳಿಂದ ವೇದಗಳು ಪರಸ್ಪರ ವಿರುದ್ಧವಲ್ಲವೆಂದು ಈ ದ್ವಿತೀಯಾಧ್ಯಾಯ ತೃತೀಯ ಪಾದದಲ್ಲಿ ನಿರೂಪಿಸಲಾಗಿದೆ.

## ಆಕಾಶೋತ್ಪತ್ತಿ ವಿಷಯಕ ಶ್ರುತಿದ್ವಯ ವಿರೋಧ ಪರಿಹಾರ

ಆತ್ಮನ ಆಕಾಶಃ ಸಂಭೂತಃ (ಆತ್ಮನಿಂದ ಆಕಾಶವು ಹುಟ್ಟಿದೆ) ಎಂದು ಒಂದು ಶ್ರುತಿ. ಅನಾದಿರ್ವಾ ಅಯಮಾಕಾಶಃ (ಈ ಆಕಾಶವು ಅನಾದಿ ಹುಟ್ಟಿದ್ದಲ್ಲ) ಎಂದು ಮತ್ತೊಂದು ಶ್ರುತಿ ಹೀಗೆ ಈ ಶ್ರುತಿಗಳು ಉತ್ಪತ್ತಿ ಅನುತ್ಪತ್ತಿಗಳನ್ನು ಹೇಳುತ್ತಿರುವುದರಿಂದ ಇವುಗಳಿಗೆ ಪರಸ್ಪರ ವಿರೋಧವಿರುವಂತೆ ಕಾಣಿಸುತ್ತದೆ. ಅದರ ಪರಿಹಾರ ಎರಡು ರೀತಿ.

೧) ಎರಡೂ ಶ್ರುತಿಗಳಲ್ಲಿ ಇರುವ ಆಕಾಶ ಶಬ್ದಗಳಿಗೆ ಭೂತಾಕಾಶ ಮತ್ತು ಅವ್ಯಾಕೃತಾಕಾಶ, ಹಾಗೂ ಅವುಗಳಿಗೆ ಅಭಿಮಾನಿಯಾದ ವಿನಾಯಕ ಮತ್ತು ರಮಾ ಎಂಬರ್ಥಗಳಿವೆ. ಆದ್ದರಿಂದ ಆಕಾಶಃ ಸಂಭೂತಃ ಎಂಬ ಶ್ರುತಿಯು ಭೂತಾಕಾಶಕ್ಕೆ ಸ್ವರೂಪೋತ್ಪತ್ತಿಯನ್ನು ತದಭಿಮಾನಿ ವಿನಾಯಕನಿಗೆ ದೇಹೋತ್ಪತ್ತಿಯನ್ನು, ಹಾಗೂ ಅವ್ಯಾಕೃತಾಶಕ್ಕೆ ಮೂರ್ತ ಸಂಬಂಧ ರೂಪೋತ್ಪತ್ತಿಯನ್ನು ಮತ್ತು ತದಭಿಮಾನಿ ರಮಾದೇವಿಗೆ ಸೃಷ್ಟೀಚ್ಛಾ ರೂಪೋತ್ಪತ್ತಿಯನ್ನು ಹೇಳುವುದರಿಂದ ಈ ನಾಲ್ಕು

ಅರ್ಥಗಳಲ್ಲೂ ಮುಖ್ಯವಾಗಿದೆ. ಆದರೆ 'ಅನಾದಿರ್ವಾಯಮಾಕಾಶಃ' ಎಂಬ ಶ್ರುತಿಯು ಕೇವಲ ಅವ್ಯಾಕೃತಾಕಾಶ ತದಭಿಮಾನಿಗಳಿಗೆ ಮಾತ್ರ ಅನಾದಿತ್ವವನ್ನು ಹೇಳುವುದರಿಂದ ಗೌಣವಾಗಿದೆ.

೨) ಅಥವಾ ಆಕಾಶಃ ಸಂಭೂತಃ ಎಂಬಲ್ಲಿನ ಆಕಾಶ ಶಬ್ದವು ಕೇವಲ ಭೂತಾಕಾಶ ತದಭಿಮಾನಿ ವಾಚಕವಾಗಿದೆ. ಆದ್ದರಿಂದ ಅವುಗಳಿಗೆ ಉತ್ಪತ್ತಿಯನ್ನು ತಿಳಿಸುತ್ತದೆ. ಅನಾದಿರ್ವಾಯಂ ಎಂಬ ಶ್ರುತಿಯ ಆಕಾಶ ಶಬ್ದವು ಕೇವಲ ಅವ್ಯಾಕೃತಾಕಾಶ ತದಭಿಮಾನಿ ವಾಚಕವಾದ್ದರಿಂದ ಅವುಗಳಿಗೆ ಅನಾದಿತ್ವವನ್ನು ತಿಳಿಸುವುದು.

ಹೀಗೆ ಎರಡು ರೀತಿ ವಿರೋಧ ಪರಿಹಾರ ಮಾಡಬಹುದು.

**ನ ತಂ ವಿದಾಥ ಎಂಬ ಶ್ರುತಿಯ ಅರ್ಥ.**

ಋಗ್ವೇದ ಸಂಹಿತೆಯ ಎಂಟನೇ ಅಷ್ಟಕ ಮೂರನೇ ಅಧ್ಯಾಯದಲ್ಲಿರುವ ವಿಶ್ವಕರ್ಮ ಸೂಕ್ತದಲ್ಲಿ ಈ ವಾಕ್ಯವಿದೆ. ಇದರ ಪೂರ್ಣರೂಪ ಮತ್ತು ಅರ್ಥ ಹೀಗಿವೆ.

**ನ ತಂ ವಿದಾಥ ಯ ಇಮಾ ಜಜಾನಾನ್ಯ ದ್ಯುಷ್ಮಾಕಮಂತರಂ ಬಭೂವ ।**
**ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥**

ಅರ್ಥ- ಹೇ ಜನಗಳೇ ಯಾವ ವಿಶ್ವಕರ್ಮ (ಭಗವಂತನು) ಈ ಎಲ್ಲ ಲೋಕಗಳನ್ನು ಸೃಷ್ಟಿಸಿದ್ದಾನೋ ಅವನನ್ನು ನೀವು ತಿಳಿದಿಲ್ಲ. ಏಕೆಂದರೆ ಆ ಭಗವಂತನ ಮತ್ತು ನಿಮ್ಮ ಮಧ್ಯದಲ್ಲಿ ಸದಸದ್ವಿಲಕ್ಷಣವಾದ ಅಜ್ಞಾನವು ತಡೆಯಾಗಿದೆ. ಆದ್ದರಿಂದ ಹಿಮದಂತಿರುವ ಆ ಅಜ್ಞಾನದಿಂದ ಆವೃತರಾಗಿ (ವಾಸ್ತವಿಕವಾಗಿ ಮನುಷ್ಯ, ದೇವತೆಗಳಾಗದಿದ್ದರೂ) ನಾನು ಮನುಷ್ಯ ನಾನು ದೇವತೆ ಎಂದು ಸುಳ್ಳು ಹೇಳುತ್ತ, ದೇಹೇಂದ್ರಿಯ ಪ್ರಾಣಗಳಲ್ಲಿ ಮಾತ್ರ ಆಸಕ್ತರಾಗಿ ಅದಕ್ಕೆ ಬೇಕಾಗುವ ಕೆಲಸವನ್ನು ಮಾಡುತ್ತ, ಕೇವಲ ಉಕ್ಥವೆಂಬ ಸ್ತೋತ್ರ ಹೇಳಿ ಯಜ್ಞ ಯಾಗಗಳನ್ನು ಮಾಡುವವರಾಗಿ ಓಡಾಡುತ್ತಿದ್ದೀರಿ.

ಈ ವಾಕ್ಯವು ಅಜ್ಞಾನಕ್ಕೆ ಅನಿರ್ವಚನೀಯತ್ವವನ್ನು ಹೇಳುತ್ತದೆಂದು ಅದ್ವೈತಿಗಳ ಅಭಿಪ್ರಾಯ. ಆದರೆ ಇಲ್ಲಿರುವ ಅನ್ಯತ್ ಎಂಬುದಕ್ಕೆ ಸದಸದ್ವಿಲಕ್ಷಣ ಎಂದು ಅರ್ಥ ಹೇಳುವುದಕ್ಕೆ ಯಾವ ಪ್ರಮಾಣವೂ ಇಲ್ಲ.

ಆದ್ದರಿಂದ ನಿಮಗಿಂತ ಬೇರೆಯಾದ ಎಂದು ಅನ್ಯತ್ ಪದಕ್ಕೆ ಅರ್ಥ. ಉಳಿದ ಅರ್ಥ ಸಿದ್ಧಾಂತ ಪಕ್ಷದಲ್ಲೂ ಅಂಗೀಕೃತವೇ. ಆದ್ದರಿಂದ ಈ ವಾಕ್ಯವು ಅಜ್ಞಾನಕ್ಕೆ ಅನಿರ್ವಚನೀಯತ್ವವನ್ನು ಹೇಳುವುದಿಲ್ಲ.

**ದ್ವಿತೀಯಾಧ್ಯಾಯ ಚತುರ್ಥಪಾದದ ನ್ಯಾಯಮಾಲಾ**

**........................ ತತ್ರ ಸ್ಪಷ್ಟಾರ್ಥವಚ್ಛ್ರುತಿ ಃ।**
**ವಿಶೇಷಶ್ರುತಿ ವೈರೂಪ್ಯಂ ಮಾಹಾತ್ಮ್ಯಂ ವ್ಯಕ್ತ ಸದ್ಗುಣಾಃ ।**
**ದೃಷ್ಟಾಯುಕ್ತಿಃ ಸಮಾನತ್ವಂ ಕರ್ತೃಶಕ್ತಿರ್ವಿಮಿಶ್ರತಾ ।**
**ಯುಕ್ತಯಃ ಪೂರ್ವಪಕ್ಷೇಷು ಸುನಿರ್ಣೀತಾಸ್ತು ತಾದೃಶಾಃ ।**
**ಯುಕ್ತಯೋ ನಿರ್ಣಯಸ್ಯೈವ ಸ್ವಯಂ ಭಗವತೋದಿತಾಃ ।**

೧) ಈ ಪಾದದ ಮೊದಲನೆಯ ಓಂ ತಥಾ ಪ್ರಾಣಾಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಪ್ರಾಣಾಧಿಕರಣದ ಪೂರ್ವಪಕ್ಷ -

ಅಥ ಪ್ರಾಣಾ ಏವಾನಾದಯಃ (ಪ್ರಾಣಗಳು ಅನಾದಿಯಾಗಿವೆ) ಮುಂತಾದ ಶ್ರುತಿಗಳು ಸ್ಪಷ್ಟವಾಗಿ ಪ್ರಾಣಗಳಿಗೆ ಉತ್ಪತ್ತ್ಯಭಾವವನ್ನು (ಅನಾದಿತ್ವವನ್ನು) ಬೋಧಿಸುತ್ತವೆ. ಇದಕ್ಕೆ ವಿರುದ್ಧವಾಗಿ ಏತಸ್ಮಾಜ್ಜಾಯತೇ ಪ್ರಾಣಃ (ಈ ವಿಷ್ಣುವಿನಿಂದಲೇ ಪ್ರಾಣವೂ ಹುಟ್ಟುತ್ತದೆ) ಎಂದು ಪ್ರಾಣೋತ್ಪತ್ತಿ ಬೋಧಕವಾದ ವಾಕ್ಯಗಳು ಅಪ್ರಮಾಣ. ಆದ್ದರಿಂದ ಪರಮಾತ್ಮನಿಗೆ ಸರ್ವಕರ್ತೃತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ಸ್ಪಷ್ಟಾರ್ಥವತ್ ಶ್ರುತಿಃ (ಪ್ರಾಣಗಳು ಅನಾದಿಯೆಂದು ಸ್ಪಷ್ಟವಾಗಿ ಹೇಳುವ ಶ್ರುತಿಗಳು)

ಸಿದ್ಧಾಂತ - ಆತ್ಮೈವೇದಮಗ್ರ ಆಸೀತ್, ಸ ಪ್ರಾಣಮಸೃಜತ ಸ ಪ್ರಾಣಾನ್ (ಸೃಷ್ಟ್ಯಾದಿಯಲ್ಲಿ ಆತ್ಮನೇ ಇದ್ದನು. ಅವನು ಪ್ರಾಣವನ್ನು ಸೃಷ್ಟಿಸಿದನು. ಅವನು ಪ್ರಾಣಗಳನ್ನು ಸೃಷ್ಟಿಸಿದನು) ಮುಂತಾದ ಶ್ರುತಿಗಳು ಸ್ಪಷ್ಟವಾಗಿ ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳುತ್ತಿರುವುದರಿಂದ ಪ್ರಾಣಗಳು ಅನಾದಿಯಲ್ಲ. ಪ್ರಾಣಗಳು ಸೂಕ್ಷ್ಮ ರೂಪದಿಂದ ಅನಾದಿಯೆಂದು ಪ್ರಾಣಾ ಏವ ಅನಾದಯಃ ಮುಂತಾದ ಶ್ರುತಿಗಳು ತಿಳಿಸುತ್ತದೆ. ಇದಂ ಸರ್ವಂ ಅಸೃಜತ (ಕಣ್ಣಿಗೆ ಕಾಣುವ ಈ ಎಲ್ಲವನ್ನೂ ಪರಮಾತ್ಮನೇ ಸೃಷ್ಟಿಸಿದನು) ಎಂದು ಸಾಮಾನ್ಯತಃ ಶ್ರುತಿಯೂ

ಇರುವುದರಿಂದ ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಅಂಗೀಕರಿಸಲೇಬೇಕು. ಆದ್ದರಿಂದ ವಿಷ್ಣುವೇ ಸರ್ವ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯ - ಸ್ಪಷ್ಟಾರ್ಥವತ್ ಶ್ರುತಿಃ (ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಸ್ಪಷ್ಟವಾಗಿ ಹೇಳುವ ಶ್ರುತಿಗಳು)

ಈ ಪಾದದಲ್ಲಿ ಪೂರ್ವಪಕ್ಷದ ಯುಕ್ತಿಗಳೇ ಸಿದ್ಧಾಂತ ನ್ಯಾಯಗಳಾಗಿವೆಯೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

೨) ಓಂ ತತ್ ಪ್ರಾಕ್ ಶ್ರುತೇಶ್ಚ ಓಂ ಎಂಬ ಮನೋಧಿಕರಣದ ಪೂರ್ವಪಕ್ಷ -

ನಿತ್ಯಂ ಮನೋऽನಾದಿತ್ವಾತ್ ಎಂಬ ಶ್ರುತಿಯು ಮನಸ್ಸಿಗೆ ಉತ್ಪತ್ತಿಯಿಲ್ಲವಾದ್ದರಿಂದ ನಾಶವೂ ಇಲ್ಲವೆಂದು ಹೇಳುತ್ತದೆ. ಹೀಗೆ ಮನಸ್ಸಿಗೆ ಅನಾದಿತ್ವ ಸಿದ್ಧವಾಗಿರುವುದರಿಂದ ವಿಷ್ಣುವಿಗೆ ಸರ್ವಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ವಿಶೇಷಶ್ರುತಿ ವೈರೂಪ್ಯಂ (ಮನಸ್ಸು ಅನಾದಿಯೆಂದು ಸ್ಪಷ್ಟವಾಗಿ ಹೇಳುವ ವಿಶೇಷ ಶ್ರುತಿಯ ವಿರೋಧ)

ಸಿದ್ಧಾಂತ - ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ (ಪ್ರಾಣ ಮನಸ್ಸು ಮತ್ತು ಎಲ್ಲ ಇಂದ್ರಿಯಗಳೂ ಈ ಪರಮಾತ್ಮನಿಂದಲೇ ಹುಟ್ಟುತ್ತವೆ) ಮುಂತಾದ ಶ್ರುತಿಗಳಿಂದ ಮನಸ್ಸೂ ಕೂಡ ಪರಮಾತ್ಮನಿಂದಲೇ ಹುಟ್ಟುತ್ತದೆಂದು ನಿಶ್ಚಯವಾಗಿದೆ. ಮನಸ್ಸಿಗೆ ಸೃಷ್ಟಿ ಕಾಲದಲ್ಲಿ ಉತ್ಪತ್ತಿಯಿದ್ದರೂ ಆ ಮನಸ್ಸಿಗೆ ಆಗುವ ಭೂತೋಪಚಯ (ಬೇರೆ ಪಂಚಭೂತಗಳ ಅಂಶಗಳು ಸೇರುವುದು) ಕಡಿಮೆ ಪ್ರಮಾಣದಲ್ಲಿರುವುದರಿಂದ ಮನಸ್ಸು ಅನಾದಿಯೆಂದು ಶ್ರುತಿಗಳು ಹೇಳುತ್ತವಷ್ಟೇ, ಹೊರತು ಸಂಪೂರ್ಣವಾಗಿ ಅನಾದಿಯೇ ಎಂದಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ - ವಿಶೇಷಶ್ರುತಿವೈರೂಪ್ಯ (ಮನಸ್ಸಿಗೆ ಉತ್ಪತ್ತಿಯನ್ನು ಹೇಳುವ ವಿಶೇಷ ಶ್ರುತಿಯ ವಿರೋಧ)

೩) ಓಂ ತತ್‌ಪೂರ್ವಕತ್ವಾದ್ವಾಚಃ ಓಂ ಎಂಬ ವಾಗಧಿಕರಣದ ಪೂರ್ವಪಕ್ಷ -

ವಾಗ್ವಾವ ನಿತ್ಯಾ (ಈ ವಾಕ್ ಎಂಬುದು ನಿತ್ಯ) ಎಂದು ಶ್ರುತಿಯಿರುವುದರಿಂದ ವಾಕ್ ನಿತ್ಯವೇ. ಇದಕ್ಕೆ ಬೇರೆ ಯಾರಿಂದಲೂ ಉತ್ಪತ್ತಿಯಿಲ್ಲ. ಇಲ್ಲಿ ವಾಕ್ ಎಂದರೆ ವಾಗಿಂದ್ರಿಯ. ಶ್ರುತಿಯಲ್ಲ. ಹಾಗೆ ಹೇಳಿದರೆ ಅಸ್ಯಾಂ ಹಿ ಶ್ರುತಿರವತಿಷ್ಠತೇ (ಈ ವಾಕ್ ನಲ್ಲಿ ವೇದವಿದೆ) ಎಂದು ಹೇಳುವ ಶ್ರುತಿಯ ವಿರೋಧ. ಶ್ರುತಿಯಲ್ಲಿ ಶ್ರುತಿಯಿರಲು ಸಾಧ್ಯವಿಲ್ಲ. ಆದ್ದರಿಂದ ವಾಗಿಂದ್ರಿಯಕ್ಕೆ ಅನಾದಿತ್ವವಿರುವುದರಿಂದ ಪರಮಾತ್ಮನಿಗೆ ಸರ್ವಕರ್ತೃತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು - ವಿಶೇಷಶ್ರುತಿ ವೈರೂಪ್ಯಂ (ಮನಸ್ಸಿಗೆ ಅನಾದಿತ್ವ ಬೋಧಕ ಶ್ರುತಿಯ ವಿರೋಧ)

ಸಿದ್ಧಾಂತ - ಮನಸೋ ವಾವ ವಾಕ್ (ಮನಸ್ಸಿನಿಂದಲೇ ವಾಕ್ ಹುಟ್ಟಿದೆ) ಎಂದೂ ಶ್ರುತಿಯು ಮನಸ್ಸಿನಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ತಿಳಿಸುವುದರಿಂದ ಮನಸ್ಸು ಅನಾದಿಯಲ್ಲ. ಅನಾದಿ ನಿತ್ಯವಾದ ವೇದದ ಸನ್ನಿಧಿಯು ವಾಗಿಂದ್ರಿಯದಲ್ಲಿರುವುದರಿಂದ ವಾಕ್ಕನ್ನು ಅನಾದಿ ಯೆಂದು ಶ್ರುತಿ ಹೇಳುತ್ತದೆ, ಸ್ವರೂಪತಃ ಅನಾದಿತ್ವವನ್ನು ಹೇಳುವುದಿಲ್ಲ. ಏತಸ್ಮಾಜ್ಜಾಯತೇ ಪ್ರಾಣಃ ಮನಸ್ಸರ್ವೇಂದ್ರಿಯಾಣಿ ಚ ಎಂಬ ಶ್ರುತಿಯಂತೆ ಪರಮಾತ್ಮನಿಂದಲೇ ವಾಗಿಂದ್ರಿಯದ ಉತ್ಪತ್ತಿಯೂ ಆಗುತ್ತದೆ. ಮನಸ್ಸು ಕೇವಲ ಅವಾಂತರ ಕಾರಣವಷ್ಟೇ ಆದ್ದರಿಂದ ವಿಷ್ಣುವೇ ಸರ್ವಜಗತ್ಕಾರಣ.

ಈ ಸಿದ್ಧಾಂತಕ್ಕೆ ಸಾಧಕವಾದ ನ್ಯಾಯವೂ ವಿಶೇಷ ಶ್ರುತಿ ವೈರೂಪ್ಯಂ (ಮನಸೋ ವಾವ ವಾಗುತ್ಪದ್ಯತೆ ಎಂಬ ವಿಶೇಷ ಶ್ರುತಿಯ ವಿರೋಧ)

೪) ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಸಪ್ತಗತ್ಯಧಿಕರಣದ ಪೂರ್ವಪಕ್ಷ -

ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ (ಪುರುಷನಲ್ಲಿ ಹತ್ತು ಪ್ರಾಣಗಳಿವೆ. ಆತ್ಮನು ಹನ್ನೊಂದನೆಯವನು) ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್ (ಏಳು ಪ್ರಾಣಗಳು ಈ ಪರಮಾತ್ಮನಿಂದ ಉತ್ಪತ್ತಿಯಾಗುತ್ತವೆ) ಎಂದು ಬೇರೆ ಬೇರೆ ಶ್ರುತಿಗಳು ಬೇರೆ ಬೇರೆ ರೀತಿ ಹೇಳುತ್ತವೆ. ಆದ್ದರಿಂದ ಪ್ರಾಣಗಳು ಏಳೋ ಅಥವಾ ಹತ್ತೋ ಎಂದು ತೀರ್ಮಾನಿಸಲಾಗುವುದಿಲ್ಲ. ಹೀಗೆ ಪರಸ್ಪರ ವಿರೋಧದಿಂದ ಶ್ರುತಿಗಳು ಅಪ್ರಮಾಣವಾಗುತ್ತದೆ. ಆದ್ದರಿಂದ ಈ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ವಿಶೇಷ ಶ್ರುತಿ ವೈರೂಪ್ಯ (ಪ್ರಾಣಗಳು ಏಳು ಹತ್ತು ಎಂದು ವಿಶೇಷವಾಗಿ ಹೇಳುವ ಶ್ರುತಿಗಳ ಪರಸ್ಪರ ವಿರೋಧ)

ಸಿದ್ಧಾಂತ - ಪ್ರಾಣಗಳು ಹತ್ತೇ. ಇಲ್ಲಿ ಪ್ರಾಣಗಳೆಂದರೆ ಇಂದ್ರಿಯಗಳು. ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳು ಸೇರಿ ಹತ್ತು ಪ್ರಾಣಗಳೆನಿಸಿವೆ. ಆದ್ದರಿಂದ ಪ್ರಾಣಗಳು ಹತ್ತೇ. ಅವು ಏಳು ಎಂದು ಬೇರೆ ಶ್ರುತಿ ಹೇಳುವುದು ಮನಸ್ಸು ಮತ್ತು ಬುದ್ಧಿಗಳಿಂದ ಸಹಿತವಾದ ಐದು ಜ್ಞಾನೇಂದ್ರಿಯಗಳು ಒಟ್ಟು ಸೇರಿ ಏಳು ಎಂಬ ಅಭಿಪ್ರಾಯದಿಂದ. ಗುಹಾಶಯಾಂ ನಿಹಿತಾಃ ಸಪ್ತ ಸಪ್ತ (ಹೃದಯ ಗುಹಾದಲ್ಲಿ ಐದು ಜ್ಞಾನೇಂದ್ರಿಯಗಳು ಮತ್ತು ಮನೋ ಬುದ್ಧಿಗಳೆಂಬ ಏಳು ಪ್ರಾಣಗಳಿವೆ) ಎಂಬ ವಿಶೇಷ ಶ್ರುತಿಯೂ ಇರುವುದರಿಂದ ಹೀಗೆ ಅಂಗೀಕರಿಸಬೇಕು. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧ ಅಪ್ರಾಮಾಣ್ಯಗಳಿಲ್ಲ. ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುತ್ತದೆ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ -ವಿಶೇಷ ಶ್ರುತಿವೈರೂಪ್ಯಂ (ಹತ್ತು ಮತ್ತು ಏಳು ಎಂದು ಹೇಳುವ ಎರಡು ಪ್ರತ್ಯೇಕ ಶ್ರುತಿಗಳ ಭಿನ್ನ ವಿಷಯತ್ವ)

೫) ಓಂ ಅಣವಶ್ಚ ಓಂ ಎಂಬ ಅಧಿಕರಣದ ಪೂರ್ವಪಕ್ಷ-

ದಿವೀವ ಚಕ್ಷುರಾತತಂ (ಹೇಗೆ ಚಕ್ಷುರಿಂದ್ರಿಯವು ವ್ಯಾಪ್ತವಾಗಿದ್ದರೂ ಅದೃಶ್ಯವಾಗಿದೆಯೋ ಹಾಗೇ ವಿಷ್ಣುವು ವ್ಯಾಪ್ತನಾದರೂ ಅದೃಶ್ಯ.) ಎಂಬ ಶ್ರುತಿಯಿಂದ ಚಕ್ಷುಸ್ಸು ಮುಂತಾದ ಇಂದ್ರಿಯಗಳು ವಿಭು-ವ್ಯಾಪ್ತವೆಂದು ತಿಳಿಯುತ್ತದೆ. ಹೀಗೆ ಚಕ್ಷುರಾದಿಗಳು ವ್ಯಾಪ್ತವೆಂದು ಸಿದ್ಧವಾಗಿರುವುದರಿಂದ ಇಂದ್ರಿಯಗಳು ಅಣುವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಅಪ್ರಮಾಣವಾದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ -ವಿಶೇಷಶ್ರುತಿವೈರೂಪ್ಯಂ (ವ್ಯಾಪ್ತವೆಂದು ಹೇಳುವ ವಿಶೇಷ ಶ್ರುತಿಗಳ ವಿರೋಧ)

ಸಿದ್ಧಾಂತ - ಅಣೂನಿ ವಾ ಇಂದ್ರಿಯಾಣಿ, ತೇಷಾಂ ಪ್ರಕಾಶೋ ವ್ಯಾತತಃ (ಇಂದ್ರಿಯಗಳು ಅಣುವಾಗಿವೆ. ಅವುಗಳ ಪ್ರಕಾಶ ಸರ್ವತ್ರ ವ್ಯಾಪ್ತವಾಗಿದೆ) ಮುಂತಾದ ಶ್ರುತಿಗಳು ಇಂದ್ರಿಯಗಳು ಅಣುವೆಂದು ತಿಳಿಸುತ್ತವೆ. ಆದ್ದರಿಂದ ಇಂದ್ರಿಯಗಳು ಅಣುಗಳೇ. ಹಾಗಾದರೂ ಅವುಗಳ ಪ್ರಕಾಶ ವ್ಯಾಪ್ತವಾದ್ದರಿಂದ ಅವು ವ್ಯಾಪ್ತವೆಂದು ಶ್ರುತಿಗಳು ತಿಳಿಸುತ್ತವೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧ - ಅಪ್ರಾಮಾಣ್ಯಗಳಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ-ವಿಶೇಷ ಶ್ರುತಿವೈರೂಪ್ಯಂ (ಅಣುಗಳೆಂದು ಹೇಳುವ ವಿಶೇಷ ಶ್ರುತಿಗಳ ವಿರೋಧ)

೬) ಓಂ ಶ್ರೇಷ್ಠಶ್ಚ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಮುಖ್ಯಪ್ರಾಣಾಧಿಕರಣದ ಪೂರ್ವಪಕ್ಷ -

ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ. ಯತ್ ಪ್ರಾಪ್ತಿರ್ಯತ್‌ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ । ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ (ಯಾವ ಪ್ರಾಣನ ಪ್ರಾಪ್ತಿ ಮತ್ತು ಪರಿತ್ಯಾಗಗಳು ಉತ್ಪತ್ತಿ ಮರಣಗಳೋ ಅಂತಹ ಪ್ರಾಣನಿಗೆ ಉತ್ಪತ್ತಿ - ಮರಣಗಳು ಹೇಗೆ ಬರಲು ಸಾಧ್ಯ?) ಎಂಬ ವಾಯುಪ್ರೋಕ್ತದ ಯುಕ್ತಿ ಮತ್ತು ನೈಷ ಪ್ರಾಣ ಉದೇತಿ (ಈ ಮುಖ್ಯಪ್ರಾಣನು ಉತ್ಪತ್ತಿಯಾಗುವುದಿಲ್ಲ) ಎಂಬ ಶ್ರುತಿಯೂ ಮುಖ್ಯ

ಪ್ರಾಣನಿಗೆ ಉತ್ಪತ್ತಿಯಿಲ್ಲವೆಂದು ಹೇಳುತ್ತವೆ. ಆದ್ದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯಿದೆಯೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ ಮಾಹಾತ್ಮ್ಯಂ (ಸಕಲ ಜಗತ್ತಿಗೆ ಜೀವನಪ್ರದತ್ವರೂಪ ಮುಖ್ಯಪ್ರಾಣನ ಮಹಿಮೆ)

ಸಿದ್ಧಾಂತ - ಮಹತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ । ಕಿಂ ನಾಮ ನ ಸೃಜೇದೇಷಃ ಯೇನ ಶಕ್ತ್ಯೇದಮಾವೃತಂ (ವಿಷ್ಣುವು ಮಹಾತ್ಮರಿಗಿಂತ ಮಾಹಾತ್ಮ. ಆದ್ದರಿಂದಲೇ ಪ್ರಾಣನಿಗೂ ಸೃಷ್ಟಿ ಕರ್ತ. ಯಾರ ಶಕ್ತಿಯಿಂದ ಇಡೀ ಜಗತ್ತು ಆವರಿಸಲ್ಪಟ್ಟಿದೆಯೋ ಅಂತಹ ವಿಷ್ಣು ಏನನ್ನು ತಾನೇ ಸೃಷ್ಟಿಸಲಾರ?) ಎಂಬ ಶ್ರುತಿಯು ಮುಖ್ಯಪ್ರಾಣನು ಪರಮಾತ್ಮನಿಂದ ಉತ್ಪತ್ತಿಯಾಗಿದ್ದಾನೆಂದು ಹೇಳುತ್ತದೆ. ಆದ್ದರಿಂದ ಪ್ರಾಣನು ಪರಮಾತ್ಮನಿಂದ ಉತ್ಪತ್ತಿಯಾಗಿದ್ದಾನೆಂದು ಅಂಗೀಕರಿಸಿದರೂ ಇತರ ಸರ್ವ ಜಗದುತ್ಪಾದಕನೆಂದಂಗೀಕರಿಸಲು ಯಾವುದೇ ತೊಂದರೆ ಇಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ - ಮಾಹಾತ್ಮ್ಯಂ (ಪ್ರಾಣನ ಮಾಹಾತ್ಮ್ಯಕ್ಕಿಂತ ಅಧಿಕವಾದ ಸರ್ವೋತ್ಪಾದಕತ್ವವೆಂಬ ಪರಮಾತ್ಮನ ಮಾಹಾತ್ಮ್ಯ)

೭) ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಚಕ್ಷುರಾದ್ಯಧಿಕರಣದ ಪೂರ್ವಪಕ್ಷ - ಮುಖ್ಯಪ್ರಾಣನು ಸ್ವತಂತ್ರನೇ. ನ ಪ್ರಾಣಃ ಕಿಂಚಿದಾಶ್ರಿತಃ (ಪ್ರಾಣನು ಯಾರನ್ನೂ ಆಶ್ರಯಿಸಿಲ್ಲ) ಎಂಬ ಶ್ರುತಿಯು ಹಾಗೆ ಹೇಳುತ್ತದೆ. ಹಾಗೆಯೇ ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್ (ಯಾವ ಪ್ರಾಣನಿಂದ ಈ ಎಲ್ಲ ಜಗತ್ತಿನ ವ್ಯಾಪರಗಳು ನಡೆಯುತ್ತವೋ ಅಂತಹ ಪ್ರಾಣನು ಬೇರೆಯವರನ್ನು ಆಶ್ರಯಿಸಲು ಹೇಗೆ ಸಾಧ್ಯ?) ಎಂಬ ಶ್ರುತಿಯೂ ಹಾಗೇ ಹೇಳುತ್ತದೆ. ಆದ್ದರಿಂದ ಪ್ರಾಣನು ಪರಮಾತ್ಮನ

ವಶನೆಂದು ಹೇಳುವ ಶ್ರುತಿಗಳು ಅಪ್ರಮಾಣ ಆದ್ದರಿಂದ ವಿಷ್ಣು ಜಗತ್ಕಾರಣನಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯವೂ ಮಾಹಾತ್ಮ್ಯಂ (ಸರ್ವಚೇಷ್ಟಕತ್ವರೂಪ ಮಾಹಾತ್ಮ್ಯ)

ಸಿದ್ಧಾಂತ - ಪ್ರಾಣಃ ಪರವಶೇ ಸ್ಥಿತಃ, ಸರ್ವಕರ್ತಾಽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ (ಇಡೀ ಜಗತ್ತಿಗೆ ಕರ್ತೃವಾಗಿದ್ದರೂ ಪ್ರಾಣನು ಪರಮಾತ್ಮನ ವಶನಾಗಿದ್ದಾನೆ) ಮುಂತಾದ ಶ್ರುತಿಗಳು ಪ್ರಾಣನು ಪರಮಾತ್ಮನ ವಶನೆಂದು ಹೇಳುತ್ತಿರುವುದರಿಂದ ಪ್ರಾಣನು ಸ್ವತಂತ್ರನಲ್ಲ ಪರಮಾತ್ಮನ ವಶನೇ ಆದ್ದರಿಂದ ವೇದಗಳು ಪ್ರಮಾಣವೇ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಸಾಧಕವಾದ ನ್ಯಾಯವೂ ಮಾಹಾತ್ಮ್ಯ. (ಸರ್ವ ಚೇಷ್ಟಕನಾದ ಪ್ರಾಣನಿಗೆ ಆಧಾರವಾಗಿರುವ ವಿಷ್ಣುವಿನ ಮಾಹಾತ್ಮ್ಯ) ಈ ಅಧಿಕರಣ ಪೂರ್ವಪಕ್ಷ ಸಿದ್ಧಾಂತಗಳು ಹಿಂದಿನ ಅಧಿಕರಣದಂತೆಯೇ ಇವೆ.

೮) ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ ಎಂಬ ಪಂಚವೃತ್ತ್ಯಧಿಕರಣದ ಪೂರ್ವಪಕ್ಷ -

ಸರ್ವೇ ವಾ ಏತೇ ಮುಖ್ಯದಾಸಾಃ (ಪ್ರಾಣಾಪಾನವ್ಯಾನ ಸಮಾನೋದಾನರೆಂಬ ಐದು ವಾಯುಗಳು ಎಲ್ಲರೂ ಮುಖ್ಯಪ್ರಾಣನ ದಾಸರು) ಎಂದು ಒಂದು ಶ್ರುತಿಯು ಹೇಳುತ್ತದೆ. ಇನ್ನೊಂದು ಶ್ರುತಿಯು ಪಾಯೂಪಸ್ಥೇ ಅಪಾನಂ, ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ । ಮಧ್ಯೇ ತು ಸಮಾನ ಏಷಃ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷ್ಯೋ ಭವಂತಿ ನಾಡೀ ಸಹಸ್ರಾಣ್ಯಾಸು ವ್ಯಾನಶ್ಚರತಿ ಅಥೈಕಯಾ ಊರ್ಧ್ವ ಉದಾನಃ (ಗುದ-ಶಿಶ್ನಗಳಲ್ಲಿ ಅಪಾನ, ಮುಖ-ಕಣ್ಣು-ಮೂಗುಗಳಲ್ಲಿ ಪ್ರಾಣ, ನಾಭಿಯಲ್ಲಿ ಸಮಾನ, ಎಲ್ಲ ನಾಡಿಗಳಲ್ಲಿ ವ್ಯಾನ, ಗಂಟಲಲ್ಲಿ ಮೇಲೆ ಉದಾನ. ಹೀಗೆ ಬೇರೆ ಬೇರೆ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಕೆಲಸ ಮಾಡುತ್ತಾರೆ) ಎಂದು ಪ್ರಾಣಾದಿಗಳಿಗೆ ವ್ಯಕ್ತಸದ್ಗುಣತ್ವವನ್ನು ಹೇಳುತ್ತದೆ. ಇದು ಕೂಡಬೇಕಾದರೆ

ಮುಖ್ಯಪ್ರಾಣ ಮತ್ತು ಇತರ ಪ್ರಾಣಾದಿಗಳು ಒಂದೇ ಆಗಿರಬೇಕು. ಇಲ್ಲದಿದ್ದರೆ ದಾಸರು ಪ್ರಾಣಾದಿಗಳು ವ್ಯಕ್ತಸದ್ಗುಣರು. ಸ್ವಾಮಿ ಮುಖ್ಯಪ್ರಾಣ ವ್ಯಕ್ತಸದ್ಗುಣನಲ್ಲವೆಂದಾಗುತ್ತದೆ. ಇದು ಸರಿಯಲ್ಲ. ಆದ್ದರಿಂದ ಮುಖ್ಯಪ್ರಾಣನೇ ಇತರ ಪ್ರಾಣಾದಿಗಳು.

ಹೀಗೆ ಬೇರೆ ಬೇರೆ ಶ್ರುತಿಗಳು ಪರಸ್ಪರ ವಿರುದ್ಧವಾಗಿ ಹೇಳುತ್ತಿರುವುದರಿಂದ ಅಪ್ರಮಾಣ. ವೇದಗಳಿಂದ ವಿಷ್ಣುವು ಜಗತ್ಕಾರಣನಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ - ವ್ಯಕ್ತಸದ್ಗುಣಾಃ (ಪ್ರಾಣಾದಿಗಳಿಗೆ ಹೇಳಲ್ಪಟ್ಟಿರುವ ವ್ಯಕ್ತವಾದ ಸದ್ಗುಣಗಳು)

ಸಿದ್ಧಾಂತ - ಮುಖ್ಯಪ್ರಾಣ ಸ್ವರೂಪವಾದ ಐದು ಪ್ರಾಣಾದಿಗಳಿಗೆ ಅಶೇಷ ಸದ್ಗುಣತ್ವವಿದೆ. ಈ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರಲ್ಲ. ದಾಸರಾದ ಬೇರೆ ಐದು ವ್ಯಕ್ತಸದ್ಗುಣ ಪ್ರಾಣಾದಿಗಳೂ ಇವೆ. ಇವು ಮುಖ್ಯಪ್ರಾಣನ ಸ್ವರೂಪವಲ್ಲ. ಇದನ್ನು ಅಶೇಷ ಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ । ತದ್ದಾಸಾಃ ಪಂಚ ಚಾನ್ಯೇಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ಎಂಬ ಶ್ರುತಿಯು ತಿಳಿಸುತ್ತಿದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯೂ ವ್ಯಕ್ತಸದ್ಗುಣಾಃ (ಮುಖ್ಯಪ್ರಾಣ ಸ್ವರೂಪವಾದ ಪ್ರಾಣಾದಿಗಳಿಗೆ ಇರುವ, ದಾಸಭೂತ ಪ್ರಾಣಾದಿಗಳ ಗುಣಗಳಿಂದ ಅಧಿಕವಾದ ವ್ಯಕ್ತ ಸದ್ಗುಣಗಳು)

೯) ಓಂ ಅಣವಶ್ಚ ಓಂ ಎಂಬ ಪ್ರಾಣಾಣುತ್ವಾಧಿಕರಣದ ಪೂರ್ವಪಕ್ಷ

ಪ್ರಾಣ ಏವಾಧಸ್ತಾತ್ ಪ್ರಾಣ ಉಪರಿಷ್ಟಾತ್ ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ (ಕೆಳಗೂ ಮೇಲೂ ಮಧ್ಯದಲ್ಲೂ ಎಲ್ಲಡೆಯಲ್ಲೂ ಪ್ರಾಣನೇ ಇದ್ದಾನೆ) ಮುಂತಾದ ಶ್ರುತಿಗಳು ಪ್ರಾಣನು ವ್ಯಾಪ್ತನೆಂದು ಹೇಳುತ್ತವೆ. ಹಾಗಿದ್ದಾಗ ಪ್ರಾಣನನ್ನು ಅಣುವೆಂದಂಗೀಕರಿಸಿದರೆ ದೃಷ್ಟವಾದ ವ್ಯಾಪ್ತತ್ವವು ಯುಕ್ತವಾಗಲಿಕ್ಕಿಲ್ಲ. ಮಹಾನ್ಸೈ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಂ (ಯಾವ ಮುಖ್ಯಪ್ರಾಣನಿಂದ ಜಗತ್ತು ವ್ಯಾಪ್ತವಾಗಿದೆಯೋ ಅಂತಹ ಮುಖ್ಯಪ್ರಾಣನು ಮಹಾನ್=ವ್ಯಾಪ್ತ

ನಾಗಿದ್ದಾನೆ) ಎಂಬ ಶ್ರುತಿಯೂ ಹಾಗೇ ಹೇಳುತ್ತಿದೆ. ಆದ್ದರಿಂದ ಪ್ರಾಣನು ಅಣುವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ - ದೃಷ್ಟಾಯುಕ್ತಿ (ಅಣುವೆಂದಂಗೀಕರಿಸಿದರೆ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವ ವ್ಯಾಪ್ತತ್ವವು ಯುಕ್ತವಾಗಲಿಕ್ಕಿಲ್ಲವೆಂಬ ಯುಕ್ತಿ)

ಸಿದ್ಧಾಂತ - ಅಣುರ್ವೈ ಮುಖ್ಯಪ್ರಾಣೋ ಯ ಉತ್ಕ್ರಾಮತಿ ನಾಡೀಭಿಃ (ನಾಡಿಗಳಲ್ಲಿ ಸಂಚರಿಸುವ ಈ ಮುಖ್ಯಪ್ರಾಣನು ಅಣುವೇ) ಮುಂತಾದ ಶ್ರುತಿಗಳ ಪ್ರಕಾರ ಮುಖ್ಯಪ್ರಾಣನು ಅಣುವೆಂದೇ ಅಂಗೀಕರಿಸಬೇಕು. ಅವನು ಸ್ವರೂಪತಃ ಅಣುವಾಗಿದ್ದರೂ ತನ್ನ ದೇಹದ ಹೊರಗಿರುವ ಮುಖ್ಯಪ್ರಾಣರೂಪದಿಂದ ಸರ್ವತ್ರ ವ್ಯಾಪ್ತನಾಗಿದ್ದಾನೆ. ಆದ್ದರಿಂದ ಮುಖ್ಯಪ್ರಾಣನು ವ್ಯಾಪ್ತನೆಂದು ಶ್ರುತಿಗಳು ಹೇಳುತ್ತವೆ. ಸ್ವರೂಪತಃ ವ್ಯಾಪ್ತನೆಂದಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯವೂ ದೃಷ್ಟಾಯುಕ್ತಿಃ ವ್ಯಾಪ್ತನೆಂದಂಗೀಕರಿಸಿದರೆ ದೃಷ್ಟವಾದ ನಾಡೀ ಸಂಚಾರಾದಿಗಳು ಕೂಡಲಿಕ್ಕಿಲ್ಲ ಎಂಬ ಯುಕ್ತಿ.

೧೦) ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಜ್ಯೋತಿರಾದ್ಯಧಿಕರಣದ ಪೂರ್ವಪಕ್ಷ -

ಜೀವಸ್ಯ ಕರಣಾನ್ಯಾಹುಃ ಪ್ರಾಣಾನ್ (ಪ್ರಾಣಗಳು ಜೀವನಿಗೆ ಕರಣಗಳೆಂದು ಹೇಳುತ್ತಾರೆ) ಎಂಬ ಶ್ರುತಿಯಿಂದ ಪ್ರಾಣಗಳು ಜೀವನಿಗೆ ಕರಣವೆಂದು ಗೊತ್ತಾಗುತ್ತದೆ. ಒಂದು ವೇಳೆ ಜೀವನ ಕರಣಗಳಾಗಿ ರದಿದ್ದರೆ ಇಂದ್ರಿಯಗಳು ಜೀವನ ವಶವಾಗಿರುತ್ತಿರಲಿಲ್ಲ. ಆದ್ದರಿಂದ ಈ ಪ್ರಾಣಗಳು ಬ್ರಹ್ಮನಿಗೆ ಕರಣಗಳಲ್ಲ ಆದ್ದರಿಂದ ಬ್ರಹ್ಮಣೋ ವಾ ಏತಾನಿ ಕರಣಾನಿ (ಈ ಪ್ರಾಣಗಳು ಬ್ರಹ್ಮನ ಕರಣಗಳು) ಎಂದು ಬ್ರಹ್ಮಕರಣತ್ವವನ್ನು

ಹೇಳುವ ಶ್ರುತಿಗಳು ಅಪ್ರಮಾಣವೇ ಈ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ ದೃಷ್ಟಾಯುಕ್ತಿ (ಬ್ರಹ್ಮಕರಣಗಳಾದರೆ ಶ್ರುತಿಬೋಧ್ಯವಾದ ಜೀವಕರಣ ತ್ವದ ಅಯುಕ್ತಿ)

ಸಿದ್ಧಾಂತ - ಪ್ರಾಣಗಳು ಈಶ್ವರಾಧೀನ (ಈಶ್ವರ ಕರಣಗಳು) ಯಶ್ಚಕ್ಷುಷಿ ತಿಷ್ಠನ್ (ಯಾರು ಕಣ್ಣಲ್ಲಿದ್ದು ಅದನ್ನು ನಿಯಂತ್ರಿಸುತ್ತಾರೋ ಅವನು ಬ್ರಹ್ಮ) ಮುಂತಾದ ಶ್ರುತಿಗಳಿಂದ ಚಕ್ಷುರಾದಿ ಪ್ರಾಣಗಳು (ಇಂದ್ರಿಯಗಳು) ಪರಮಾತ್ಮಾಧೀನವೆಂದು ಗೊತ್ತಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಪ್ರಾಣಗಳು ಜೀವವಶವಲ್ಲವೆಂದೇ ಕಂಡಿದೆ ಈಶ್ವರನ ಇಚ್ಛೆಯಿಂದಲೇ ಕೆಲವು ಸಲ ಇಂದ್ರಿಯಗಳು ಜೀವಾಧೀನವಾಗಿದೆ. ಆದ್ದರಿಂದ ಕೆಲವು ಶ್ರುತಿಗಳು ಪ್ರಾಣಗಳನ್ನು ಜೀವಕರಣವೆಂದು ಹೇಳುತ್ತವೆ. ಆದ್ದರಿಂದ ಈಶ್ವರ ಕರಣಗಳೇ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯವೂ ದೃಷ್ಟಾಯುಕ್ತಿ (ದೃಷ್ಟವಾದ ಜೀವಾನಧೀನತ್ವದ ಅಯುಕ್ತಿ)

೧೧) ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಇಂದ್ರಿಯಾಧಿಕರಣ ಪೂರ್ವಪಕ್ಷ ಪ್ರಾಣಾ ವಾ ಇಂದ್ರಿಯಾಣಿ (ಪ್ರಾಣಗಳೆಲ್ಲ ಇಂದ್ರಿಯಗಳು) ಎಂಬ ಶ್ರುತಿಯಿಂದ ಮುಖ್ಯಪ್ರಾಣನನ್ನು ಒಳಗೊಂಡಂತೆ ಎಲ್ಲ ಪ್ರಾಣಗಳೂ ಇಂದ್ರಿಯಗಳೆಂದು ತಿಳಿಯುತ್ತದೆ. ಇತರ ಪ್ರಾಣಗಳು ಪರಮಾತ್ಮನ ವಶವಾಗಿರುವಂತೆ ಮುಖ್ಯಪ್ರಾಣನೂ ಇಂದ್ರಿಯವೇ ಆಗಬೇಕು. ಹೀಗೆ ಯುಕ್ತಿ ಮತ್ತು ಶ್ರುತಿಗಳಿಂದ ಮುಖ್ಯಪ್ರಾಣನಿಗೆ ಇಂದ್ರಿಯತ್ವ ಸಿದ್ಧವಾಗಿರುವುದರಿಂದ ಮುಖ್ಯಪ್ರಾಣನು ಇಂದ್ರಿಯವಲ್ಲವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ-ಸಮಾನತ್ವ (ಚಕ್ಷುರಾದಿಗಳಂತೆ ಮುಖ್ಯಪ್ರಾಣನೂ ಈಶ್ವರನ ವಶನಾಗಿರುವುದು)

ಸಿದ್ಧಾಂತ - ದ್ವಾದಶೈವೇಂದ್ರಿಯಾಣ್ಯಾಹುಃ ಮನೋಬುದ್ಧೀ ತು ದ್ವಾದಶೇ (ಒಟ್ಟು ಹನ್ನೆರಡೇ ಇಂದ್ರಿಯಗಳು ಅವುಗಳಲ್ಲಿ ಮನಸ್ಸು ಮತ್ತು ಬುದ್ಧಿಗಳು ಹನ್ನೊಂದನೆಯ ಮತ್ತು ಹನ್ನೆರಡನೆಯ ಇಂದ್ರಿಯಗಳಾಗಿವೆ) ಮುಂತಾದ ಶ್ರುತಿಗಳು ಹನ್ನೆರಡೇ ಇಂದ್ರಿಯಗಳೆಂದು ಹೇಳುತ್ತಿವೆ. ಮತ್ತು ಪ್ರಾಣಸ್ಯೈತದ್ವಶೇ ಸರ್ವಂ (ಎಲ್ಲವೂ ಮುಖ್ಯಪ್ರಾಣನ ವಶದಲ್ಲಿದೆ) ಮುಂತಾದ ಶ್ರುತಿಗಳು ಮುಖ್ಯಪ್ರಾಣನಿಗೆ, ವಿಷ್ಣುವಿನಲ್ಲಿರುವಂತೆ ಸರ್ವಾಧಿಪತಿತ್ವವಿದೆ ಯೆಂದು ಹೇಳುತ್ತಿವೆ. ಮುಖ್ಯಪ್ರಾಣನೂ ಇಂದ್ರಿಯವಾದರೆ ಇತರ ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನಿಗೂ ಸರ್ವಾಧಿಪತ್ಯವೆಂಬ ಪರಮಾತ್ಮನ ಸಾಮ್ಯ ಕೂಡುವುದಿಲ್ಲ ಮುಖ್ಯಪ್ರಾಣನಿಗೆ ಸರ್ವಾಧಿಪತ್ಯವಿದ್ದರೂ ಅವನು ಈಶ್ವರವಶನೇ. ಆದ್ದರಿಂದ ಯುಕ್ತಿ ಮತ್ತು ಶ್ರುತಿಗಳಿಂದ ಮುಖ್ಯಪ್ರಾಣನು ಇಂದ್ರಿಯವಲ್ಲವೆಂದು ಸಿದ್ಧವಾಗುತ್ತದೆ. ಎಲ್ಲ ಪ್ರಾಣಗಳು ಇಂದ್ರಿಯಗಳು ಎಂದು ಹೇಳುವ ಶ್ರುತಿಗಳು ಮುಖ್ಯಪ್ರಾಣನನ್ನು ಬಿಟ್ಟು ಉಳಿದವುಗಳಿಗೆ ಮಾತ್ರ ಇಂದ್ರಿಯತ್ವವನ್ನು ಹೇಳುತ್ತವೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯವೂ-ಸಮಾನತ್ವ (ಮುಖ್ಯಪ್ರಾಣನಲ್ಲಿರುವ, ವಿಷ್ಣುವಿನ ಸಮಾನ ಧರ್ಮ= ಸರ್ವಾಧಿಪತ್ಯ)

೧೨) ಓಂ ಸಂಜ್ಞಾಮೂರ್ತಿ ಕ್ಲೃಪ್ತಿಸ್ತು ತ್ರಿವೃತ್ ಕುರ್ವತ ಏಕೆ ಓಂ ಎಂಬ ಸಂಜ್ಞಾಧಿಕರಣದ ಪೂರ್ವಪಕ್ಷ -

ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ ವಿದಧಾತಿ (ಚತುರ್ಮುಖ ಬ್ರಹ್ಮನೇ ಈ ಎಲ್ಲ ಜಗತ್ತನ್ನು ಸೃಷ್ಟಿಸುತ್ತಾನೆ) ಎಂಬ ಶ್ರುತಿಯಿಂದ ಚತುರ್ಮುಖ ಬ್ರಹ್ಮನೇ ಸೃಷ್ಟಿಕರ್ತನೆಂದು ತಿಳಿಯುತ್ತದೆ. ಹೀಗೆ ವಿರಿಂಚನೇ ಕರ್ತೃವೆಂದು ಸಿದ್ಧವಾಗುವುದರಿಂದ ಪರಬ್ರಹ್ಮನೇ ಕರ್ತೃವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಈ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧವಾಗುವುದಿಲ್ಲ. ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ - ಕರ್ತೃಶಕ್ತಿಃ (ಚತುರ್ಮುಖ ಬ್ರಹ್ಮನಿಗೆ ಇದೆಯೆಂದು ಶ್ರುತಿಯಿಂದ ಹೇಳಲ್ಪಡುವ ಕರ್ತೃತ್ವಶಕ್ತಿ)

ಸಿದ್ಧಾಂತ - ಅಥ ಕಸ್ಮಾದುಚ್ಯತೇ ಪರಮ ಇತಿ, ಪರಮಾದ್ಧ್ಯೇತೇ ನಾಮರೂಪೇ ವ್ಯಾಕ್ರಿಯೇತೆ (ಈ ವಿಷ್ಣುವಿನಿಂದಲೇ ನಾಮರೂಪಾತ್ಮಕ ಪ್ರಪಂಚದ ಸೃಷ್ಟಿ ಆಗುವುದರಿಂದ ಅವನನ್ನು ಪರಮನೆಂದು ಕರೆಯುತ್ತಾರೆ) ಎಂಬ ಶ್ರುತಿಯ ಪ್ರಕಾರ ವಿಷ್ಣುವೇ ದೇಹಾದಿಗಳ ಮೂಲ ಸೃಷ್ಟಿಕರ್ತಾ, ಚತುರ್ಮುಖ ಬ್ರಹ್ಮನಲ್ಲ. ವಿರಿಂಚಾದಿಗಳು ಅವಾಂತರ ಸೃಷ್ಟಿ ಕರ್ತರಷ್ಟೇ 'ಹರಿರೇವ ಯತಃ ಕರ್ತಾ' ಎಂದು ಪುರಾಣವೂ ವಿಷ್ಣುವೇ ಕರ್ತೃವೆಂದು ಹೇಳುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ - ಕರ್ತೃಶಕ್ತಿ (ಕರ್ತೃತ್ವ ಶಕ್ತಿಯು ವಿಷ್ಣುವಿಗೇ ಇದೆಯೆಂದು ಶ್ರುತಿಗಳಿಂದ ಹೇಳಲ್ಪಟ್ಟಿರುವುದು)

೧೩) ಓಂ ಮಾಂಸಾದಿ ಭೌಮಂ ಯಥಾ ಶಬ್ದಮಿತರಯೋಶ್ಚ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಮಾಂಸಾಧಿಕರಣದ ಪೂರ್ವಪಕ್ಷ -

ಅಧ್ಭ್ಯೋ ಹೀದಮುತ್ಪದ್ಯತೇ, ಆಪೋ ವಾ ಮಾಂಸಂ (ನೀರಿನಿಂದಲೇ ಈ ದೇಹ ಹುಟ್ಟುತ್ತದೆ. ನೀರಿನಿಂದಲೇ ಮಾಂಸ ಹುಟ್ಟುತ್ತದೆ) ಎಂದು ಒಂದು ಶ್ರುತಿಯು ಹೇಳುತ್ತದೆ. ಮತ್ತೊಂದು ಪೃಥಿವೀ ಶರೀರಂ (ಪೃಥಿವೀಮಯವಾದದ್ದು ಈ ಶರೀರ) ಎಂದು ಹೇಳುತ್ತದೆ. ಮಗದೊಂದು ಸೋಗ್ನೇರ್ದೇವ ಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ (ಅಗ್ನಿಗೆ ಹಾಕಿದ ಆಹುತಿಗಳಿಂದ ಹುಟ್ಟಿದ ಹಿರಣ್ಯಮಯವಾದ ಶರೀರ) ಎಂದು ಶರೀರವು ಬೆಂಕಿಯಿಂದ ಹುಟ್ಟಿದೆಯೆಂದು ಹೇಳುತ್ತದೆ.

ಮತ್ತೊಂದು ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ (ಪೃಥಿವೀ ಅಪ್ ತೇಜಸ್ಸು ಈ ಮೂರು ದೇವತೆಗಳು ಪುರುಷನನ್ನು ಆಶ್ರಯಿಸಿದ್ದಾರೆ) ಎಂದು ಈ ಶರೀರವು ಭೂತತ್ರಯಾತ್ಮಕವೆಂದು ಹೇಳುತ್ತದೆ. ಹೀಗೆ ಶ್ರುತಿಗಳು ಪರಸ್ಪರ ವಿರುದ್ಧವಾದ್ದರಿಂದ ಅಪ್ರಮಾಣವಾಗಿವೆ. ಆದ್ದರಿಂದ ಶ್ರುತಿಗಳಿಂದ ವಿಷ್ಣುವು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ನ್ಯಾಯ ವಿಮಿಶ್ರತಾ (ಶರೀರವು ಈ ಮೂರು ಭೂತಗಳಿಂದ ಸೇರಿ ಆಗಿದೆಯೆಂದು ಅಂಗೀಕರಿಸಿದಾಗ ಈ

ಶರೀರವು ಪೃಥಿವೀ ಮಯವೇ ಎಂದು ಮೊದಲಾದ ವಿಶೇಷವಾದ ವಚನಗಳ ಅನುಪಪತ್ತಿ)

ಸಿದ್ಧಾಂತ - ಈ ಶರೀರವು ಪೃಥಿವ್ಯಾದಿ ಭೂತಗಳ ಮಿಶ್ರಣವಾಗಿದ್ದರೂ ಅದರಲ್ಲೇ ವಿಶೇಷವಿರುವುದರಿಂದ, ಇದು ಪೃಥಿವೀಮಯ ಮುಂತಾದ ಉಕ್ತಿಗಳು ಕೊಡುತ್ತವೆ. ಅದನ್ನು 'ಪಾರ್ಥಿವ ಶರೀರಗಳಲ್ಲಿ ಅರ್ಧ ಭಾಗ ಪೃಥಿವೀ' ಉಳಿದ ಮೂರು ಭಾಗ ನೀರು, ಮತ್ತೊಂದು ಭಾಗ ತೇಜಸ್ಸು ಎಂಬುದಾಗಿ ಭಾಷ್ಯದಲ್ಲಿ ತೋರಿಸಲಾಗಿದೆ.

ಅನ್ನಮಶಿತಂ ತ್ರೇಧಾ ಭವತಿ (ಉಂಡ ಅನ್ನ ಮೂರು ರೀತಿಯಾಗಿ ದೇಹದಲ್ಲಿ ಉಳಿಯುತ್ತದೆ)

ಸರ್ವಂ ಚ ಭೌತಿಕಂ ಮಿಶ್ರಂ ಮಿಶ್ರತ್ವೇऽಪಿ ವಿಮಿಶ್ರತಾ ।
ಭೌಮಂ ಮಾಂಸಮಸೃಗ್ವಾರಿ ತೇಜೋ ಮಜ್ಜಾ ವಿಶೇಷತಃ ॥

(ಈ ದೇಹ ಮೂರು ಭೂತಗಳ ಮಿಶ್ರಣವಾಗಿದ್ದರೂ ಅದರಲ್ಲಿ ವಿಶೇಷವಿದೆ. ಮಾಂಸವು ಪೃಥಿವೀಯ ಅಂಶ ರಕ್ತವು ನೀರಿನ ಭಾಗ ಮಜ್ಜೆಗಳು ತೇಜಸ್ಸಿನ ಅಂಶ) ಎಂಬುದಾಗಿ ಶ್ರುತಿ, ಸ್ಮೃತಿಗಳೂ ಹಾಗೇ ಹೇಳುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವೇ ಜಗತ್ಕಾರಣ.

ಈ ಸಿದ್ಧಾಂತಕ್ಕೆ ಆಧಾರವಾದ ನ್ಯಾಯ ವಿಮಿಶ್ರತಾ (ದೇಹವು ಮೂರು ಭೂತಗಳ ಮಿಶ್ರಣವಾಗಿದ್ದರೂ ಅದರಲ್ಲಿ ಇರುವ ವಿಶೇಷ)

ಹೀಗೆ ಈ ಪಾದದಲ್ಲಿ ವೇದಗಳಿಗೆ ಶ್ರುತಿ ಸಹಿತಯುಕ್ತಿಗಳ ವಿರೋಧವಿಲ್ಲವೆಂದು ತೋರಿಸಲಾಗಿದೆ.



# ತೃತೀಯಾಧ್ಯಾಯ

**ಕುಪಿತಾಹಿಫಣಚ್ಛಾಯಾಸಮೀಕ್ಷ್ಯತ್ಯಾಪರಂ ಸುಖಮ್ ।**

**ಸೇವಂತೇ ಯತ್ಪದಂ ಧೀರಾ: ತಂ ಭಜೇ ವಲ್ಲಭಂ ಶ್ರಿಯ: ॥**

ಜ್ಞಾನಿಗಳು ಅಥವಾ ಧೈರ್ಯಶಾಲಿಗಳು ವಿಷಯಜನ್ಯಸುಖವನ್ನು ಕೋಪಗೊಂಡ ಹಾವಿನ ಹೆಡೆಯ ನೆರಳಿಗೆ ಸಮವೆಂದು ಭಾವಿಸಿ ಯಾವ ಭಗವಂತನ ಸ್ವರೂಪವನ್ನು ಭಕ್ತಿ ಶ್ರವಣ ಮನನ ಧ್ಯಾನ ಜ್ಞಾನಗಳಿಂದ ವಿಷಯೀಕರಿಸುವರೊ ಅಂತಹ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಸೇವಿಸುತ್ತೇನೆ.

ಇಲ್ಲಿ ಸಮೀಕ್ಷ್ಯತ್ಯ ಎಂದು ಲ್ಯಬಂತ ಪ್ರಯೋಗ ಮಾಡಿದ್ದರಿಂದ ಪ್ರಥಮ ಪಾದಾರ್ಥವಾದ ವೈರಾಗ್ಯವು ಭಕ್ತ್ಯಾದಿಗಳಿಗೆ ಕಾರಣವಾದ್ದರಿಂದ ವೈರಾಗ್ಯ ಪಾದಕ್ಕೆ ಪ್ರಾಥಮ್ಯವು ಸೂಚಿತವಾಯಿತು.

ಕುಪಿತಾಹಿಫಣಚ್ಛಾಯಾಸಮೀಕ್ಷ್ಯತ್ಯ ಎಂಬಲ್ಲಿ 'ಛಾಯಾ ಬಾಹುಲ್ಯೇ ಎಂಬ ಸೂತ್ರದಿಂದ ಇಕ್ಷುಚ್ಛಾಯಂ ಎಂಬಲ್ಲಿ ಬಂದಂತೆ ಹ್ರಸ್ವ ಬರಬೇಕಾಗಿತ್ತು ಎಂದು ಶಂಕೆ ಬರುತ್ತದೆ. ಇದಕ್ಕೆ ಸಮಾಧಾನ - ಛಾಯಾ ನಿರೂಪಕ ವಸ್ತುಗಳು ಅಂದರೆ ಛಾಯೆಯನ್ನು ಕೊಡುವ ವಸ್ತುಗಳು ಬಹಳವಾಗಿವೆ ಎಂದು ವಿವಕ್ಷೆ ಇದ್ದರೆ ಮಾತ್ರ ಹ್ರಸ್ವ ಬರುತ್ತದೆ. ಇಕ್ಷುಚ್ಛಾಯಂ ಎಂಬಲ್ಲಿ ನೆರಳು ಕೊಡುವ ಕಬ್ಬುಗಳು ಬಹಳ ಎಂದು ವಿವಕ್ಷೆ ಇದ್ದದ್ದರಿಂದ ಹ್ರಸ್ವ ಬಂದಿದೆ. ಪ್ರಕೃತದಲ್ಲಿ ಬಹಳ ಹೆಡೆಗಳು ಎಂಬ ವಿವಕ್ಷೆ ಇಲ್ಲವಾದ್ದರಿಂದ ಹ್ರಸ್ವ ಬಂದಿಲ್ಲ.

'ವಿಭಾಷಾ ಸೇನಾಸುರಾಚ್ಛಾಯಾ' ಎಂಬ ಸೂತ್ರದಲ್ಲಿ ವಿಕಲ್ಪವಾಗಿ ಹ್ರಸ್ವವನ್ನು ಹೇಳಿದ್ದರಿಂದ ಇಲ್ಲಿ ಹ್ರಸ್ವ ಬಂದಿಲ್ಲ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ.

## ನ್ಯಾಯಮಾಲಾ ಮೂರನೇ ಅಧ್ಯಾಯ ಮೊದಲನೇ ಪಾದ

ಸ್ವಾಭಾವಿಕಾನ್ಯಥಾ ನಾಮ ಸಹಾಭಾವಾಸ್ಯಥೋಕ್ತಯ: ।
ಅವಿಶೇಷ ವಿಶೇಷೌ ಚ ಸಹಭಾವೋ ವಿಮಿಶ್ರತಾ ।
ವಿರುದ್ಧೋಕ್ತಿ: ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾಗತಿ:।
ಯುಕ್ತಯ: ಪೂರ್ವಪಕ್ಷಸ್ಯ ಗುಣಾಧಿಕ್ಯಾರ್ಥತೋಭವೌ ।
ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ।
ಯೋಗ್ಯತಾ ಬಲವತ್ವಂ ಚ ವಿಭಾಗ: ಕಾರಣಾಭವ: ।
ಕ್ಲೃಪ್ತಿರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಕಾ: ।

೧) ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತ: ಪ್ರಶ್ನ ನಿರೂಪಣಾಭ್ಯಾಂ ಓಂ

ಈ ಅಧಿಕರಣದಲ್ಲಿ 'ಸ್ವಾಭಾವಿಕ' ಎಂಬುದು ಪೂರ್ವಪಕ್ಷ ಯುಕ್ತಿ. ''ಭೂತಬಂಧಸ್ತು ಸಂಸಾರ: ಮುಕ್ತಿಸ್ತೇಭ್ಯೋ ವಿಮೋಚನಂ '' ಎಂಬ ವಚನದ ಪ್ರಕಾರ ಸ್ವಾಭಾವಿಕ ಮರಣವೇ ಮುಕ್ತಿಯಾದುದರಿಂದ ಅದಕ್ಕಾಗಿ ಸಾಧನ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಗುಣಾಧಿಕ್ಯವು ಸಿದ್ಧಾಂತ ಯುಕ್ತಿ - 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬ ಶ್ರುತಿಯ ಪ್ರಕಾರ ಜ್ಞಾನವೆಂಬ ಗುಣವೇ ಮೋಕ್ಷಸಾಧನಗಳಲ್ಲಿ ಅಧಿಕ(ಶ್ರೇಷ್ಠ) ಎಂದು ತಿಳಿದು ಬರುವುದರಿಂದ ಜ್ಞಾನವಿಲ್ಲದೇ ಮೋಕ್ಷ ವಿಲ್ಲ.ಸ್ವಾಭಾವಿಕ ಮರಣದಲ್ಲಿ ಭೂತವಿಯೋಗವೇನೋ ಆಗುತ್ತದೆ. ಆದರೆ ಸಮಗ್ರವಾಗಿ ಭೂತ ವಿಯೋಗವಾಗುವುದಿಲ್ಲ. ಅದಕ್ಕಾಗಿ ಜ್ಞಾನವನ್ನು ಸಂಪಾದಿಸಲೇಬೇಕು ಎಂದು ಸಿದ್ಧಾಂತ.

೨) ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ

ಈ ಅಧಿಕರಣದಲ್ಲಿ 'ಅನ್ಯಥಾ ನಾಮ'ವು ಪೂರ್ವಪಕ್ಷಯುಕ್ತಿ - 'ಇತಿ ತು ಪಂಚಮ್ಯಾಮಹುತೌ ಆಪ: ಪುರುಷವಚಸೋ ಭವಂತಿ' ಎಂಬ ಶ್ರುತಿಯಲ್ಲಿ ಜೀವನಿಗೆ ಸ್ತ್ರೀಗರ್ಭ ಪ್ರವೇಶವನ್ನು ಹೇಳುವಾಗ 'ಆಪ:' ಎಂದು ಪಂಚ ಮಹಾಭೂತಗಳಲ್ಲೊಂದಾದ ಜಲಕ್ಕೆ ಮಾತ್ರ ಸಹ ಗಮನವನ್ನು ಹೇಳಿದ್ದಾರೆ. ಇಲ್ಲಿ ಪಂಚಭೂತಗಳ ನಾಮವನ್ನು ಹೇಳದೆ ಕೇವಲ 'ಅನ್ಯಥಾ ನಾಮ' ಅಂದರೆ 'ಆಪ:' ಎಂದು ಜಲದ ನಾಮಮಾತ್ರ ಹೇಳಿದ್ದರಿಂದ

ಮರಣ ಹೊಂದಿದ ಜೀವನಿಗೆ ಸರ್ವಭೂತಗಳ ಸಂಯೋಗ ಇರುವುದಿಲ್ಲ ಎಂದು ಪೂರ್ವಪಕ್ಷ.

'ಅರ್ಥತೋ ಭವ' ಎಂಬುದು ಸಿದ್ಧಾಂತಪ್ರಾಪಕಯುಕ್ತಿ.

ಶ್ರುತಿಯಲ್ಲಿ ಜಲಕ್ಕೆ ಮಾತ್ರ ಸಹಭಾವವನ್ನು ಹೇಳಿದ್ದರೂ ಜಲದಲ್ಲಿ ಇತರ ಭೂತಗಳೂ ಸೇರಿರುವುದರಿಂದ ಅಂತಹ ಜಲವಾಚಕ ಅಪ್ ಪದ ಪ್ರಯೋಗ ಮಾಡಿದ್ದರಿಂದ ಆ ಪದಕ್ಕೆ ಲಕ್ಷಣಾವೃತ್ತಿಯಿಂದ ಸಕಲ ಭೂತಗಳೆಂದು ಅರ್ಥ ಮಾಡಬೇಕು. ಆದ್ದರಿಂದ ಜೀವನು ಸಕಲ ಭೂತಗಳೊಂದಿಗೆ ಸೇರಿಯೇ ಗರ್ಭಪ್ರವೇಶ ಮಾಡುತ್ತಾನೆಂದು ಸಿದ್ಧಾಂತ

೩) ಓಂ ಪ್ರಾಣಗತೇಶ್ಚ ಓಂ

ಈ ಅಧಿಕರಣದಲ್ಲಿ 'ಸಹಾಭಾವವು' ಪೂರ್ವಪಕ್ಷಯುಕ್ತಿ.

ಪೂರ್ವಾಧಿಕರಣದಲ್ಲಿ ಹೇಳಿದಂತೆ ಜೀವನಿಗೆ ಭೂತ ಸಂಬಂಧ ಅರ್ಥಾತ್ ಸಿದ್ಧವಾದರೂ ವಿಶೇಷ ಪ್ರಮಾಣವು ಇಲ್ಲದಿರುವುದರಿಂದ ಅದು ಅನಾದರಣೀಯ. ಆದ್ದರಿಂದ 'ಭೂತಾನಿ ಗಚ್ಛಂತಿ' ಎಂದು ಸಹ ಭಾವವನ್ನು ಹೇಳಲ್ಲವಾದ್ದರಿಂದ ಮರಣದ ನಂತರ ಜೀವನೊಂದಿಗೆ ಸಕಲ ಭೂತಗಳ ಗಮನವಿಲ್ಲ ಎಂದು ಪೂರ್ವಪಕ್ಷ.

ಉಪಪತ್ತಿಯು ಸಿದ್ಧಾಂತಯುಕ್ತಿ -

ಮರಣವಾದ ಮೇಲೂ ಜೀವನೊಂದಿಗೆ ಭೂತಗಳು ಹೋಗುತ್ತವೆ ಎಂಬುದಕ್ಕೆ ಅನುಮಾನರೂಪವಿಶೇಷ ಪ್ರಮಾಣ ಇದೆ. ಇಂದ್ರಿಯಗಳಿಗೂ ಭೂತಗಳಿಗೂ 'ಅವಿನಾಭಾವ' ಅಂದರೆ 'ಜೊತೆಗೇ ಇರುವಿಕೆ' ಎಂಬ ಸಂಬಂಧವಿರುವುದರಿಂದ, ಜೀವನೊಂದಿಗೆ ಇಂದ್ರಿಯಗಳು ಹೋಗುವುದರಿಂದ ಭೂತಗಳೂ ಹೋಗುತ್ತವೆ ಎಂಬ ಉಪಪತ್ತಿಯಿಂದ ಭೂತಗಳಿಗೂ ಗಮನವನ್ನು ಸಾಧಿಸಬಹುದು ಎಂದು ಸಿದ್ಧಾಂತ.

೪) ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ

ಈ ಅಧಿಕರಣದಲ್ಲಿ ಅನ್ಯಥೋಕ್ತಿಯು ಪೂರ್ವಪಕ್ಷಯುಕ್ತಿ. 'ಅಗ್ನಿಂ ವಾಗಪ್ಯೇತಿ' ಇತ್ಯಾದಿ ಶ್ರುತಿಯಲ್ಲಿ ವಾಗಿಂದ್ರಿಯವು ಅಗ್ನಿಯಲ್ಲಿ ಹೋಗಿ

## ನ್ಯಾಯಮಾಲಾ ಮೂರನೇ ಅಧ್ಯಾಯ ಮೊದಲನೇ ಪಾದ

ಸ್ವಾಭಾವಿಕಾನ್ಯಥಾ ನಾಮ ಸಹಾಭಾವಾನ್ಯಥೋಕ್ತಯ: ।
ಅವಿಶೇಷ ವಿಶೇಷೌ ಚ ಸಹಭಾವೋ ವಿಮಿಶ್ರತಾ ।
ವಿರುದ್ಧೋಕ್ತಿ: ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾಗತಿ:।
ಯುಕ್ತಯ: ಪೂರ್ವಪಕ್ಷಸ್ಯ ಗುಣಾಧಿಕ್ಯಾರ್ಥತೋಭವೌ ।
ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ।
ಯೋಗ್ಯತಾ ಬಲವತ್ವಂ ಚ ವಿಭಾಗ: ಕಾರಣಾಭವ: ।
ಕ್ಲೃಪ್ತಿರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಕಾ: ।

೧) ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತ: ಪ್ರಶ್ನ ನಿರೂಪಣಾಭ್ಯಾಂ ಓಂ

ಈ ಅಧಿಕರಣದಲ್ಲಿ 'ಸ್ವಾಭಾವಿಕ' ಎಂಬುದು ಪೂರ್ವಪಕ್ಷ ಯುಕ್ತಿ. ''ಭೂತಬಂಧಸ್ತು ಸಂಸಾರ: ಮುಕ್ತಿಸ್ತೇಭ್ಯೋ ವಿಮೋಚನಂ '' ಎಂಬ ವಚನದ ಪ್ರಕಾರ ಸ್ವಾಭಾವಿಕ ಮರಣವೇ ಮುಕ್ತಿಯಾದುದರಿಂದ ಅದಕ್ಕಾಗಿ ಸಾಧನ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಗುಣಾಧಿಕ್ಯವು ಸಿದ್ಧಾಂತ ಯುಕ್ತಿ - 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬ ಶ್ರುತಿಯ ಪ್ರಕಾರ ಜ್ಞಾನವೆಂಬ ಗುಣವೇ ಮೋಕ್ಷಸಾಧನಗಳಲ್ಲಿ ಅಧಿಕ(ಶ್ರೇಷ್ಠ) ಎಂದು ತಿಳಿದು ಬರುವುದರಿಂದ ಜ್ಞಾನವಿಲ್ಲದೇ ಮೋಕ್ಷ ವಿಲ್ಲ.ಸ್ವಾಭಾವಿಕ ಮರಣದಲ್ಲಿ ಭೂತವಿಯೋಗವೇನೋ ಆಗುತ್ತದೆ. ಆದರೆ ಸಮಗ್ರವಾಗಿ ಭೂತ ವಿಯೋಗವಾಗುವುದಿಲ್ಲ. ಅದಕ್ಕಾಗಿ ಜ್ಞಾನವನ್ನು ಸಂಪಾದಿಸಲೇಬೇಕು ಎಂದು ಸಿದ್ಧಾಂತ.

೨) ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ

ಈ ಅಧಿಕರಣದಲ್ಲಿ 'ಅನ್ಯಥಾ ನಾಮ'ವು ಪೂರ್ವಪಕ್ಷಯುಕ್ತಿ - 'ಇತಿ ತು ಪಂಚಮ್ಯಾಮಹುತೌ ಆಪ: ಪುರುಷವಚಸೋ ಭವಂತಿ' ಎಂಬ ಶ್ರುತಿಯಲ್ಲಿ ಜೀವನಿಗೆ ಸ್ತ್ರೀಗರ್ಭ ಪ್ರವೇಶವನ್ನು ಹೇಳುವಾಗ 'ಆಪ:' ಎಂದು ಪಂಚ ಮಹಾಭೂತಗಳಲ್ಲೊಂದಾದ ಜಲಕ್ಕೆ ಮಾತ್ರ ಸಹ ಗಮನವನ್ನು ಹೇಳಿದ್ದಾರೆ. ಇಲ್ಲಿ ಪಂಚಭೂತಗಳ ನಾಮವನ್ನು ಹೇಳದೆ ಕೇವಲ 'ಅನ್ಯಥಾ ನಾಮ' ಅಂದರೆ 'ಆಪ:' ಎಂದು ಜಲದ ನಾಮಮಾತ್ರ ಹೇಳಿದ್ದರಿಂದ

ಮರಣ ಹೊಂದಿದ ಜೀವನಿಗೆ ಸರ್ವಭೂತಗಳ ಸಂಯೋಗ ಇರುವುದಿಲ್ಲ ಎಂದು ಪೂರ್ವಪಕ್ಷ.

'ಅರ್ಥತೋ ಭವ' ಎಂಬುದು ಸಿದ್ಧಾಂತಪ್ರಾಪಕಯುಕ್ತಿ.

ಶ್ರುತಿಯಲ್ಲಿ ಜಲಕ್ಕೆ ಮಾತ್ರ ಸಹಭಾವವನ್ನು ಹೇಳಿದ್ದರೂ ಜಲದಲ್ಲಿ ಇತರ ಭೂತಗಳೂ ಸೇರಿರುವುದರಿಂದ ಅಂತಹ ಜಲವಾಚಕ ಅಪ್ ಪದ ಪ್ರಯೋಗ ಮಾಡಿದ್ದರಿಂದ ಆ ಪದಕ್ಕೆ ಲಕ್ಷಣಾವೃತ್ತಿಯಿಂದ ಸಕಲ ಭೂತಗಳೆಂದು ಅರ್ಥ ಮಾಡಬೇಕು. ಆದ್ದರಿಂದ ಜೀವನು ಸಕಲ ಭೂತಗಳೊಂದಿಗೆ ಸೇರಿಯೇ ಗರ್ಭಪ್ರವೇಶ ಮಾಡುತ್ತಾನೆಂದು ಸಿದ್ಧಾಂತ

೩) ಓಂ ಪ್ರಾಣಗತೇಶ್ಚ ಓಂ

ಈ ಅಧಿಕರಣದಲ್ಲಿ 'ಸಹಾಭಾವವು' ಪೂರ್ವಪಕ್ಷಯುಕ್ತಿ.

ಪೂರ್ವಾಧಿಕರಣದಲ್ಲಿ ಹೇಳಿದಂತೆ ಜೀವನಿಗೆ ಭೂತ ಸಂಬಂಧ ಅರ್ಥಾತ್ ಸಿದ್ಧವಾದರೂ ವಿಶೇಷ ಪ್ರಮಾಣವು ಇಲ್ಲದಿರುವುದರಿಂದ ಅದು ಅನಾದರಣೀಯ. ಆದ್ದರಿಂದ 'ಭೂತಾನಿ ಗಚ್ಛಂತಿ' ಎಂದು ಸಹ ಭಾವವನ್ನು ಹೇಳಲ್ಲವಾದ್ದರಿಂದ ಮರಣದ ನಂತರ ಜೀವನೊಂದಿಗೆ ಸಕಲ ಭೂತಗಳ ಗಮನವಿಲ್ಲ ಎಂದು ಪೂರ್ವಪಕ್ಷ.

ಉಪಪತ್ತಿಯು ಸಿದ್ಧಾಂತಯುಕ್ತಿ -

ಮರಣವಾದ ಮೇಲೂ ಜೀವನೊಂದಿಗೆ ಭೂತಗಳು ಹೋಗುತ್ತವೆ ಎಂಬುದಕ್ಕೆ ಅನುಮಾನರೂಪವಿಶೇಷ ಪ್ರಮಾಣ ಇದೆ. ಇಂದ್ರಿಯಗಳಿಗೂ ಭೂತಗಳಿಗೂ 'ಅವಿನಾಭಾವ' ಅಂದರೆ 'ಜೊತೆಗೇ ಇರುವಿಕೆ' ಎಂಬ ಸಂಬಂಧವಿರುವುದರಿಂದ, ಜೀವನೊಂದಿಗೆ ಇಂದ್ರಿಯಗಳು ಹೋಗುವುದರಿಂದ ಭೂತಗಳೂ ಹೋಗುತ್ತವೆ ಎಂಬ ಉಪಪತ್ತಿಯಿಂದ ಭೂತಗಳಿಗೂ ಗಮನವನ್ನು ಸಾಧಿಸಬಹುದು ಎಂದು ಸಿದ್ಧಾಂತ.

೪) ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ

ಈ ಅಧಿಕರಣದಲ್ಲಿ ಅನ್ಯಥೋಕ್ತಿಯು ಪೂರ್ವಪಕ್ಷಯುಕ್ತಿ. 'ಅಗ್ನಿಂ ವಾಗಪ್ಯೇತಿ' ಇತ್ಯಾದಿ ಶ್ರುತಿಯಲ್ಲಿ ವಾಗಿಂದ್ರಿಯವು ಅಗ್ನಿಯಲ್ಲಿ ಹೋಗಿ

ಸೇರುತ್ತದೆ ಎಂಬುದಾಗಿ (ಅನ್ಯಥೋಕ್ತಿ) ಜೀವನೊಂದಿಗೆ ಗಮನಕ್ಕಿಂತ ವಿಪರೀತವಾಗಿ ಗಮನವನ್ನು ಹೇಳಿದ್ದರಿಂದ ಇಂದ್ರಿಯಗಳಿಗೆ ಜೀವನೊಂದಿಗೆ ಗಮನವಿಲ್ಲ ಎಂದು ಪೂರ್ವಪಕ್ಷ.

ದ್ವಿರೂಪತ್ವವು ಸಿದ್ಧಾಂತದ ಯುಕ್ತಿ - ಇಂದ್ರಿಯಗಳಿಗೆ ಒಂದು ರೂಪದಿಂದ ಅಗ್ನ್ಯಾದಿಗಳಲ್ಲಿ ಗಮನ ಮತ್ತೊಂದು ರೂಪದಿಂದ ಜೀವನೊಂದಿಗೆ ಗಮನ ಎಂದು ದ್ವಿರೂಪತ್ವವನ್ನು ಅಂಗೀಕರಿಸಿ ಜೀವನೊಂದಿಗೆ ಗಮನವನ್ನು ಸಮರ್ಥಿಸಬಹುದು. ಎಂದು ಸಿದ್ಧಾಂತ.

೫) ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ

ಈ ಅಧಿಕರಣದಲ್ಲಿ ಅವಿಶೇಷವು ಪೂರ್ವಪಕ್ಷಯುಕ್ತಿ - 'ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' (ದೇವತೆಗಳು ಜೀವನನ್ನು ನಾರಾಯಣ ರೂಪ ಅಗ್ನಿಯಲ್ಲಿ ಆಹುತಿರೂಪವಾಗಿ ಒಪ್ಪಿಸುತ್ತಾರೆ) ಎಂಬ ಉಪಕ್ರಮ ವಾಕ್ಯದಲ್ಲಿ (ಆರಂಭದಲ್ಲಿ) 'ಭೂತಾನಿ ಜುಹ್ವತಿ' ಎಂಬ ವಿಶೇಷ ವಚನಾಭಾವ ರೂಪವಾದ 'ಅವಿಶೇಷ'ದಿಂದ ಜೀವನಿಗೆ ಭೂತಸಂಬಂಧವಿಲ್ಲವೆಂದು ತಿಳಿಯುತ್ತದೆ ಎಂದು ಪೂರ್ವಪಕ್ಷ.

ಅಧಿಕ್ಯವು ಸಿದ್ಧಾಂತ ಯುಕ್ತಿ -

ಉಪಕ್ರಮಕ್ಕಿಂತ ವ್ಯಾಖ್ಯಾನರೂಪವಾದ ಉಪಸಂಹಾರಕ್ಕೆ ಆಧಿಕ್ಯವಿರುವುದರಿಂದ 'ಆಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರ (ಅಂತ್ಯದಲ್ಲಿರುವ) ವಾಕ್ಯಕ್ಕೆ ಅನುಸಾರವಾಗಿ ಉಪಕ್ರಮ ದಲ್ಲಿರುವ ಶ್ರದ್ಧಾ ಪದದಿಂದ ಎಲ್ಲ ಭೂತಗಳನ್ನೂ ಗ್ರಹಿಸಬೇಕು. ಆದ್ದರಿಂದ ಜೀವನಿಗೆ ಭೂತಸಂಬಂಧ ಸಿದ್ಧವಾಗುವುದು. ಎಂದು ಸಿದ್ಧಾಂತ.

೬) ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ

ಈ ಅಧಿಕರಣದಲ್ಲಿ ಅವಿಶೇಷವು ಪೂರ್ವಪಕ್ಷಯುಕ್ತಿ - ಛಾಂದೋಗ್ಯದಲ್ಲಿರುವ ಈ ಜೀವ ಪ್ರಕರಣದಲ್ಲಿ ಒಂದು ಕಡೆಯಲ್ಲಿಯೂ 'ಭೂತಾನಿ ಗಚ್ಛಂತಿ 'ಎಂದು ವಿಶೇಷ ವಚನ ಶ್ರವಣ ಇಲ್ಲದಿರುವುದರಿಂದ ಜೀವನೊಂದಿಗೆ ಭೂತಗಳು ಹೋಗುವುದಿಲ್ಲ ಎಂದು ಪೂರ್ವಪಕ್ಷ.

'ಅನುರೂಪತಾ' ಎಂಬುದು ಸಿದ್ಧಾಂತ ಯುಕ್ತಿ -

'ಅಥೈನಂ ಯಜಮಾನಂ ಕಿಂ ನ ಜಹಾತಿ? ಭೂತಾನ್ಯೇವ। ಭೂತೈಃ ಸಹ ಗಚ್ಛತಿ' (ಜೀವನನ್ನು ಯಾವುದು ಬಿಡುವುದಿಲ್ಲ? ಪೃಥಿವ್ಯಾದಿ ಭೂತಗಳು ಬಿಡುವುದಿಲ್ಲ. ಜೀವನು ಭೂತಗಳೊಂದಿಗೆ ಹೋಗುತ್ತಾನೆ) ಎಂಬ ಕೌಂಠರವ್ಯ ಶ್ರುತಿಯಲ್ಲಿ ಸ್ಪಷ್ಟವಾಗಿ ಭೂತಗಳಿಗೆ ಸಹಗಮನ ವಚನವಿರುವುದರಿಂದ ಅದು ಇಲ್ಲಿಯ ಪ್ರಸಂಗಕ್ಕೆ ಅನುರೂಪವಾದ್ದರಿಂದ ಸಮಾಖ್ಯಾ ರೂಪವಾಗಿ ಈ ಪ್ರಕರಣದ ಅರ್ಥಕ್ಕೆ ನಿರ್ಣಾಯಕವಾಗುವುದು ಆದುದರಿಂದ ಭೂತಗಳಿಗೂ ಜೀವನೊಂದಿಗೆ ಗಮನವಿದೆಯೆಂದು ಸಿದ್ಧಾಂತ.

೭) ಓಂ ಭಾಕ್ತಂ ವಾ ಅನಾತ್ಮವಿತ್ತ್ವಾತ್ ತಥಾಹಿ ದರ್ಶಯತಿ ಓಂ

ಈ ಅಧಿಕರಣದಲ್ಲಿ ವಿಶೇಷವು ಪೂರ್ವಪಕ್ಷ ಯುಕ್ತಿ -

'ಅಪಾಮ ಸೋಮಮಮೃತಾ ಅಭೂಮ' ಎಂಬುದಾಗಿ ಸೋಮರಸ ಪಾನ ರೂಪ ಕರ್ಮದಿಂದ ಮುಕ್ತಿಯನ್ನು ಹೇಳುವ ವಿಶೇಷ ವಚನ ವಿರುವುದರಿಂದ ಕರ್ಮದಿಂದಲೇ ಮುಕ್ತಿ ಎಂದು ಪೂರ್ವಪಕ್ಷ.

ಯೋಗ್ಯತಾ ಎಂಬುದು ಸಿದ್ಧಾಂತಯುಕ್ತಿ - 'ನಾನ್ಯ: ಪಂಥಾಃ' ಎಂದು ಜ್ಞಾನಾತಿರಿಕ್ತ ಸಾಧನವನ್ನು ನಿರಾಕರಿಸಿದ್ದರಿಂದ 'ಯಾವದಿಂದ್ರ: ಯಾವನ್ಮನು: ಎಂಬುದಾಗಿ ಕಾಲದ ಮಿತಿಯನ್ನು ಹೇಳುವ ಶ್ರುತಿಯೂ ಇರುವುದರಿಂದ ಕರ್ಮಕ್ಕೆಯೋಗ್ಯವಾದ ಅಮೃತತ್ವ ಅಂದರೆ ಬಹುಕಾಲ ಸ್ಥಾಯಿತ್ವ ರೂಪವಾದ ಅಮೃತತ್ವವನ್ನೇ ಗ್ರಹಿಸಬೇಕು ಹೊರತು ಮುಖ್ಯ ಮುಕ್ತಿಯನ್ನಲ್ಲ. ಎಂದು ಸಿದ್ಧಾಂತ.

೮) ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ

ಈ ಅಧಿಕರಣದಲ್ಲಿ ಸಹಭಾವವು ಪೂರ್ವಪಕ್ಷಯುಕ್ತಿ - ಜೀವನು ಸ್ವರ್ಗಕ್ಕೆ ಹೋಗುವಾಗ ಕರ್ಮವು ಜೊತೆಗೆ ಹೋಗುವುದರಿಂದ ಅಲ್ಲಿ ಅದರ ಫಲವನ್ನು ಭೋಗಿಸುವಾಗ ಕರ್ಮಕ್ಷಯವಾಗುತ್ತದೆ. ಅನಂತರ ಸಂಸಾರ ಬಂಧಕ್ಕೆ ಬೀಜವಾದ ಕರ್ಮವಿಲ್ಲದಿರುವುದರಿಂದ ಸ್ವತ: ಮುಕ್ತಿ ದೊರೆಯುತ್ತದೆ ಎಂದು ಪೂರ್ವಪಕ್ಷ.

ಇಲ್ಲಿಯೂ ಯೋಗ್ಯತೆಯೇ ಸಿದ್ಧಾಂತ ಯುಕ್ತಿ -

'ಭುಕ್ತಶೇಷಾನುಶಯವಾನ್ ಇಮಂ ಪ್ರಾಪ್ಯ ಭುವಂ ' ಎಂಬ ಸ್ಮೃತಿಯಲ್ಲಿ ಜೀವನು ಸ್ವರ್ಗದಲ್ಲಿ ಕರ್ಮಫಲವನ್ನು ಭೋಗಿಸಿ ಅವಶಿಷ್ಟಕರ್ಮದೊಂದಿಗೆ ಭೂಮಿಗೆ ಬರುತ್ತಾನೆ ಎಂದು ಹೇಳಿರುವುದರಿಂದ ಯಥಾಯೋಗ್ಯವಾಗಿ ಕರ್ಮಕ್ಷಯವಾಗುತ್ತದೆ. ಅಂದರೆ ಸಮಗ್ರವಲ್ಲದೆ ಕೆಲವು ಕರ್ಮಗಳು ಮಾತ್ರ ಕ್ಷಯಿಸುತ್ತವೆಂದು ಸಿದ್ಧಾಂತ.

೯) ಓಂ ಯಥೇತಮನೇವಂ ಚ ಓಂ

ಈ ಅಧಿಕರಣದಲ್ಲಿ ಸಹಭಾವವು ಪೂರ್ವಪಕ್ಷಯುಕ್ತಿ- ಭೂಮಿಯಿಂದ ಸ್ವರ್ಗಕ್ಕೆ ಹೋದ ಜೀವನು ಅಲ್ಲಿಂದ ಮರಳುವಾಗ ಆ ಮಾರ್ಗದ ಸಂಸ್ಕಾರವು ಅವನಲ್ಲಿದ್ದೇ ಇರುವುದರಿಂದ ಆಗಮನ ಕಾಲದಲ್ಲಿ ಮಾರ್ಗಸಂಬಂಧಿ ಕ್ಲೇಶದ ಪ್ರಸಕ್ತಿ ಇಲ್ಲದಿರುವುದರಿಂದ ಸ್ವರ್ಗಸಾಧನವಾದ ಕರ್ಮದದಲ್ಲಿ ವೈರಾಗ್ಯ ವೇಕೆ? ಎಂದು ಪೂರ್ವಪಕ್ಷ.

ಇಲ್ಲಿ ಯೋಗ್ಯತಾ ಎಂಬುದು ಸಿದ್ಧಾಂತ ಯುಕ್ತಿ -

'ಧೂಮಾದಭ್ರಂ ' ಎಂಬ ಶ್ರುತಿಯು ಆಕಾಶದವರೆಗೆ ಮಾತ್ರ ಆಗಮನವನ್ನು ಗತಿಕ್ರಮದಿಂದ ಹೇಳಿದೆ. ಅಲ್ಲಿಂದ ಕೆಳಗೆ ಬರುವಾಗ ಮಾರ್ಗ ಬದಲಾವಣೆ ಆಗುತ್ತದೆ ಆದ್ದರಿಂದ ಗತಿಮಾರ್ಗದ ಸಂಸ್ಕಾರವಿದ್ದರೂ ಯಥಾ ಯೋಗ್ಯ ಶ್ರುತಿಗನುಗುಣವಾಗಿ ಆಗಮನವನ್ನು ಹೇಳಬೇಕು ಅಂದರೆ ಸ್ವಲ್ಪ ಮಾರ್ಗವು ಮಾತ್ರ ಗತಿಕ್ರಮದಿಂದ ಎಂದು ಗ್ರಹಿಸಬೇಕೆಂದು ಸಿದ್ಧಾಂತ.

೧೦) ಓಂ ಚರಾಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿ: ಓಂ

ಈ ಅಧಿಕರಣದಲ್ಲಿ ಸಹಭಾವವು ಪೂರ್ವಪಕ್ಷ ಯುಕ್ತಿ -

'ರಮಣೀಯಚರಣಾ: ರಮಣೀಯಾಂ ಯೋನಿಮಾಪದ್ಯಂತೇ' ಎಂಬ ಶ್ರುತಿಯ ಪ್ರಕಾರ ಪುನರಾವೃತ್ತಿಯು ಕರ್ಮಾಂಗಭೂತವಾದ ಆಚಾರದ ಫಲವೇ ಆಗಿದೆ ಹೊರತು ಕರ್ಮದ ಫಲವಲ್ಲ. 'ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ' ಎಂಬ ಶ್ರುತಿಯಲ್ಲಿಯೂ ಸಮೀಪವಾಚಕವಾದ ಉಪ ಶಬ್ದದಿಂದ ಕರ್ಮಸಮೀಪ ವರ್ತಿಯಾದ ಆಚಾರವು ಹೇಳಲ್ಪಟ್ಟಿದೆ. ಮತ್ತು ಕರ್ಮವು ಹೇಳಲ್ಪಟ್ಟಿದೆ. ಹೀಗೆ ಅಲ್ಲಿ ಕರ್ಮಕ್ಕೂ ಆಚಾರಕ್ಕೂ

ಸಹಭಾವವಿರುವುದರಿಂದ ಆಚಾರದ ಫಲವೇ ಆದ ಪುನರಾವೃತ್ತಿಯು ಕರ್ಮಫಲವೆಂದು ಭ್ರಮಿಸಲ್ಪಟ್ಟಿದೆ ಹೊರತು ವಾಸ್ತವವಲ್ಲ. ಆದ್ದರಿಂದ ಕಾಮ್ಯ ಕರ್ಮದಲ್ಲೇಕೆ ವೈರಾಗ್ಯ? ಎಂದು ಪೂರ್ವಪಕ್ಷ.

ಯೋಗ್ಯತಾ ಎಂಬುದು ಸಿದ್ಧಾಂತ ಯುಕ್ತಿ -

'ನಾನ್ಯಃ ಪಂಥಾಃ' ಎಂಬುದಾಗಿ ಮೋಕ್ಷಕ್ಕೆ ಜ್ಞಾನಾನ್ಯಮಾರ್ಗವನ್ನು ನಿಷೇಧಿಸಿರುವುದರಿಂದ ರಮಣೀಯಚರಣಾ: ಎಂದು ಪುನರಾವೃತ್ತಿಯನ್ನು ಬೋಧಿಸುವ ವಾಕ್ಯದಲ್ಲಿ ಚರಣಪದದಿಂದ ಆಚಾರ ಮತ್ತು ಕರ್ಮ ಎರಡನ್ನು ಇಟ್ಟುಕೊಳ್ಳುವುದೇ ಯೋಗ್ಯವಾಗಿದೆ. ಆದ್ದರಿಂದ ಆಚಾರದಂತೆ ಕರ್ಮವು ಪುನರಾವೃತ್ತಿ ಫಲಕವಾದ್ದರಿಂದ ಕರ್ಮದಲ್ಲಿ ವೈರಾಗ್ಯ ಪಡೆಯಬೇಕೆಂದು ಸಿದ್ಧಾಂತ.

೧೧) ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ

ವಿಮಿಶ್ರತಾ ಎಂಬುದು ಈ ಅಧಿಕರಣದ ಪೂರ್ವಪಕ್ಷ ಯುಕ್ತಿ -

ಪುಣ್ಯಕರ್ಮವನ್ನು ಮಾಡುವವರ ಬುದ್ದಿಯು ಪ್ರತ್ಯವಾಯ ಭಯ ಮತ್ತು ಫಲಕಾಮನಾದಿಂದ ಮಿಶ್ರಿತವಾಗಿರುತ್ತದೆ. 'ಬಿಭ್ಯತ್ ಪತತಿ ಪಾದ ಪಾತ್' ಎಂಬ ನ್ಯಾಯದಂತೆ ಆ ಭಯಕಾಮನಾದಿಗಳು ಸಂಸಾರಕ್ಕೆ ಕಾರಣ ವಾಗುತ್ತವೆ. ಆದರೆ ಪಾಪಕರ್ಮಮಾಡುವವರ ಬುದ್ಧಿಯು ಪ್ರತ್ಯವಾಯ ಭಯ ಮತ್ತು ಫಲಕಾಮನಾದಿಂದ ಮಿಶ್ರಿತವಾಗಿರುವುದಿಲ್ಲ (ಪಾಪ ಕರ್ಮ ಮಾಡುವವರಿಗೆ ಪಾಪದ ಫಲ ಅನುಭೋಗಿಸುವ ಆಶೆ ಏನೂ ಇರುವುದಿಲ್ಲ ಮತ್ತು ಭಯ ಇರುವುದಿಲ್ಲ) ಆದ್ದರಿಂದಲೇ ಅವರಿಗೆ ಪುನ:ಸಂಸಾರ ಇಲ್ಲ ಎಂದು ಪೂರ್ವಪಕ್ಷ.

ಬಲವತ್ತ್ವವು ಇಲ್ಲಿಯ ಸಿದ್ಧಾಂತಯುಕ್ತಿ -

ಪಾಪ ಮಾಡಿದವರಿಗೆ 'ಸರ್ವೇ ವಾ ಏತೇ ಅಶುಭ ಕೃತ: ಸಂಯಮನೇ ಪ್ರಪತಂತಿ' ಎಂಬ ಶ್ರುತಿಯಲ್ಲಿ ಪಾಪಿಗಳು ನರಕದಲ್ಲಿ ಬೀಳುತ್ತಾರೆಂದು ಪ್ರಬಲವಾದ ಅನರ್ಥವನ್ನು ಹೇಳಿರುವುದರಿಂದ ಆ ಕರ್ಮದಲ್ಲಿಯೂ ವೈರಾಗ್ಯ ತಾಳಬೇಕು.

೧೨) ಓಂ ಅಪಿ ಸಪ್ತ ಓಂ

ವಿರುದ್ಧೋಕ್ತಿಯು ಇಲ್ಲಿಯ ಪೂರ್ವಪಕ್ಷ ಯುಕ್ತಿ -

ಯಾವದಿಂದ್ರಾಶ್ಚತುರ್ದಶ (ಹದಿನಾಲ್ಕು ಜನ ಇಂದ್ರರು ಇರುವಷ್ಟು ಕಾಲ ನರಕಯಾತನೆ) ಎಂಬುದಾಗಿ ನರಕಕ್ಕೆ ಅನಿತ್ಯತ್ವವನ್ನು ಹೇಳಿರುವುದರಿಂದ 'ತಾಮಿಸ್ರಶ್ಚ ಅಂಧತಾಮಿಸ್ರ: ದ್ವೌ ನಿತ್ಯೌ' ಎಂಬುದು ವಿರುದ್ಧೋಕ್ತಿಯಾಗಿದೆ. ಆದ್ದರಿಂದ ನಿತ್ಯ ನರಕವೇ ಇಲ್ಲವಾದ್ದರಿಂದ ಭಗವದ್‌ದ್ವೇಷದಲ್ಲಿ ಅತಿಶಯವಾದ ವೈರಾಗ್ಯಕ್ಕೆ ಕಾರಣವಿಲ್ಲ ಎಂದು ಪೂರ್ವಪಕ್ಷ.

ವಿಭಾಗವೇ ಸಿದ್ಧಾಂತದ ಯುಕ್ತಿಯಾಗಿದೆ.

ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಿಣೀ ತಥಾ ।
ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯ ನರಕಾಣಿ ತು ।
ತಾಮಿಸ್ರಶ್ಚಾಂಧತಾಮಿಸ್ರ: ದ್ವೌ ನಿತ್ಯೌ ಸಂಪ್ರಕೀರ್ತಿತೌ ।

ಎಂಬ ಸ್ಮೃತಿಯಲ್ಲಿ ಏಳು ನರಕವನ್ನು ಹೇಳಿ ಅದರಲ್ಲಿ ಐದು ಅನಿತ್ಯ ಎರಡು ನಿತ್ಯ ಎಂದು ವಿಭಾಗ ಮಾಡಿ ಹೇಳಿದ್ದರಿಂದ ನಿತ್ಯ ನರಕ ಒಪ್ಪುವುದಕ್ಕೆ ವಿರೋಧವಿಲ್ಲ. ಆದುದರಿಂದ ಅದಕ್ಕೆ ಸಾಧನವಾದ ಹರಿದ್ವೇಷದಲ್ಲಿ ಅತಿಶಯ ವೈರಾಗ್ಯ ಬೇಕು ಎಂದು ಸಿದ್ಧಾಂತ.

೧೩) ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧ: ಓಂ

ಈ ಅಧಿಕರಣದಲ್ಲಿ ಸಹಸ್ಥಾನವೆಂಬುದು ಪೂರ್ವಪಕ್ಷ ಯುಕ್ತಿ -

ನರಕದಲ್ಲಿ ಜೀವಪ್ರೇರಕನಾಗಿ ಭಗವಂತನು ಇರುವುದರಿಂದ ಈ ಸಹಸ್ಥಾನದಿಂದ ಅವನಿಗೂ ದು:ಖಭೋಗ ಉಂಟಾಗುವ ಪ್ರಸಂಗ ಬರುತ್ತದೆ ಆದ್ದರಿಂದ ನರಕದಲ್ಲಿ ಕೇವಲ ದು:ಖದ ಸಾಕ್ಷಾತ್ಕಾರವೇ ಹೊರತು ಅದರಿಂದಾಗುವ ನೀಚತ್ವಾದಿಗಳು ಇಲ್ಲವೆಂದೇ ಹೇಳಬೇಕು. ಈ ಕಾರಣದಿಂದ ಪಾಪಕರ್ಮದಲ್ಲಿ ವೈರಾಗ್ಯವು ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಕಾರಣಾಭಾವವು ಇಲ್ಲಿ ಸಿದ್ಧಾಂತ ಯುಕ್ತಿ -

ನರಕದಲ್ಲಿ ಜೀವನೊಂದಿಗೆ ಭಗವಂತ ಇದ್ದರೂ ಅವನು ಸರ್ವವಿಷಯದಲ್ಲಿ ಸ್ವತಂತ್ರನಾದ್ದರಿಂದ, ನೀಚತ್ವಾದಿಗಳಿಗೆ ಕಾರಣವಾದ ಪಾಪವೂ ಅವನಲ್ಲಿಲ್ಲ ವಾದ್ದರಿಂದ ಅವನಿಗೆ ಮಾತ್ರ ನೀಚತ್ವ ರೂಪವಾದ ಭೋಗವು ಇರುವುದಿಲ್ಲ. ಆದುದರಿಂದ ಭೋಗವು ನೀಚತ್ವ ಎನ್ನಲು ಬಾಧಕವಿಲ್ಲವಾದ್ದರಿಂದ ಅಂತಹ ದುಃಖಭೋಗಸಾಧನದಲ್ಲಿ ವೈರಾಗ್ಯ ತಾಳಬೇಕೆಂದು ಸಿದ್ಧಾಂತ.

೧೪) ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ

ಈ ಅಧಿಕರಣದಲ್ಲಿಯೂ ಸಹಸ್ಥಾನವು ಪೂರ್ವಪಕ್ಷ ಯುಕ್ತಿ -

'ತದ್ಯ ಇತ್ಥಂ ವಿದುಃ.... ಅರ್ಚಿಷಮಭಿಸಂಭವಂತಿ। ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಂ ಅಭಿಸಂಭವಂತಿ .... ಅಥ ಏತಯೋ: ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ ಅಸಕೃದಾವರ್ತೀನಿ ಭೂತಾನಿ ಭವಂತಿ ' ಯಾರು ವಿದ್ಯಾರೂಪ ಸಾಧನದಲ್ಲಿ ತೊಡಗುತ್ತಾರೋ ಅವರು ಅರ್ಚಿರಾದಿ ಮಾರ್ಗದಿಂದ ಮುಕ್ತಿಯನ್ನು ಪಡೆಯುತ್ತಾರೆ. ಯಾರು ಯಜ್ಞಯಾಗಾದಿ ಕಾಮ್ಯ ಕರ್ಮದಲ್ಲಿ ತೊಡಗುತ್ತಾರೋ ಅವರು ಚಂದ್ರಲೋಕಕ್ಕೆ ಹೋಗಿ ಹಿಂದಿರುಗುತ್ತಾರೆ. ಯಾರು ಈ ಎರಡೂ ಮಾರ್ಗದಲ್ಲಿ ಹೋಗುವು ದಿಲ್ಲವೋ ಅವರು ದು:ಖಿಗಳಾಗಿ ಪುನ: ಪುನ: ಹುಟ್ಟು ಸಾವು ಗಳನ್ನು ಪಡೆಯುತ್ತಾರೆ. ಎಂಬ ಶ್ರುತಿಯಲ್ಲಿ ಸಾಧನದ ಜೊತೆಯಲ್ಲೇ ಫಲವನ್ನು ನಿರ್ದೇಶಮಾಡಿದ್ದರಿಂದ ಜೀವರಿಗೆ ವಿದ್ಯಾ ಮತ್ತು ಕರ್ಮರೂಪ ಸಾಧನದಲ್ಲಿ ಭಗವದಧೀನ ಸ್ವಾತಂತ್ರ್ಯವಿರುವಂತೆ ಫಲದಲ್ಲಿಯೂ ಸ್ವಾತಂತ್ರ್ಯ ಇರುವ ಪ್ರಯಕ್ತ ಕಾಮ್ಯಕರ್ಮದಲ್ಲಿ ವೈರಾಗ್ಯ ರೂಪ ಸಾಧನದ ಅವಶ್ಯಕತೆಯೇನು? ಎಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತ ಯುಕ್ತಿ -

ವಿದ್ಯಾ ಮತ್ತು ಕರ್ಮಗಳಲ್ಲಿ 'ಆತ್ಮಾನಾಮುಪಾಸೀತ' ಎಂದು ಮತ್ತು 'ಜ್ಯೋತಿಷ್ಟೋಮೇನ ಯಜೇತ' ಎಂದು ವಿಧಿರೂಪವಾದ ಕಾರಣ

ವಿರುವುದರಿಂದ ವಿದ್ಯಾ ಕರ್ಮರೂಪ ಸಾಧನದಲ್ಲಿ ಭಗವದತ್ತವಾದ ಸ್ವಾತಂತ್ರ್ಯವಿದೆ. ಆದರೆ ಫಲದಲ್ಲಿ ವಿಧಿರೂಪವಾದ ಕಾರಣ ಇಲ್ಲದಿರುವುದರಿಂದ ಸ್ವಾತಂತ್ರ್ಯವಿಲ್ಲ. 'ಅಥ ಏತಯೋಃ ಪಥೋಃ' ಎಂಬಲ್ಲಿ ಫಲಸ್ವಾತಂತ್ರ್ಯವಿರುವಂತೆ ಕಂಡುಬರುತ್ತದೆ ನಿಜ. ಆದರೆ ಅಲ್ಲಿ 'ಏತಯೋಃ ಪಥೋಃ' ಎಂಬುದರಿಂದ ಪ್ರಕೃತವಾದ ವಿದ್ಯಾಕರ್ಮಗಳನ್ನೇ ಗ್ರಹಿಸಬೇಕು ಹೊರತು ಫಲವನ್ನಲ್ಲ. ಆದುದರಿಂದ ಫಲಸ್ವಾತಂತ್ರ್ಯ ಇಲ್ಲದ ಪ್ರಯುಕ್ತ ಕಾಮ್ಯಕರ್ಮ ದುಷ್ಕರ್ಮಗಳಲ್ಲಿ ವೈರಾಗ್ಯ ಆವಶ್ಯಕ.

೧೫) ಓಂ ನ ತೃತೀಯೇ ತಥೋಪಲಬ್ಧೇಃ ಓಂ

ಈ ಅಧಿಕರಣದಲ್ಲಿಯೂ ಸಹಸ್ಥಾನವೇ ಪೂರ್ವಪಕ್ಷ ಯುಕ್ತಿ -

'ಯತ್ರದುಃಖಂ ಸುಖಂ ತತ್ರ' ಎಂಬ ಭಾಷ್ಯೋಕ್ತ ಸ್ಮೃತಿ ಪ್ರಕಾರ ಸುಖ ದುಃಖಗಳಿಗೆ ಸಹಭಾವವಿರುವದರಿಂದ ಅಂಧಂತಮಸ್ಸಿನಲ್ಲಿಯೂ ಸುಖವಿರುವ ಪ್ರಯುಕ್ತ ಅದರಲ್ಲಿ ಅತಿಶಯೇನ ವೈರಾಗ್ಯ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಕಾರಣಾಭಾವವು ಇಲ್ಲಿ ಸಿದ್ಧಾಂತ ಯುಕ್ತಿ-

ಅಂಧಂತಮಸ್ಸಿನಲ್ಲಿ ಬಿದ್ದ ಜೀವನು ಭಗವಂತನಿಗೆ ಸರ್ವಥಾ ಅಪ್ರಿಯನಾದ್ದರಿಂದ ಅವನಿಗೆ ಭಗವದನುಗ್ರಹರೂಪವಾದ ಸುಖಸಾಧನ ವಿರು ವುದಿಲ್ಲವಾದ್ದರಿಂದ ಸುಖಕ್ಕೆ ಪ್ರಸಕ್ತಿ ಇಲ್ಲ ಆದ್ದರಿಂದ ತಮಸ್ಸಾಧವಾದ ದ್ವೇಷದಲ್ಲಿ ಅತಿಶಯೇನ ವೈರಾಗ್ಯ ಅಗತ್ಯವಾಗಿದೆ ಎಂದು ಸಿದ್ಧಾಂತ .

೧೬) ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ

ಈ ಅಧಿಕರಣದಲ್ಲಿ ಸಹಸ್ಥಾನವು ಪೂರ್ವಪಕ್ಷಯುಕ್ತಿ -

'ಧೂಮೋ ಭೂತ್ವಾ' ಇತ್ಯಾದಿ ಶ್ರುತಿಯ ಪ್ರಕಾರ ಚಂದ್ರಲೋಕದಿಂದ ಹಿಂತಿರುಗಿದ ಕಾಮ್ಯಕರ್ಮಿಯಾದ ಜೀವನಿಗೂ ಧೂಮಾದಿದೇವತೆಗಳಿಗೂ ಸಹಾವಸ್ಥಾನವಿರುವುದರಿಂದ ಆ ದೇವತೆಗಳು ಸ್ನೇಹದಿಂದ ತಮ್ಮ ಪದವನ್ನು ದಾನಮಾಡುತ್ತಾರೆ ಆದ್ದರಿಂದ ಕಾಮ್ಯಕರ್ಮಿಗೂ ದೇವತಾಪದಪ್ರಾಪ್ತಿ

ಇರುವುದ ರಿಂದ ಅದು ಸುಖಹೇತುವಾದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಇಲ್ಲಿಯೂ ಕಾರಣಾಭಾವವೇ ಸಿದ್ಧಾಂತ ಯುಕ್ತಿ -

ದೇವತಾ ಪದ ಪ್ರಾಪ್ತಿಗೆ ನಿಯತಾಧಿಕಾರಿಗಳಿಗೆ ಇರುವ ವಿದ್ಯೆ ಕಾರಣ. ಕಾಮ್ಯ ಕರ್ಮಿಗಳಿಗೆ ಅಂತಹ ಕಾರಣೀಭೂತವಾದ ವಿದ್ಯೆ ಇಲ್ಲದ್ದರಿಂದ ಅವರಿಗೆ ದೇವತಾ ಪದ ಪ್ರಾಪ್ತಿ ಇಲ್ಲ. 'ಧೂಮೋ ಭೂತ್ವಾ' ಎಂಬುದಕ್ಕೆ ಧೂಮಾದಿ ದೇವತೆಗಳು ಹೋದಾಗ ಹೋಗುವುದು ನಿಂತಾಗ ನಿಲ್ಲುವುದು - ಇಂತಹ ಸ್ವಭಾವ ಪ್ರಾಪ್ತಿಯೆಂದೇ ಅರ್ಥ ಹೊರತು ಪದಪ್ರಾಪ್ತಿ ಎಂದರ್ಥವಲ್ಲ ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಆವಶ್ಯಕ ಎಂದು ಸಿದ್ಧಾಂತ

೧೭) ಓಂ ನಾತಿಚಿರೇಣ ವಿಶೇಷಾತ್ ಓಂ

ಇಲ್ಲಿ ಸಹಸ್ಥಾನವು ಪೂರ್ವಪಕ್ಷ ಯುಕ್ತಿ-

ಕಾಮ್ಯಕರ್ಮಿಯು ಭೂಮಿಗೆ ಹಿಂತಿರುಗುವಾಗ ಮಾರ್ಗ ಮದ್ಯದಲ್ಲಿ ಬೇರೆ ಬೇರೆ ದೇವತೆಗಳೊಂದಿಗೆ ಚಿರಕಾಲ ನೆಲೆಸುವುದರಿಂದ, ಆದರಿಂದ ಸುಖವು ಸಾದ್ಯವಿರುವಾಗ ಕರ್ಮದಲ್ಲೇಕೆ ವೈರಾಗ್ಯ ತಾಳಬೇಕೆಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತ ಯುಕ್ತಿ -

'ವತ್ಸರಾತ್ ಪೂರ್ವಮೇವ ತು' (ಒಂದು ವರ್ಷದೊಳಗೆ ಭೂಮಿಗೆ ಬರುತ್ತಾನೆ) ಎಂದು ಪ್ರಮಾಣವಿರುವುದರಿಂದ ಕ್ಲೃಪ್ತವಾದ ಕಾಲಕ್ಕಿಂತ ಹೆಚ್ಚು ಕಾಲ ಮಾರ್ಗಮದ್ಯದಲ್ಲಿರಲು ಕಾರಣವಿಲ್ಲವಾದ್ದರಿಂದ ಸುಖಕ್ಕೆ ಅವಕಾಶವಿಲ್ಲ ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಅಗತ್ಯ ಎಂದು ಸಿದ್ಧಾಂತ.

೧೮) ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ

ಇಲ್ಲಿಯೂ ಸಹಸ್ಥಾನವೇ ಪೂರ್ವಪಕ್ಷ ಯುಕ್ತಿ -

ಕಾಮ್ಯಕರ್ಮಿಯು ಪುನರ್ಜನ್ಮ ಪಡೆಯುವಾಗ ಧಾನ್ಯಾದಿಗಳಲ್ಲಿ ಪ್ರವೇಶಿಸಿ ತನ್ಮೂಲಕ ಪುರುಷ ದೇಹವನ್ನು ಪ್ರವೇಶಿಸಿ ಅನಂತರ ಸ್ತ್ರೀದೇಹ ಪ್ರವೇಶಿಸಿ ಹುಟ್ಟುತ್ತಾನೆ . ಈ ಮಾರ್ಗದಲ್ಲಿ ಧಾನ್ಯಾದಿ ಜೀವರೊಂದಿಗೆ ಇರುವಾಗ ಅವರಿಗೆ ಆಗುವ ದು:ಖಾದಿಗಳ ಭೋಗ ಕರ್ಮಿಜೀವಿಗೂ ಆಗಬೇಕಾಗುತ್ತದೆ. ಆದ್ದರಿಂದ ಸುಖಕ್ಕಾಗಿ ಯಾಗಾದಿಗಳನ್ನು ವಿಧಿಸಿದ ವೇದದಲ್ಲಿ ಅನಾಶ್ವಾಸ ಉಂಟಾಗಿ ವೈರಾಗ್ಯ ವಿಧಾಯಕ ವಾಕ್ಯದಲ್ಲೂ ಅನಾಶ್ವಾಸ ಬರುವುದರಿಂದ ವೈರಾಗ್ಯ ಅನಗತ್ಯ ಎಂದು ಪೂರ್ವಪಕ್ಷ.

ಕಾರಣಾಭಾವವೇ ಸಿದ್ಧಾಂತ ಯುಕ್ತಿ -

ಕಾಮ್ಯಕರ್ಮಿಯು ಧಾನ್ಯಾದಿ ಜೀವರೊಂದಿಗೆ ಅಲ್ಲಿದ್ದರೂ ಅವನಲ್ಲಿ ದು:ಖಕ್ಕೆ ಕಾರಣವಾದ ಪಾಪ ಇಲ್ಲದಿರುವುದರಿಂದ ಛೇದನಾದಿಗಳಿಂದ ಆಗುವ ದು:ಖ ಭೋಗವು ಕಾಮ್ಯ ಕರ್ಮಿಗೆ ಆಗುವುದಿಲ್ಲ. ಆದ್ದರಿಂದ ಸ್ವರ್ಗ ಸುಖಕ್ಕಾಗಿ ಯಾಗವನ್ನು ವಿಧಿಸಿದ ವೇದದಲ್ಲಿ ಅನಾಶ್ವಾಸವಿಲ್ಲ. ಆದ್ದರಿಂದ ವೈರಾಗ್ಯವಿಧಾಯಕ ವಾಕ್ಯದಲ್ಲೂ ಅನಾಶ್ವಾಸ ಉಂಟಾಗಲಾರದು ಆದ್ದರಿಂದ ವೈರಾಗ್ಯ ಆವಶ್ಯಕವೇ ಆಗಿದೆ ಎಂದು ಸಿದ್ಧಾಂತ.

೧೯) ಓಂ ರೇತಸ್ಸಿಗ್ಯೋಗೋಥ ಓಂ

ಈ ಅಧಿಕರಣದಲ್ಲಿ ವೈಯರ್ಥ್ಯವು ಪೂರ್ವಪಕ್ಷ ಯುಕ್ತಿ-

ಕರ್ಮಿಜೀವನು ಪಿತೃಪ್ರವೇಶವಿಲ್ಲದೇ ನೇರವಾಗಿ ಮಾತೃ ಉದರವನ್ನು ಪ್ರವೇಶಿಸುವ ಸಂಭವವಿರುವಾಗ ಪಿತೃ ಪ್ರವೇಶ ವ್ಯರ್ಥ. ಆದ್ದರಿಂದ ಮಹಾಯಾಸವೇನೂ ಇಲ್ಲವಾದ್ದರಿಂದ ಕರ್ಮದಲ್ಲಿ ಅತಿ ವೈರಾಗ್ಯ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಇಲ್ಲಿ ಕ್ಲೃಪ್ತಿ ಎಂಬುದು ಸಿದ್ಧಾಂತ ಯುಕ್ತಿ-

'ಈಶಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಂ' (ಭಗವಂತನ ಸಂಕಲ್ಪದಂತೆ ಜೀವನು ಪಿತೃಗರ್ಭ ಪ್ರವೇಶ ಮಾಡಿಯೇ ಮಾತೃಗರ್ಭವನ್ನು ಪ್ರವೇಶಿಸುತ್ತಾನೆ) ಎಂಬ ಪ್ರಮಾಣದಂತೆ ಭಗವಂತನ ಸಂಕಲ್ಪಕ್ಕನು ಗುಣವಾಗಿ ಪ್ರವೇಶಿಸುವುದರಿಂದ ಮಹಾಯಾಸವಿದ್ದೇ ಇದೆ. ಆದ್ದರಿಂದ ಪುನರಾವೃತ್ತಿಗೆ ಕಾರಣವಾದ ಕರ್ಮದಲ್ಲಿ ವೈರಾಗ್ಯ ತಾಳಬೇಕೆಂದು ಸಿದ್ಧಾಂತ.

೨೦) ಓಂ ಯೋನೇ: ಶರೀರಂ ಓಂ

ಈ ಅಧಿಕರಣದಲ್ಲಿ ಅನ್ಯಥಾಗತಿಯು ಪೂರ್ವಪಕ್ಷಯುಕ್ತಿ-

ಅನ್ಯಥಾ - ಯೋನಿ ಪ್ರವೇಶವಿಲ್ಲದೆಯೇ ಪಿತೃವಿನಿಂದಲೇ ಆಗತಿ= ಮಾಂಧಾತೃವಿನಂತೆ ಜನ್ಮ ಸಂಭವಿಸಬಹುದು. ಅಥವಾ ಅನ್ಯಥಾ = ಬೇರೆ ವಿಧವಾಗಿ ಅಂದರೆ ಆಹಾರದ್ವಾರಾ, ಗತಿ = ಮಾತ್ರ ಉದರಕ್ಕೆ ಆಗಮನ ಸಂಭವಿಸಬಹುದಾದ್ದರಿಂದ ಯೋನಿ ಪ್ರವೇಶ ವ್ಯರ್ಥವಾದ್ದರಿಂದ ಮಹಾಯಾಸವಿಲ್ಲ. ಆದ್ದರಿಂದ ಅತಿವೈರಾಗ್ಯಕ್ಕೆ ಕಾರಣವಿಲ್ಲ ಎಂದು ಪೂರ್ವಪಕ್ಷ.

'ಅನ್ಯಥಾಗತಿ' ಯೇ ಸಿದ್ಧಾಂತಯುಕ್ತಿ-

ಅನ್ಯಥಾ - ಯೋನಿ ಪ್ರವೇಶವನ್ನು ಹೊರತು ಪಡಿಸಿ ಬೇರೆ ಪ್ರಕಾರದಿಂದ ಆಗತಿ:- ಗಮನವೇ ಇಲ್ಲ. ಏಕೆಂದರೆ 'ಯೋನಿ ದ್ವಾರೇಣ ದೇಹಂಚ ಪ್ರಾಪ್ನೋತಿ ಪ್ರಾಯಶೋ ನರ:' (ಪ್ರಾಯ: ಮನುಷ್ಯನು ಯೋನಿದ್ವಾರದಿಂದಲೇ ಸ್ತ್ರೀಗರ್ಭ ಪ್ರವೇಶಿಸಿ ದೇಹವನ್ನು ಪಡೆಯುವನು) ಎಂದು ಪ್ರಮಾಣವಿದೆ. ಯೋನಿ ಪ್ರವೇಶ ವಿಲ್ಲದೆ ಜನ್ಮ ಕೇವಲ ಮಹಾತ್ಮರಿಗೆ ಹೊರತು ಸಾಮಾನ್ಯರಿಗಲ್ಲ. ಆದ್ದರಿಂದ ಕಾಮ್ಯ ಕರ್ಮದಲ್ಲಿ ವೈರಾಗ್ಯ ಆವಶ್ಯಕ ಎಂದು ಸಿದ್ಧಾಂತ.

**ಮೂರನೇ ಅಧ್ಯಾಯ ಎರಡನೇ ಪಾದದ ನ್ಯಾಯಮಾಲಾ**

**ಪಶ್ಚಾದದೃಷ್ಟ್ಯವಿಜ್ಞಾನ ಕಾಲದುಃಖ ಪೃಥಗ್ಭವಾಃ ।**<br>
**ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸ್ವತೋಭವಃ ।**<br>
**ಗುಣಸಾಮ್ಯಮಯೋಗಶ್ಚ ತರ್ಕಬಾಧೋ ವಿಲೋಮತಾ ।**<br>
**ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ ।**

**ಅಶಕ್ಯಕರ್ತೃತಾಶಕ್ತಿಃ ಸ್ವತೋ ಬೋಧಸ್ತ ದೇವ ಚ ।**<br>
**ಅಮಾನ ಕ್ಲೃಪ್ತಿಃ ಸಮ್ಮಾನ ವ್ಯವಸ್ಥಾ ತ್ವಲ್ಪತಾಭವಾಃ ।**<br>
**ವಿಶೇಷ ದೃಷ್ಟಿ ವಾಕ್ಯೇಚ ಪುಂಶಕ್ತಿಃ ಸುನಿದರ್ಶನಮ್ ।**<br>
**ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯ ಪ್ರಮಾಃ ॥**

೧) ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ

ಈ ಅಧಿಕರಣದಲ್ಲಿ ಪಶ್ಚಾತ್ ಅದೃಷ್ಟಿ (ಅನಂತರ ಕಾಣದಿರುವಿಕೆ) ಯು ಪೂರ್ವಪಕ್ಷಯುಕ್ತಿ. ಸ್ವಾಪ್ನ ಪದಾರ್ಥಗಳು ಸ್ವಪ್ನಾನಂತರದಲ್ಲಿ ಕಾಣದಿರುವುದರಿಂದ ಮಿಥ್ಯೆಯಾಗಿವೆ. ಅಂದರೆ ಅಸತ್. ಆದ್ದರಿಂದ ಸ್ವಾಪ್ನ ಪದಾರ್ಥಗಳು ಭಗವದಧೀನವಲ್ಲ ಆದ್ದರಿಂದ ಜ್ಯೋತಿರ್ದರ್ಶನಾತ್ ಎಂಬಲ್ಲಿ ಅಭಿಮತವಾದ ಸ್ವಪ್ನಾದಿ ಪ್ರೇರಕತ್ವ ಮಹಿಮೆಗೆ ಚ್ಯುತಿ ಬರುತ್ತದೆಂದು ಪೂರ್ವಪಕ್ಷ.

ಅಶಕ್ಯ ಕರ್ತೃತಾ ಶಕ್ತಿಯು ಸಿದ್ಧಾಂತಯುಕ್ತಿ-ಇತರರಿಗೆ ಅಶಕ್ಯವಾದದ್ದನ್ನೂ ಸೃಷ್ಟಿ ಮಾಡುವ ಶಕ್ತಿ ಭಗವಂತನಿಗೆ ಇದೆಯಾದ್ದರಿಂದ ಸ್ವಪ್ನಕಾಲದಲ್ಲಿ ಜೀವರ ಸಂಸ್ಕಾರದಿಂದ ಸತ್ಯವಾದ ಪದಾರ್ಥಗಳನ್ನು ಸೃಷ್ಟಿ ಮಾಡಿ ಜೀವರಿಗೆ ಪ್ರದರ್ಶಿಸಿ ಪುನಃ ಸಂಸ್ಕಾರ ರೂಪವಾಗಿರುವಂತೆ ಮಾಡುತ್ತನಾದ್ದರಿಂದ ಸ್ವಪ್ನ ಪ್ರೇರಕತ್ವಕ್ಕೆ ಚ್ಯುತಿ ಇಲ್ಲ.

೨) ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧ ವಿಪರ್ಯಯೌ ಓಂ

ಇಲ್ಲಿ ಅವಿಜ್ಞಾನವು ಪೂರ್ವಪಕ್ಷಯುಕ್ತಿ. ಬಾಹ್ಯ ಪದಾರ್ಥಗಳ ಜ್ಞಾನ ವಿಲ್ಲದಿದ್ದಾಗ ಸ್ವಾಪ್ನಪ್ರತೀತಿಯುಂಟಾಗುತ್ತದೆ. ಬಾಹ್ಯ ಪದಾರ್ಥದ ಜ್ಞಾನ ಬಂದಾಗ ಅಜ್ಞಾನ ನಾಶವಾಗಿ ತನ್ನಿಮಿತ್ತಕವಾದ ಸ್ವಾಪ್ನಪ್ರತೀತಿಯೂ ಉಪರತವಾಗುತ್ತದೆ. ಆದ್ದರಿಂದ ಸ್ವಾಪ್ನ ಪ್ರತೀತಿ ಮತ್ತು ತಿರೋಧಾನಗಳೂ ಬಾಹ್ಯಪದಾರ್ಥಗಳ ಅಜ್ಞಾನ ಮತ್ತು ಜ್ಞಾನಾಧೀನವೇ ಹೊರತು ಈಶಾಧೀನವಲ್ಲ ಎಂದು ಪೂರ್ವಪಕ್ಷ.

ಸ್ವತೋಽಬೋಧವು ಸಿದ್ಧಾಂತಯುಕ್ತಿ ।ಜ್ಞಾನವು ಸ್ವತಃ ಬರಲಾರದು. ಅಂದರೆ ಜ್ಞಾನದಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಜ್ಞಾನಾಧೀನವಾಗಿ ಸ್ವಪ್ನ ತಿರೋಧಾನ, ಅಜ್ಞಾನಾಧೀನವಾಗಿ ಸ್ವಪ್ನ ಎಂದು ಹೇಳಲು ಬರುವುದಿಲ್ಲ. ಜ್ಞಾನಾಜ್ಞಾನಗಳೂ ಈಶಾಧೀನವೇ ಆಗಿವೆ. ಆದ್ದರಿಂದ ಸ್ವಪ್ನ ಮತ್ತು ತಿರೋಧಾನಗಳೂ ಈಶಾಧೀನ ಎಂದು ಸಿದ್ಧಾಂತ.

೩) ಓಂ ದೇಹಯೋಗಾದ್ವಾಸೋಽಪಿ ಓಂ

ಇಲ್ಲಿ ಕಾಲವು ಪೂರ್ವಪಕ್ಷಯುಕ್ತಿ .ಜೀವರಿಗೆ ಜಾಗ್ರದವಸ್ಥೆಯು ಹಗಲು ಕಾಲಕ್ಕೆ ಅಧೀನವಾದ್ದರಿಂದ ಈಶಾಧೀನವಲ್ಲ. ಆದ್ದರಿಂದ ಈಶನಿಗೆ ಜಾಗ್ರದವಸ್ಥಾ ಪ್ರೇರಕತ್ವ ಇಲ್ಲ ಎಂದು ಪೂರ್ವಪಕ್ಷ.

ಅಸ್ವಾತಂತ್ರ್ಯವು ಇಲ್ಲಿ ಸಿದ್ಧಾಂತಯುಕ್ತಿ. ಕಾಲವು ಅಸ್ವತಂತ್ರವಾಗಿದೆ ಅದು ಜಾಗ್ರದವಸ್ಥಾ ಪ್ರೇರಕವಲ್ಲ ಹೊರತು ಈಶನೇ ಪ್ರೇರಕ ಎಂದು ಸಿದ್ಧಾಂತ.

೪) ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ

ಈ ಅಧಿಕರಣದಲ್ಲಿ ದುಃಖವು ಪೂರ್ವಪಕ್ಷ ಪ್ರಾಪಕಯುಕ್ತಿ.

ಜೀವನು ಸುಪ್ತಿಯಲ್ಲಿ ಭಗವಂತನನ್ನು ಪ್ರವೇಶಿಸದೆ ಬೇರೆ ಕಡೆ ಇದ್ದರೆ ಅವನಿಗೆ ಸುಪ್ತಿಯಲ್ಲೂ ದುಃಖಾನುಭವ ಬರಬೇಕಾಗುತ್ತದೆ. ಆದ್ದರಿಂದ ಸುಪ್ತಿಯಲ್ಲಿ ಭಗವಂತನಲ್ಲಿ ಪ್ರವೇಶಿಸುತ್ತಾನೆ ಎನ್ನಬೇಕು. ಆಗ ಸುಷುಮ್ನಾ ನಾಡಿಯಲ್ಲಿರುತ್ತಾನೆ ಎಂದು ಹೇಳುವ ವೇದವಾಕ್ಯಕ್ಕೆ ಅಪ್ರಾಮಾಣ್ಯ ಉಂಟಾಗಿ ಇತರ ವಾಕ್ಯಗಳಲ್ಲಿಯೂ ಅವಿಶ್ವಾಸ ಉಂಟಾಗಿ ಅವನ ಮಹಿಮೆಯಲ್ಲೂ ಅವಿಶ್ವಾಸ ಬರುತ್ತದೆ. ಆದ್ದರಿಂದ ಭಕ್ತಿ ಅಯುಕ್ತ ಎಂದು ಪೂರ್ವಪಕ್ಷ.

ಇಲ್ಲಿ ಅಮಾನಕ್ಲೃಪ್ತಿ ಎಂಬುದು ಸಿದ್ಧಾಂತಯುಕ್ತಿ ಪ್ರಮಾಣ ಭೂತವಾದ ಶ್ರುತಿಗೆ ಸಂಭಾವಿತವಾದ ಅರ್ಥವನ್ನು ಕಲ್ಪಿಸದಿರುವಿಕೆ ಎಂದರ್ಥ. ಜೀವನಿಗೆ ನಾಡಿಯಲ್ಲಿರುವ ಭಗವಂತನಲ್ಲಿ ಪ್ರವೇಶ ಒಪ್ಪಿ ಎರಡು ಶ್ರುತಿಗಳನ್ನೂ ಪ್ರಮಾಣ ಎಂದು ಒಪ್ಪಲು ಬರುವಾಗ ನಾಡಿಯಲ್ಲಿ ಪ್ರವೇಶ ಹೇಳುವ ಶ್ರುತಿಗೆ ಸಂಭಾವಿತವಾದ ಅರ್ಥವನ್ನು ಕಲ್ಪಿಸದಿದ್ದರೆ, ಅಪ್ರಾಮಾಣ್ಯ-ಒಪ್ಪಿದರೆ ಬೇರೆ ಕಡೆಯಲ್ಲೂ ಹೀಗೇ ಮಾಡಬೇಕಾಗುತ್ತದೆ. ಆದ್ದರಿಂದ ಯಾವ ಶ್ರುತಿ ವಾಕ್ಯವೂ ಅಪ್ರಮಾಣವಲ್ಲವೆಂದು ಸಿದ್ಧಾಂತ

೫) ಓಂ ಅತಃ ಪ್ರಬೋಧೋಽಸ್ಮಾತ್ ಓಂ

ಇಲ್ಲಿ ಪೃಥಗ್ಭವ (ಬೇರೆ ಕಾರಣಗಳ ಇರುವಿಕೆ) ಎಂಬುದು ಪೂರ್ವಪಕ್ಷಯುಕ್ತಿ. ನಿದ್ರೆಯಿಂದ ಎಚ್ಚರವಾಗಲು ಭೇರೀತಾಡನ ಮೊದ ಲಾದ ಕಾರಣಗಳಿರುವುದರಿಂದ ಎಚ್ಚರಕ್ಕೆ ಈಶಾಧೀನತ್ವವಿಲ್ಲವೆಂದು ಪೂರ್ವಪಕ್ಷ.

ಸಮ್ಮಾನವೆಂಬುದು ಇಲ್ಲಿಯ ಸಿದ್ಧಾತ ಯುಕ್ತಿ - ಭಗವಂತನಿಲ್ಲದೇ ಯಾವ ವ್ಯಾಪಾರವೂ ನಡೆಯಲಾರದು ಎಂದು ಹೇಳುವ 'ನ ಋತೇ ತ್ವತ್ ಕ್ರಿಯತೇ' ಎಂಬ ಸಂಮಾನ = ಸಮೀ ಚೀನವಾದ ಪ್ರಮಾಣವಿರುವುದರಿಂದ ಎಚ್ಚರವೂ ಈಶ ಕೃತವೇ ಆಗಿದೆ. ಎಂದು ಸಿದ್ಧಾಂತ.

೬) ಓಂ ಸ ಏವ ಚ ಕರ್ಮಾನುಸ್ಮೃತಿ ಶಬ್ದ ವಿಧಿಭ್ಯಃ ಓಂ

ಈ ಅಧಿಕರಣದಲ್ಲಿಯೂ ಪೃಥಗ್ಭವವೇ ಪೂರ್ವಪಕ್ಷಯುಕ್ತಿ.

ಪೃಥಕ್ - ಪೃಥಕ್ತ್ವದ ಭವಃ = ದರ್ಶನ. ಲೋಕದಲ್ಲಿ ಬೇರೆ ಬೇರೆ ದೇಶಕಾಲಗಳಲ್ಲಿ ಬೇರೆ ಬೇರೆ ರಾಜರು ಇರುವಂತೆ ಬೇರೆ ಬೇರೆ ನಿಯಾಮಕರು ಇರಬಹುದು ಆದ್ದರಿಂದ ಸಾರ್ವದೈಶಿಕ ಸಾರ್ವಕಾಲಿಕ ಸಾರ್ವಜನೀನ ಸರ್ವಾವಸ್ಥಾ ಪ್ರೇರಕತ್ವ ಹೇಗೆ? ಎಂದು ಪೂರ್ವ ಪಕ್ಷ

ಸಮ್ಮಾನವು ಇಲ್ಲಿ ಸಿದ್ಧಾಂತ ಯುಕ್ತಿ -

ದೇಶ ಕಾಲ ವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ ।
ತಿರಸ್ಕರ್ತಾ ಚ ಕರ್ತಾ ಚ ನ ಖಂಡೇಶಃ ಸ ರಾಜವತ್ ॥

ಪರಮಾತ್ಮನೇ ಪ್ರತಿಯೊಂದು ದೇಶಕಾಲ ವಿಶೇಷಗಳಲ್ಲಿ ಸರ್ವರಿಗೂ ಸ್ವಪ್ನಾದಿಗಳ ತಿರೋಧಾನ, ಪ್ರತೀತಿಗಳನ್ನುಂಟು ಮಾಡುತ್ತಾನೆ. ಅವನು ರಾಜರಂತೆ ಯಾವುದೋ ಒಂದು ಖಂಡಕ್ಕೆ ಮಾತ್ರ ಅಧಿಪತಿಯಲ್ಲ ಎಂದು ಸಮೀಚೀನ ಪ್ರಮಾಣವಿರುವುದರಿಂದ ವಿಷ್ಣುವೇ ಸರ್ವಪ್ರೇರಕ ಎಂದು ಸಿದ್ಧಾಂತ.

೭) ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ

ಇಲ್ಲಿಯೂ ಪೃಥಗ್ಭವವೇ ಪೂರ್ವಪಕ್ಷ ಪ್ರಾಪಕಯುಕ್ತಿ.

ಮೋಹಾವಸ್ಥೆಯು ಜಾಗ್ರವಸ್ಥೆಗಿಂತ ಬೇರೆಯಾಗಿದೆ. ಆವಾಗ ಬಾಹ್ಯಜ್ಞಾನ ಇರುವುದಿಲ್ಲವಾದ್ದರಿಂದ. ಮೋಹವು ಸ್ವಪ್ನಕ್ಕಿಂತಲೂ ಬೇರೆ. ಏಕೆಂದರೆ ಮೋಹದಲ್ಲಿ ಜಾಗ್ರತ್ ಅವಸ್ಥೆಯಲ್ಲಿರುವಂತೆ ದುಃಖಾನುಭವ ವಾಗುತ್ತದೆ. ಆದ್ದರಿಂದ ಮೋಹವು ಸುಪ್ತಿಯಲ್ಲಿ ಅಂತರ್ಗತವಾಗಿದೆ. ಏಕೆಂದರೆ ಸರ್ವೇಂದ್ರಿಯ ಉಪರಮವು ಸುಪ್ತಿ ಮತ್ತು ಮೋಹದಲ್ಲಿ ಸಮಾನ ಧರ್ಮವಾಗಿದೆ. ಆದ್ದದರಿಂದ ಸುಪ್ತಿ ಪ್ರೇರಕತ್ವಕ್ಕಿಂತ ಅಧಿಕವಾದ ಮೋಹಾವಸ್ಥಾಪ್ರೇರಕತ್ವ ಮಹಿಮೆ ಭಗವಂತನಿಗಿಲ್ಲ ಎಂದು ಪೂರ್ವಪಕ್ಷ.

ಸಮ್ಮಾನವು ಇಲ್ಲಿ ಸಿದ್ಧಾಂತ ಯುಕ್ತಿ - ಸುಪ್ತಿ ಅವಸ್ಥೆಯಲ್ಲಿ ಕೇವಲ ಸುಖವಿರುವುದರಿಂದ ಮೋಹದಲ್ಲಾದರೂ ದುಃಖವಿರುವುದರಿಂದ ಮೋಹವು ಸುಪ್ತಿರೂಪವೂ ಅಲ್ಲ. ಆದ್ದರಿಂದ ಜೀವನಲ್ಲಿ ಸಂಭಾವಿತವಾದ ಭಗವಂತನಿಗಿಂತ ದೂರಸ್ಥತ್ವ, ಸಮೀಪಸ್ಥತ್ವ, ಪ್ರವೇಶ, ಮತ್ತು ಅರ್ಧ ಪ್ರವೇಶಗಳಲ್ಲಿ ದೂರಸ್ಥತ್ವ ರೂಪವಾದ ಜಾಗ್ರವಸ್ಥೆಯು, ಸಮೀಪಸ್ಥತ್ವ ರೂಪವಾದ ಸ್ವಪ್ನಾವಸ್ಥೆಯೂ, ಬ್ರಹ್ಮ ಪ್ರವೇಶ ರೂಪವಾದ ಸುಪ್ತಿಯೂ ಅಲ್ಲವೆಂದು ಸಿದ್ಧವಾದ ಮೇಲೆ ಸಮೀಚೀನರೂಪವಾದ ಪರಿಶೇಷ ಪ್ರಮಾಣದಿಂದ ಮೋಹವು ಬ್ರಹ್ಮನಲ್ಲಿ ಅರ್ಧ ಪ್ರವೇಶ ರೂಪವೆಂದು ಸಿದ್ಧವಾಗುತ್ತದೆ. ಆದ್ದರಿಂದ ಭಗವಂತನಲ್ಲಿ ಮೋಹಾವಸ್ಥಾ ಪ್ರೇರಕತ್ವರೂಪವಾದ ಅಧಿಕ ಮಾಹಾತ್ಮ್ಯವೂ ಸಿದ್ಧವಾಯಿತು.

೮) ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ

ಸ್ಥಾನ ಭೇದವು ಪೂರ್ವಪಕ್ಷಯುಕ್ತಿ - ಪ್ರತಿ ಶರೀರ ಮತ್ತು ಕಣ್ಣು ಕಂಠ ಮೊದಲಾದ ಸ್ಥಾನ ಭೇದದಿಂದಗಾಗಿ ಭಗವದ್ರೂಪಗಳೂ ಭಿನ್ನಭಿನ್ನ ಎಂದು ಪೂರ್ವಪಕ್ಷ.

ವ್ಯವಸ್ಥಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ. 'ಅಯಮೇವ ಸಃ' 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿ ಬಲದಿಂದ ಸ್ಥಾನಗಳು ಭಿನ್ನ ಭಿನ್ನವಾದರೂ ಬ್ರಹ್ಮರೂಪಗಳು ಮಾತ್ರ ಅಭಿನ್ನ ಎಂಬ ವ್ಯವಸ್ಥೆಯನ್ನು ಮಾಡಲು ಬರುವುದರಿಂದ ಬ್ರಹ್ಮರೂಪಗಳಿಗೆ ಭೇದವಿಲ್ಲವೆಂದು ಸಿದ್ಧಾಂತ.

೯) ಓಂ ಅರೂಪವದೇವಹಿ ತತ್ಪ್ರಧಾನತ್ವಾತ್ ಓಂ

ಇಲ್ಲಿ ವಿರುದ್ಧತ್ವವು ಪೂರ್ವಪಕ್ಷಯುಕ್ತಿ. ಭಗವಂತನಿಗೆ ರೂಪವಿಲ್ಲ ಎಂದು ಹೇಳುವ 'ತದರೂಪಮನಾಮಯಂ' ಎಂಬ ಶ್ರುತಿಗೂ ಚಿನ್ನದಂತಹ ರೂಪಉಳ್ಳವನೂ ಸೂರ್ಯನಂತಹ ರೂಪ ಉಳ್ಳವನು ಎಂದು ಹೇಳುವ 'ರುಗ್ಮವರ್ಣಂ ಆದಿತ್ಯವರ್ಣಂ' ಎಂಬ ಶ್ರುತಿಗೂ ಪರಸ್ಪರ ವಿರೋಧವಿರುವುದರಿಂದ ಎರಡೂ ಅಪ್ರಮಾಣ ಆದ್ದರಿಂದ ರೂಪವಿಲ್ಲದ ಪ್ರಯುಕ್ತ ಸೌಂದರ್ಯಾದಿ ಇಲ್ಲವಾದ್ದರಿಂದ ಭಕ್ತಿಗೆ ಅವಕಾಶವಿಲ್ಲ ಎಂದು ಪೂರ್ವಪಕ್ಷ.

ವ್ಯವಸ್ಥಾ ಎಂಬುದೇ ಇಲ್ಲಿಯೂ ಸಿದ್ಧಾಂತ ಯುಕ್ತಿ. ಭಗವಂತನಲ್ಲಿ ಪ್ರಾಕೃತ ರೂಪವಿಲ್ಲ. ಆದರೆ, ಅಪ್ರಾಕೃತರೂಪವಿದೆ ಎಂದು ವ್ಯವಸ್ಥೆ ಮಾಡಿ ಎರಡು ಶ್ರುತಿಗಳಿಗೂ ಪ್ರಾಮಾಣ್ಯವನ್ನು ಹೇಳಬೇಕು. ಆದುದರಿಂದ ಭಗವಂತನು ರೂಪವಿಶಿಷ್ಟನಾದ್ದರಿಂದ ಅವನಲ್ಲಿ ಭಕ್ತಿ ಮಾಡಬೇಕು.

೧೦) ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ

ನ್ಯಾಯಸಾಮ್ಯವು ಇಲ್ಲಿ ಪೂರ್ವಪಕ್ಷ ಪ್ರಾಪಕ ಯುಕ್ತಿ. ಜೀವನಲ್ಲಿರುವ ಚೇತನತ್ವ ಮತ್ತು ಅಂಶತ್ವ ರೂಪ ನ್ಯಾಯಸಾಮ್ಯದಿಂದ ಮತ್ಸ್ಯಾದಿಗಳಂತೆ ಜೀವನೂ ಈಶಾಭಿನ್ನ. ಆದ್ದರಿಂದ ಈಶನಲ್ಲಿ ಭಕ್ತಿಯು ಯುಕ್ತವಲ್ಲ ಎಂದು ಪೂರ್ವಪಕ್ಷ.

ಅತ್ಯಲ್ಪತ್ವವು ಸಿದ್ಧಾಂತ ಯುಕ್ತಿ. ಜೀವನಲ್ಲಿ ಅಲ್ಪ ಗುಣತ್ವ ರೂಪವಾದ ವಿರುದ್ಧ ಧರ್ಮವಿರುವುದರಿಂದ ಜೀವನಿಗೆ ಈಶನಿಂದ ಅಭೇದವನ್ನು ಹೇಳಲು ಬರುವುದಿಲ್ಲ ಎಂದು ಸಿದ್ಧಾಂತ.

೧೧) ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ

ಈ ಅಧಿಕರಣದಲ್ಲಿ 'ಸತೋ ಭವಃ' ಎಂಬುದು ಪೂರ್ವಪಕ್ಷ ಯುಕ್ತಿ ಸತಃ - ಜೀವನಲ್ಲೇ ಇರುವ ಜ್ಞಾನಾನಂದಾತ್ಮಕತ್ವ ಸಾದೃಶ್ಯದ, ಭವಃ- ಅಭಿವ್ಯಕ್ತಿಯು. ಸಾಧನವಿಲ್ಲದೇ ಸುಪ್ತಿಯಲ್ಲಿ ಕಿಂಚಿತ್ ಸ್ವರೂಪದ ಅಭಿವ್ಯಕ್ತಿ ಆಗುವಂತೆ ಸಾಧನವಿಲ್ಲದೆಯೇ ಪೂರ್ಣವಾಗಿಯೂ ಆಗಬಹುದಾದ್ದರಿಂದ ಭಕ್ತಿ ಅನಾವಶ್ಯಕ ಎಂದು ಪೂರ್ವಪಕ್ಷ.

ಭವಃ (ಇರುವಿಕೆಯು) ಇಲ್ಲಿ ಸಿದ್ಧಾಂತ ಯುಕ್ತಿ. ಅನಾದಿಕಾಲದಿಂದ ಸಂಸಾರವು ನಿವೃತ್ತಿಯಾಗದೇ ಇರುವುದರಿಂದ ಭಕ್ತ್ಯಾದಿ ಸಾಧನವಿಲ್ಲದೇ ಸಂಸಾರನಿವೃತ್ತಿಯಾಗಲಾರದು. ಆದ್ದರಿಂದ ಸಂಸಾರನಿವೃತ್ತಿಯಾಗಿ ಆನಂದಾಭಿವ್ಯಕ್ತಿ ಆಗಬೇಕಾದರೆ ಭಕ್ತಿ ಅಗತ್ಯವಾಗಿದೆ ಎಂದು ಸಿದ್ಧಾಂತ.

೧೨) ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ

ಗುಣಸಾಮ್ಯವು ಇಲ್ಲಿ ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ಎಲ್ಲ ಜೀವರಲ್ಲಿ ಮುಕ್ತತ್ವರೂಪವಾದ ಗುಣಸಾಮ್ಯವಿರುವುದರಿಂದ ಭಕ್ತ್ಯಾದಿಗುಣಗಳೂ ಅವರಲ್ಲಿ ಸಮಾನವಾಗಿರುತ್ತವೆ ಎಂದು ಪೂರ್ವಪಕ್ಷ.

ವಿಶೇಷ ದೃಷ್ಟಿಯು ಸಿದ್ಧಾಂತ ಯುಕ್ತಿ. ಯಥಾ ಯಥಾ ಅಧಿಕಾರೋ ವಿಶಿಷ್ಯತೇ ಎಂಬ ಶ್ರುತಿಯು ಸಾಧನವಿಶೇಷ ಪ್ರತಿಪಾದಕವಾಗಿದೆ. ಮತ್ತು 'ಸೈಷಾಽಽನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿಯಿಂದ ಫಲತಾರತಮ್ಯ ಕಂಡಿದೆ. ಸಾಧನದಲ್ಲಿ ವಿಶೇಷವಿಲ್ಲದಿದ್ದರೆ ಅದನ್ನು ನಿರ್ವಾಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮಾದಿ ಜೀವರ ಸಾಧನದಲ್ಲಿ ತಾರತಮ್ಯವಿದೆಯೆಂದು ಸಿದ್ಧಾಂತ.

೧೩) ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ

ಅಯೋಗವು ಇಲ್ಲಿ ಪೂರ್ವ ಪಕ್ಷಯುಕ್ತಿ ಜಗತ್ತಿನ ಸಂಹಾರವಾಗದಿರುವಿಕೆಯೇ ಆದರ ರಕ್ಷಣೆ. ಆದ್ದರಿಂದ ಭಗವಂತನಲ್ಲಿ ಸಂಹಾರಮಾಡದೇ ಇರುವಿಕೆಗಿಂತ ಭಿನ್ನವಾದ ಪಾಲನ ರೂಪವಾದ ವ್ಯಾಪಾರವು ಯುಕ್ತವಾಗುವುದಿಲ್ಲವಾದ್ದರಿಂದ ಅವನಲ್ಲಿ ಪ್ರತ್ಯೇಕವಾದ ಪಾಲಕತ್ವ ಎಂಬ ಗುಣ ಇಲ್ಲ ಎಂದು ಪೂರ್ವಪಕ್ಷ.

ವಿಶೇಷ ವಾಕ್ಯವು ಸಿದ್ಧಾಂತಸ್ಥಾಪಕ ಯುಕ್ತಿ. ಸ ಸೃಜತಿ ಸ ಪಾಲಯತಿ, ಸ ವಿನಾಶಯತಿ (ಭಗವಂತನು ಸೃಷ್ಟಿ ಮಾಡುತ್ತಾನೆ, ಪಾಲಿಸುತ್ತಾನೆ ಮತ್ತು ಸಂಹಾರ ಮಾಡುತ್ತಾನೆ) ಎಂದು ವಿಶೇಷ ವಾಕ್ಯವಿರುವುದರಿಂದ

ಅನ್ನವಸನಾದಿಗಳನ್ನು ಕೊಡುವುದರ ಮೂಲಕ ಪಾಲಕನೂ ಆಗಿದ್ದಾನೆಂದು ಸಿದ್ಧಾಂತ.

೧೪) ಓಂ ತದವ್ಯಕ್ತಮಾಹ ಹಿ ಓಂ

ತರ್ಕಬಾಧವು ಈ ಅಧಿಕರಣದ ಪೂರ್ವಪಕ್ಷಯುಕ್ತಿ. ಪರಮಾತ್ಮನು ಅವ್ಯಕ್ತಸ್ವಭಾವ. ಸಾಧಕರಿಗೆ ಅವನ ಸಾಕ್ಷಾತ್ಕಾರವಾಗುತ್ತದೆ ಎಂದು ಹೇಳಿದರೆ ಅವನ ಅವ್ಯಕ್ತತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ ಅವನ ಸಾಕ್ಷಾತ್ಕಾರವೇ ಶಕ್ಯವಿಲ್ಲದಿರುವಾಗ ಭಕ್ತಿ ವ್ಯರ್ಥ ಎಂದು ಪೂರ್ವಪಕ್ಷ.

ಪುಂಶಕ್ತಿ ಎಂಬುದು ಸಿದ್ಧಾಂತ ಯುಕ್ತಿ. ಪರಮಾತ್ಮನಲ್ಲಿ ಅಚಿಂತ್ಯಶಕ್ತಿ ಇರುವುದರಿಂದ ಅವನು ಅವ್ಯಕ್ತಸ್ವಭಾವನಾಗಿದ್ದರೂ ತನ್ನ ಶಕ್ತಿಯಿಂದ ಸಾಕ್ಷಾತ್ಕಾರಗೋಚರನೂ ಆಗುತ್ತಾನಾದ್ದರಿಂದ ಭಕ್ತಿ ಮಾಡಬೇಕೆಂದು ಸಿದ್ಧಾಂತ.

೧೫) ಓಂ ಉಭಯ ವ್ಯಪದೇಶಾತ್ತ್ವ ಹಿ ಕುಂಡಲವತ್ ಓಂ

ಈ ಅಧಿಕರಣದಲ್ಲಿ 'ವಿಲೋಮತಾ' ಎಂಬುದು ಪೂರ್ವಪಕ್ಷಯುಕ್ತಿ. ವಿಲೋಮತಾ ಎಂದರೆ ವಿರುದ್ಧತ್ವ, ಗುಣಸ್ವರೂಪನಾದ ಪರಮಾತ್ಮನಿಗೆ ಗುಣವತ್ತ್ವವು ವಿರುದ್ಧ. ಆದ್ದರಿಂದ ಗುಣಸ್ವರೂಪನಾದರೂ ಗುಣ ಉಳ್ಳವನಲ್ಲವಾದ್ದರಿಂದ ಭಕ್ತಿ ಯುಕ್ತವಲ್ಲ ಎಂದು ಪೂರ್ವಪಕ್ಷ.

'ಸುನಿದರ್ಶನಂ' ಎಂಬುದು ಸಿದ್ಧಾಂತ ನ್ಯಾಯ.- ಪೂರ್ವಃ ಕಾಲಃ ಮೊದಲಿನ ಸಮಯವು ಎಂಬಲ್ಲಿ ಮೊದಲಿನ ಎಂದರೂ ಕಾಲವೇ, ಕಾಲಃ ಎಂದರೂ ಕಾಲವೇ. ಅಲ್ಲಿ ಹೇಗೆ ಮೊದಲಿನ ಕಾಲ ಎಂದು ವಿಶೇಷಣ ವಿಶೇಷ್ಯಭಾವವಿದೆಯೋ ಅದರಂತೆ ಆ ನಿದರ್ಶನದಿಂದ ಗುಣ ಸ್ವರೂಪನಾದ ಪರಮಾತ್ಮನಿಗೂ ಗುಣಗಳಿಗೂ ವಿಶೇಷಣ ವಿಶೇಷ್ಯಭಾವ ಹೇಳಬಹುದು. ಹೀಗೆ ಗುಣರೂಪನಾದ ಭಗವಂತನು ಗುಣವುಳ್ಳವನೂ ಆದ್ದರಿಂದ ಭಕ್ತಿ ಯುಕ್ತವಾಗುತ್ತದೆ ಎಂದು ಸಿದ್ಧಾಂತ.

೧೬) ಓಂ ಪರಮತಃ ಸೇತೂನ್ಮಾನ ಸಂಬಂಧಭೇದ ವ್ಯಪದೇಶೇಭ್ಯಃ ಓಂ

ಇಲ್ಲಿಯೂ 'ವಿಲೋಮತಾ' ಎಂಬುದು ಪೂರ್ವಪಕ್ಷಯುಕ್ತಿ. ಆನಂದಾದಿ ಪದಗಳು ಲೌಕಿಕಾನಂದಾದಿಗಳಿಗೇ ವಾಚಕವಾದ್ದರಿಂದ, ಬ್ರಹ್ಮಾನಂದವಾದರೂ ಲೌಕಿಕ ವಿಲಕ್ಷಣವಾದ್ದರಿಂದ ಆನಂದ ಪದ ವಾಚ್ಯತ್ವವು ಬ್ರಹ್ಮಾನಂದಕ್ಕಿಲ್ಲವಾಗುತ್ತದೆ. ಆನಂದಾದಿಶಬ್ದವಾಚ್ಯತ್ವವನ್ನು ಕೂಡಿಸಲು ಬ್ರಹ್ಮಾನಂದವು ಲೌಕಿಕಾನಂದಸದೃಶ ಎಂದು ಹೇಳಿದರೆ ಅಂತಹ ಆನಂದಾದಿಗಳುಳ್ಳ ಪರಮಾತ್ಮನಲ್ಲಿ ಭಕ್ತಿ ಯುಕ್ತವಾಗಲಾರದು. ಎಂದು ಪೂರ್ವಪಕ್ಷ.

ಅಲೌಕಿಕತ್ವ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ -

ಯದ್ಯಪಿ ಭಗವಂತನ ಆನಂದಾದಿಗುಣಗಳೂ ಅದನ್ನು ತಿಳಿಸುವ ಶಬ್ದಗಳೂ, ಅವನೂ, ಎಲ್ಲವೂ ಅಲೌಕಿಕವೇ. ಆದರೂ ಘಟ ಶಬ್ದವು ಮಣ್ಣಿನ ಮತ್ತು ಸುವರ್ಣದ ಘಟಕ್ಕೆ ವಾಚಕವಾದಂತೆ ಲೌಕಿಕ ಶಬ್ದಗಳೂ ಕೂಡ ಅಲೌಕಿಕ ಆನಂದಾದಿಗಳನ್ನು ತಿಳಿಸುತ್ತವೆ. ಎಂದು ಶ್ರುತಿ ಇದೆ-

ಅಲೌಕಿಕಾಸ್ತಸ್ಯ ಶಬ್ದಾಸ್ತಥಾರ್ಥಾಃ ಅಲೌಕಿಕೋ ಹ್ಯೇಷ ವಿಷ್ಣುಃ ಪರತ್ವಾತ್ । ತಥಾಪಿ ಶಬ್ದಾ ಲೌಕಿಕಾ ಅಪ್ಯಮುಷ್ಮಿನ್ ಪ್ರವರ್ತಮಾನಾ ಅಧಿಕಾರ್ಥಾನ್ ವದಂತಿ । ಎಂದು ಆದ್ದರಿಂದ ಭಕ್ತಿಯುಕ್ತಯುಎಂದು ಸಿದ್ಧಾಂತ

೧೭) ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ

ನಾನಾಭಾವ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ಜೀವರ ಆನಂದಗಳು ನಾನಾ ಪ್ರಕಾರವಾಗಿವೆ. ಆದ್ದರಿಂದ ಅವುಗಳಿಗೆ ಬಿಂಬ ಭೂತವಾದ ಭಗವಂತನ ಆನಂದದಲ್ಲಿಯೂ ವೈಚಿತ್ರ್ಯ ಇರಬೇಕಾಗುತ್ತದೆ. ಆದರೆ ವೈಚಿತ್ರ್ಯವಿಲ್ಲ ಎಂದು ಪ್ರಮಾಣವಿದೆ. ಆದ್ದರಿಂದ ಪರಮಾತ್ಮನ ಆನಂದವು ಬಿಂಬವಲ್ಲ ಎಂದಾಗಿ ಭಕ್ತಿಯು ಯುಕ್ತವಲ್ಲ ಎಂದು ಪೂರ್ವಪಕ್ಷ.

ಆಧಿಕ್ಯವು (ಸಾಮರ್ಥ್ಯಾಧಿಕ್ಯವು) ಇಲ್ಲಿ ಸಿದ್ಧಾಂತ ಸ್ಥಾಪಕಯುಕ್ತಿ. ಪರಮಾತ್ಮನಲ್ಲಿ, ಅವನ ಆನಂದಾದಿಗಳಲ್ಲಿ ಯಾವ ವೈಚಿತ್ರ್ಯವಿಲ್ಲದಿದ್ದರೂ

ಪ್ರತಿಬಿಂಬಗಳಲ್ಲಿ ಮಾತ್ರ ವೈಚಿತ್ರ್ಯವನ್ನುಂಟುಮಾಡುವ ಶಕ್ತಿ ವಿಶೇಷವು ಅವನಲ್ಲಿದೆ. ಆದ್ದರಿಂದ ಭಕ್ತಿಯು ಯುಕ್ತವೇ ಆಗಿದೆ ಎಂದು ಸಿದ್ಧಾಂತ.

೧೮) ಓಂ ತಥಾಽನ್ಯತ್ ಪ್ರತಿಷೇಧಾತ್ ಓಂ

ಇಲ್ಲಿಯೂ ನಾನಾಭಾವವೇ ಪೂರ್ವಪಕ್ಷಯುಕ್ತಿ. ಭಗವಂತನಿಗೆ ಮತ್ಸ್ಯ ಕೂರ್ಮಾದಿ ನಾನಾರೂಪಗಳಿರುವುದರಿಂದ ಅದರಂತೆಯೇ ಸಾಧಕರ ಧ್ಯಾನ ಕಾಲದಲ್ಲಿ ಗೋಚರಿಸುವ ಮಾನಸವಾಸನಾಮಯ ಪ್ರತಿಮೆಯೂ ಅವನದ್ದೇ ಒಂದು ರೂಪವಾದ್ದರಿಂದ ಭಕ್ತಿಯಿಲ್ಲದೇ ಧ್ಯಾನ ಮಾಡುವಾಗಲೂ ಅಂತಹ ರೂಪವು ಪ್ರಕಟವಾಗುತ್ತದೆಯಾದ್ದರಿಂದ. ಅದೇ ಫಲ ಕೊಡುತ್ತದೆ. ಆದ್ದರಿಂದ ಭಕ್ತಿ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಆಧಿಕ್ಯವು ಸಿದ್ಧಾಂತ ಯುಕ್ತಿ. ಭಗವಂತನಲ್ಲಿ ಗುಣಪೂರ್ಣತ್ವ ರೂಪವಾದ ಆಧಿಕ್ಯವಿರುವುದರಿಂದ ಅವನು ದೋಷಯುಕ್ತವಾದ ಮಾನಸ ಪ್ರತಿಮಾ ರೂಪನಲ್ಲ. ನೇದಂ ಯದಿದಮುಪಾಸತೇ (ಧ್ಯಾನದಲ್ಲಿ ಗೋಚರವಾಗುವ ಪ್ರತಿಮೆ ಪರಮಾತ್ಮನಲ್ಲ) ಎಂದು ಶ್ರುತಿಯೂ ಇದೆ. ಆದ್ದರಿಂದ ಪ್ರತಿಮೆಗಿಂತ ಭಿನ್ನನಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಭಕ್ತಿ ಆವಶ್ಯಕ ಎಂದು ಸಿದ್ಧಾಂತ.

೧೯) ಓಂ ಅನೇನ ಸರ್ವಗತತ್ವ ಮಾಯಾ ಮಯ ಶಬ್ದಾದಿಭ್ಯಃ ಓಂ

ನಾನಾಭಾವ ಎಂಬುದು ಈ ಅಧಿಕರಣಧ ಪೂರ್ವಪಕ್ಷಯುಕ್ತಿ ಭಗವಂತನ ನಾನಾ ಅವತಾರಗಳಲ್ಲಿ ನಾನಾವಿಧವಾದ ಕೌತುಕಗಳು (ಪಾರ್ಥಸಾರಥ್ಯ ಮೊದಲಾದುದು) ಕಂಡಿದ್ದರಿಂದ ಇದರಂತೆಯೇ ಕೌತುಕದಿಂದ ಭಗವಂತನು ಎಂದಾದರೊಮ್ಮೆ ಯಾರಿಗಾದರೂ ತನ್ನ ಸೃಷ್ಟ್ಯಾದಿ ಕರ್ತೃತ್ವವನ್ನು ಕೊಡಬಹುದು. ಆಗ ಅವನಲ್ಲಿ ಆ ಮಹಿಮೆ ಬರುವುದಿಲ್ಲವಾದ್ದರಿಂದ ಭಕ್ತಿ ಯುಕ್ತವಲ್ಲ ಎಂದು ಪೂರ್ವಪಕ್ಷ.

ಸ್ವಾತಂತ್ರ್ಯವು ಇಲ್ಲಿ ಸಿದ್ಧಾಂತಯುಕ್ತಿ. ಭಗವಂತನು ಎಲ್ಲಾ ವಿಷಯದಲ್ಲೂ ಸ್ವತಂತ್ರನಾದ್ದರಿಂದ ಯಾವ ಪ್ರಸಂಗದಲ್ಲೂ ಕೌತುಕದಿಂದಲೂ ತನ್ನ ಉತ್ಕರ್ಷವನ್ನು ಕೊಡುವುದಿಲ್ಲ. ಮುಕ್ತಿಯಲ್ಲಿ ಸಾರೂಪ್ಯ ಕೊಟ್ಟರೂ ಶ್ರೀವತ್ಸ ಕೌಸ್ತುಭಾದಿಗಳನ್ನು ಕೊಡುವುದಿಲ್ಲ.

ಆದ್ದರಿಂದ ಎಂದೂ ಅವನ ಉತ್ಕರ್ಷಕ್ಕೆ ಚ್ಯುತಿ ಇಲ್ಲವಾದ್ದರಿಂದ ಭಕ್ತಿಯು ಯುಕ್ತವೇ ಆಗಿದೆ ಎಂದು ಸಿದ್ಧಾಂತ.

೨೦) ಓಂ ಫಲಮತ ಉಪಪತ್ತೇಃ ಓಂ

ಪ್ರಲೋಭ ಎಂಬುದು ಇಲ್ಲಿಯ ಪೂರ್ವಪಕ್ಷಯುಕ್ತಿ . ಕರ್ಮ ಮಾಡಿದರೆ ಫಲ. ಇಲ್ಲದಿದ್ದರೆ ಇಲ್ಲ. ಹೀಗಿರುವಾಗ ಕರ್ಮವೇ ಫಲಪ್ರದ. ವಿಷ್ಣುವು ಫಲಪ್ರದನೆಂಬುದು ಪ್ರಲೋಭನ ಮಾತ್ರ ಎಂದು ಪೂರ್ವಪಕ್ಷ.

ಸ್ವಾತಂತ್ರ್ಯವು ಇಲ್ಲಿ ಸಿದ್ಧಾಂತ ಸ್ಥಾಪಕ ಯುಕ್ತಿ . ಭಗವಂತನೇ ಸ್ವತಂತ್ರ. ಕರ್ಮ ಮಾಡಿಸುವವನೂ ಅವನೇ ಫಲಪ್ರದನೂ ಅವನೇ. ಏಕೆಂದರೆ ಕೆಲವು ಕರ್ಮಗಳಿಗೆ ಫಲಕೊಡುವುದು ಕೆಲವಕ್ಕೆ ಕೊಡದಿರುವುದೂ ಕಂಡಿದೆ ಆದ್ದರಿಂದ ಎಷ್ಟೋ ಕರ್ಮಗಳು ಬೋಗಿಸಲ್ಪಡದೆಯೇ ಭಗನಂತನಿಂದ ನಾಶ ಹೊಂದುತ್ತವೆ. ಆದ್ದರಿಂದ ಭಗವಂತನೇ ಫಲಪ್ರದ ಎಂದು ಸಿದ್ಧಾಂತ.

**ಸಾಧ್ಯಾಪ್ರಸಿದ್ಧಿ ನಿರಾಸೋಕ್ತಿ**

ಸಾಧ್ಯಾಪ್ರಸಿದ್ಧಿಯು ದೋಷವಲ್ಲವೆಂದು ಸುಧಾದಲ್ಲಿ ಅನೇಕ ರೀತಿಯಾಗಿ ನಿರೂಪಿಸಿ ಅನಂತರ ಹೀಗೇ ಇನ್ನೂ ಅನೇಕ ರೀತಿಗಳನ್ನು ತಿಳಿಯಬೇಕು ಎಂದಿದ್ದಾರೆ. ಅದರ ರೀತಿ ಹೀಗಿದೆ -

ಆತ್ಮನನ್ನು ಸಾಧಿಸುವಾಗ ಮೊದಲಿಗೆ ಜ್ಞಾನಂ ಕ್ವಚಿತ್ ಸಮವೇತಂ ಗುಣತ್ವಾತ್ ರೂಪವತ್ (ಜ್ಞಾನವು ಎಲ್ಲಾದರೂ ಒಂದು ಕಡೆ ಸಮ ವೇತವಾಗಿದೆ. ಗುಣವಾಗಿದ್ದರಿಂದ. ರೂಪವು ಘಟಾದಿಗಳಲ್ಲಿರುವಂತೆ) ಎಂಬ ಅನುಮಾನದಿಂದ ಮೊದಲಿಗೆ ಜ್ಞಾನಾಶ್ರಯವನ್ನು ಸಾಮಾನ್ಯತಃ ಸಿದ್ಧಪಡಿಸಿ, ನಂತರ ಈಗ ಸಿದ್ಧವಾಗಿರುವ ಎಂಟು ದ್ರವ್ಯಗಳಲ್ಲಿ ಯಾವುದೂ ಜ್ಞಾನಕ್ಕೆ ಆಶ್ರಯವಾಗಲಾರದೆಂದು ಸಿದ್ಧಪಡಿಸಿದ ನಂತರವೇ ಜೀವಚ್ಛರೀರ ಜಾತಂ ಸಾತ್ಮಕಂ ಪ್ರಾಣಾದಿಮತ್ತ್ವಾತ್ (ಜೀವಂತವಾಗಿರುವ ಎಲ್ಲ ಶರೀರಗಳೂ ಆತ್ಮವುಳ್ಳವುಗಳಾಗಿವೆ ಪ್ರಾಣಾದಿಗಳುಳ್ಳವುಗಳಾದ್ದರಿಂದ) ಎಂದು ಸಾತ್ಮಕತ್ವ ಸಾಧಿಸಬಹುದು.

ಹೀಗೆಯೇ ಜಲಾದಿಗಳಲ್ಲಿ ಪ್ರತ್ಯೇಕವಾಗಿ ಸಿದ್ಧವಾದ ಹದಿಮೂರು ಭೇದಗಳನ್ನು 'ಪೃಥಿವೀ ಇತರ ಭಿನ್ನಾ ಗಂಧವತ್ವಾತ್ (ಪೃಥಿವಿಯು

ಗಂಧವುಳ್ಳದ್ದಾದ್ದರಿಂದ ಉಳಿದದ್ದಕ್ಕಿಂತ ಭಿನ್ನವಾಗಿದೆ) ಎಂದು ಸಾಧಿಸಬಹುದು.

ಹೀಗೇ ಅನೇಕ ಪ್ರಕಾರಗಳನ್ನು ಚಿಂತಾಮಣಿ ಗ್ರಂಥದಲ್ಲಿ ಹೇಳಲಾಗಿದೆ.

**ವಿರೋಧ ಪರಿಹಾರ**

ಹೇತುವಿನಲ್ಲಿ ವಿಶೇಷಣ ಅಥವಾ ವಿಶೇಷ್ಯ ವ್ಯರ್ಥವಾದರೆ ಆ ವೈಯರ್ಥವು ವ್ಯಾಪ್ತಿ ಅಥವಾ ಪಕ್ಷಧರ್ಮತಾಗಳಿಗೆ ಹಾನಿಮಾಡುವುದಿಲ್ಲ ವಾದ್ದರಿಂದ ಆ ವೈಯರ್ಥವು ದೋಷವಲ್ಲ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಹೇತುವಿನಲ್ಲಿ ವಿಶೇಷಣವು ವ್ಯಾಪ್ತಿಗೆ ಎಂಬ ದೃಷ್ಟಿಯಿಂದಲೇ ಕೊಡುವುದರಿಂದ ಅದು ವ್ಯರ್ಥವಾದರೆ ವ್ಯಾಪ್ತತ್ವಾಭಾವ ದೋಷಬರುತ್ತದೆ. ಆದ್ದರಿಂದ ವ್ಯರ್ಥವಿಶೇಷ್ಯತ್ವ ಅಥವಾ ವ್ಯರ್ಥವಿಶೇಣತ್ವವೂ ಕೂಡ ದೋಷ ಎಂದು ಟೀಕಾಕೃತ್ಪಾದರು ಸುಧೆಯಲ್ಲಿ ಸಮರ್ಥಿಸಿದ್ದಾರೆ.

ಆದರೆ ತತ್ವನಿರ್ಣಯ ಟೀಕಾದಲ್ಲಿ 'ವಿಮತಂ ಅಕರ್ತೃಕಂ ಶರೀರ್ಯಜನ್ಯತ್ವಾತ್' ಎಂಬಲ್ಲಿ ಹೇತುಗತವಾದ 'ಶರೀರಿ' ವಿಶೇಷಣವು ವ್ಯರ್ಥವಾದರೂ ಆ ಹೇತುವಿಗೆ ವ್ಯಾಪ್ತತ್ವವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ವಿರೋಧ ಎಂದು ಆಕ್ಷೇಪ.

ಇದಕ್ಕೆ ಸಮಾಧಾನ - 'ವಿಮತಂ ಅಕರ್ತೃಕಂ ಶರೀರ್ಯಜನ್ಯತ್ವಾತ್ ಎಂಬಲ್ಲಿ ಶರೀರಿ ಜನ್ಯತ್ವಾಭಾವವು ಅಖಂಡಾಭಾವವಾದ್ದರಿಂದ ಆ ಹೇತುವು ಒಂದು ಅಖಂಡ ಪಾದರ್ಥ ಅಲ್ಲಿ ಶರೀರಿ ಎಂಬುದು ವಿಶೇಷಣವಾಗಿಲ್ಲ ಆದ್ದರಿಂದ ವ್ಯರ್ಥವಿಶೇಷಣತ್ವವೇ ಇಲ್ಲ ಎಂದು ಅಭಿಪ್ರಾಯ.

ಅಥವಾ ಕೇವಲ ಅಜನ್ಯತ್ವಾತ್ ಎಂದು ಹೇಳಿದರೆ ಅಸಿದ್ಧಿ ದೋಷ ಬರುತ್ತದೆ. ಆ ದೋಷ ಪರಿಹಾರಕ್ಕಾಗಿ ಶರೀರಿ ವಿಶೇಷಣ ಸಾರ್ಥಕ ಎಂಬ ಅಭಿಪ್ರಾಯವನ್ನು ತತ್ವನಿರ್ಣಯ ಟೀಕೆಗೆ ಭಾವಿಸಬೇಕು.

**ತರ್ಕವು ಪ್ರಮಾಣಾನುಗ್ರಾಹಕ**

ತರ್ಕವು ಪ್ರಮಾಣಗಳಿಗೆ ಅನುಗ್ರಾಹಕ. ಉದಾ - ನೆಲದ ಮೇಲೆ ಮಡಿಕೆಯಿಲ್ಲದಿದ್ದರೂ, ಯಾರಾದರೂ ನೆಲದಲ್ಲಿ ಮಡಿಕೆಯಿರಬಾರದೇಕೆ?

ಎಂದು ಆಶಂಕಿಸಿದಾಗ ಒಂದು ಪಕ್ಷ ಇಲ್ಲಿ ಮಡಿಕೆಯಿದ್ದರೆ ಕಣ್ಣಿಗೆ ಕಾಣುತ್ತಿತ್ತು ಕಾಣುತ್ತಿಲ್ಲವಾದ್ದರಿಂದ ಇಲ್ಲ ಎಂಬ ತರ್ಕದಿಂದ ಉತ್ತರಿಸಬಹುದು. ಹೀಗೆ ಸರ್ವತ್ರ ತರ್ಕವು ಪ್ರಮಾಣಗಳಿಗೆ ಅನುಗ್ರಾಹಕವೆಂದು ಸುಧಾದಲ್ಲಿ ಹೇಳಿದ್ದಾರೆ.

ಅದರ ರೀತಿ ಹೀಗಿದೆ -

ವಿಶ್ವಜಿತಾ ಯಜೇತ (ವಿಶ್ವಜಿತ್ ಯಾಗ ಮಾಡಬೇಕು) ಮುಂತಾದ ವಾಕ್ಯಗಳಲ್ಲಿ ಫಲ ಹೇಳಿಲ್ಲ. ಆದ್ದರಿಂದ ಸ್ವರ್ಗಮುಂತಾದ ಫಲವನ್ನು ಹೇಳುವ ಸ್ವರ್ಗಕಾಮಃ ಮುಂತಾದ ಪದಗಳನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಆ ಯಾಗದಲ್ಲಿ ಯಾರೂ ಪ್ರವೃತ್ತಿಯನ್ನೇ ಮಾಡಲಿಕ್ಕಿಲ್ಲ. ಎಂಬ ತರ್ಕದಿಂದ ಇಲ್ಲಿ ಸ್ವರ್ಗ ಕಾಮ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಿದ್ಧವಾಗುತ್ತದೆ.

ಹಾಗೆಯೇ ಉದ್ಭಿದಾ ಯಜೇತ ಪಶುಕಾಮಃ (ಪಶು ಅಪೇಕ್ಷಿಯಾದವನು ಉದ್ಭಿತ್ ಎಂಬ ಯಾಗವನ್ನು ಮಾಡಬೇಕು) ಇತ್ಯಾದಿ ವಾಕ್ಯಗಳಲ್ಲಿ ಉದ್ಭಿತ್ ಪದವು ಯಾಗದ ಹೆಸರಾಗದಿದ್ದರೆ ಉದ್ಭಿತ್ ಉಳ್ಳ ಯಾಗದಿಂದ ಪಶುವನ್ನು ಪಡೆಯಬೇಕೆಂದು ಅರ್ಥ ಸಿದ್ಧವಾಗದಿರಬೇಕಾದೀತು. ಎಂಬ ತರ್ಕದಿಂದ ಉದ್ಭಿತ್ ಎಂಬುದು ಯಾಗ ನಾಮಧೇಯವೆಂದು ಸಿದ್ಧವಾಗುತ್ತದೆ. ಮತ್ತು ಘಟವು ದ್ರವ್ಯವಾಗದಿದ್ದರೆ ಗುಣಾಶ್ರಯವಾಗದಿರಬೇಕಾದೀತು ಎಂಬ ತರ್ಕದಿಂದ ಘಟವು ದ್ರವ್ಯವೆಂದು ಸಿದ್ಧವಾಗುತ್ತದೆ.

**ಅತಾತ್ಪರ್ಯಕ್ಕೆ ಮೀಮಾಂಸಾ ಉದಾಹರಣೆ**

ಭಗವಂತನು ಸಕಲ ದೋಷದೂರನಲ್ಲ. ಕಾರ್ಯ ಕಾರಣ ಬದ್ಧೌತೌ (ವಿಶ್ವ ತೈಜಸರಿಬ್ಬರೂ ಕಾರ್ಯ ಕಾರಣಾತ್ಮಕ ದೋಷಗಳಿಂದ ಕೂಡಿದವರು) ಎಂಬ ಶ್ರುತಿಯ ಪ್ರಕಾರ ಅವನಿಗೆ ದೋಷಗಳಿವೆ. ಎಂಬ ಶಂಕೆಗೆ ಉತ್ತರ - ಭಗವಂತನ ಸರ್ವೋತ್ತಮತ್ವದಲ್ಲೇ ಸಕಲ ವೇದಗಳಿಗೆ ತಾತ್ಪರ್ಯವಿರುವುದರಿಂದ ಸರ್ವೋತ್ತಮತ್ವಕ್ಕೆ ವಿರುದ್ಧವಾದ್ದನ್ನು ಹೇಳುವ ವೇದವಾಕ್ಯಕ್ಕೆ ದೋಷವನ್ನು ಹೇಳುವುದರಲ್ಲಿ ತಾತ್ಪರ್ಯವಿಲ್ಲ. ಪೂರ್ವ ಮೀಮಾಂಸೆಯಲ್ಲೂ ಮುಖ್ಯವಾದ ಅರ್ಥಕ್ಕೆ ವಿರುದ್ಧವಾದದ್ದನ್ನು ಹೇಳುವ

'ಕೋ ಹಿ ವೇದ ಯದ್ಯಮುಷ್ಮಿನ್ ' ಎಂಬ ವಾಕ್ಯಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಅಂಗೀಕರಿಸಲಾಗಿದೆ ಎಂದು ಸುಧಾದಲ್ಲಿ ಹೇಳಿದ್ದಾರೆ. ಅದು ಹೀಗೆ -

ಯಾಗ ಶಾಲೆಯನ್ನು ನಿರ್ಮಿಸುವಾಗ ಅಲ್ಲಲ್ಲಿ ಹೊಗೆ ಹೋಗಲು ಬೇಕಾದ ಕಿಟಕಿಗಳನ್ನು ನಿರ್ಮಿಸಬೇಕು. ಇಲ್ಲದಿದ್ದರೆ ಯಾಗ ಮಾಡುವ ಋತ್ವಿಜರುಗಳಿಗೆ ಬಹಳ ಕಷ್ಟವಾಗುತ್ತದೆ. ಕೋ ಹಿ ವೇದ ಯದ್ಯುಷ್ಮಿನ್ ಲೋಕೇಽಸ್ತಿ ನ ವಾ (ಪರಲೋಕದಲ್ಲಿ ಸುಖವಿದೆಯೋ ಇಲ್ಲವೋ ಯಾರಿಗೆ ಗೊತ್ತು) ಈ ಜನ್ಮದಲ್ಲಿ ಕಷ್ಟಪಡುವುದು ಬೇಡ ಎಂದು ಈ ವಾಕ್ಯ ಹೇಳುತ್ತದೆ.

ಯಾಗ ಮಾಡುವುದೇ ಸ್ವರ್ಗಕ್ಕಾಗಿ. ಇಲ್ಲದಿದ್ದರೆ. ಯಾಗವೇ ವ್ಯರ್ಥವಾಗುತ್ತದೆ. ಆದ್ದರಿಂದ ಸ್ವರ್ಗವಿದೆಯೆಂದು ನಿಶ್ಚಯಿಸಿಕೊಂಡೇ ಮಾಡುವ ಈ ಯಾಗ ಸಂದರ್ಭದಲ್ಲಿ ಬರುವ ಈ ವಾಕ್ಯಕ್ಕೆ ಸ್ವರ್ಗವಿಲ್ಲವೆಂಬುದೇ ಅಭಿಪ್ರೇತವಾಗಲು ಸಾಧ್ಯವಿಲ್ಲ. ಆದ್ದರಿಂದ ಸುಮ್ಮನೇ ಕಷ್ಟಪಡಬಾರದೆಂಬುದರಲ್ಲಿಯೇ ಈ ವಾಕ್ಯಕ್ಕೆ ತಾತ್ಪರ್ಯವೆಂದು ನಿಶ್ಚಯವಾಗುತ್ತದೆ. ಹೀಗೆ ಬ್ರಹ್ಮ ಜಿಜ್ಞಾಸೆಯಲ್ಲೂ ಅಂಗೀಕರಿಸಬೇಕು.

**ನಿರಾಕಾಂಕ್ಷತ್ವ ಲಕ್ಷಣ**

ನಿರಾಕಾಂಕ್ಷಪದಾನ್ಯೇವ ವಾಕ್ಯಮಿತ್ಯುಚ್ಯತೇ ಬುಧೈಃ (ನಿರಾಕಾಂಕ್ಷವಾದ ಪದಗಳೇ ವಾಕ್ಯವೆಂದು ಹೇಳಲ್ಪಡುತ್ತವೆ) ಎಂಬ ವಾಕ್ಯ ಲಕ್ಷಣಕ್ಕೆ ಗೌರಶ್ವಃ ಪುರುಷೋ ಹಸ್ತೀ (ಆಕಳು, ಕುದುರೆ, ಮನುಷ್ಯ ಆನೆ) ಮುಂತಾದ ಪದಗಳಲ್ಲಿ ಅತಿವ್ಯಾಪ್ತಿ ಬರದಿರಲು ನಿರಾಕಾಂಕ್ಷ ಎಂದು ಹೇಳಲಾಗಿದೆ. ಒಂದು ವಾಕ್ಯದಲ್ಲಿ ಎಷ್ಟು ಪದಗಳಿವೆಯೋ ಅವುಗಳಿಗೆ ಪರಸ್ಪರ ಆಕಾಂಕ್ಷಾ ಇರಬೇಕು. ಮತ್ತು ವಾಕ್ಯದ ಹೊರಗಿನ ಪದಗಳ ಜೊತೆಗೆ ಆಕಾಂಕ್ಷಾ ಇರಬಾರದು. ಇದೇ ನಿರಾಕಾಂಕ್ಷತ್ವ, ಆದ್ದರಿಂದ ಗೌರಶ್ವ .. ಎಂಬಲ್ಲಿ ಪದಗಳಿಗೆ ಪರಸ್ಪರ ಆಕಾಂಕ್ಷಾ ಇಲ್ಲವಾದ್ದರಿಂದ ಅದು ನಿರಾಕಾಂಕ್ಷವಾಗುವುದಿಲ್ಲ.

'ಜೈಮಿನಿಯ ಅರ್ಥೈಕತ್ವಾತ್ ಏಕಂ ವಾಕ್ಯಂ, ಸಾಕಾಂಕ್ಷಂ ಚೇದ್ವಿಭಾಗೇ ಸ್ಯಾತ್ 'ಎಂಬ ಸೂತ್ರದಲ್ಲಿ ಒಂದು ವಿಷಯ ಪ್ರತಿ ಪಾದನೆ ಮಾಡುವ ಪದಗಳು ಸೇರಿ ಒಂದು ವಾಕ್ಯವೆನಿಸುತ್ತವೆ. ಅದರಲ್ಲಿ ಯಾವುದಾದರೂ

ಪದವನ್ನು ತೆಗೆದರೆ ಉಳಿದ ಪದಗಳ ಆಕಾಂಕ್ಷೆ ಹಾಗೇ ಉಳಿಯುತ್ತದೋ, ಮತ್ತು ಯಾವುದನ್ನು ಹಾಕಿದರೆ ಉಳಿದ ಪದಗಳು ನಿರಾಕಾಂಕ್ಷವಾಗುತ್ತವೋ ಅದೇ ವಾಕ್ಯ. ಎಂದು ನಿರಾಕಾಂಕ್ಷತ್ವಲಕ್ಷಣ ಹೇಳಿದ್ದಾರೆ.

**ಧ್ಯಾನ ಸಮಾಧ್ಯಾದಿಗಳ ಲಕ್ಷಣ**

ಸೋಪಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸ ಸ್ವರೂಪಿಣೀ ।
ಧ್ಯಾನ ರೂಪಾ ಪರಾ ಚೈವ ತದಂಗಂ ಧಾರಣಾದಿಕಂ ॥

(ಬ್ರಹ್ಮನ ಉಪಸನೆಯು ಎರಡು ವಿಧ. ಒಂದು ಶಾಸ್ತ್ರಾಭ್ಯಾಸ ರೂಪ. ಇನ್ನೊಂದು ಧ್ಯಾನರೂಪ. ಈ ಧ್ಯಾನಕ್ಕೇ ಧಾರಣಾದಿಗಳು ಅಂಗವಾಗಿವೆ) ಎಂಬ ಅನುವ್ಯಾಖ್ಯಾನದಲ್ಲಿ ಧ್ಯಾನರೂಪ ಉಪಾಸನೆಯನ್ನು ಹೇಳಿದ್ದಾರೆ. ಇಲ್ಲಿ ಧ್ಯಾನದ ಜೊತೆಗೆ ಸಮಾಧಿಯನ್ನು ಇಟ್ಟುಕೊಳ್ಳಬೇಕೆಂದು ಸುಧಾದಲ್ಲಿ ಹೇಳಿದ್ದಾರೆ.

ಧ್ಯಾನ ಸಮಾಧಿಗಳು ಹೆಚ್ಚಾಗಿ ಒಂದೇ ರೀತಿಯಲ್ಲಿರುತ್ತವೆ. ಆದ್ದರಿಂದ ಅನುವ್ಯಾಖ್ಯಾನದಲ್ಲಿ ಸಮಾಧಿಯನ್ನು ಪ್ರತ್ಯೇಕವಾಗಿ ಹೇಳಿಲ್ಲ.

ಧ್ಯಾನವೆಂದರೆ ಪ್ರಯತ್ನ ಪೂರ್ವಕ ಅಖಂಡವಾಗಿ ಭಗವಂತನ ಸ್ಮರಣೆ. (ಒಂದು ಕ್ಷಣವೂ ಬೇರೆ ಕಡೆ ಹೋಗಬಾರದು) ಸಮಾಧಿಯೆಂದರೆ ಬಹಳ ಕಾಲದ ಅಭ್ಯಾಸದಿಂದ ಅನಾಯಾಸವಾಗಿ ಪ್ರಾಪ್ತವಾಗುವ ಧ್ಯಾನ. ಸ್ವಲ್ಪ ಸ್ವಲ್ಪ ಬೇರೆ ಕಡೆ ಮನಸ್ಸು ಹೋಗುತ್ತ ಮಾಡುವ ಭಗವಂತನ ಖಂಡ ಸ್ಮೃತಿಯೇ ಧಾರಣಾ. ಬೇರೆ ಐಹಿಕ ಪದಾರ್ಥಗಳ ಕಡೆ ಇಂದ್ರಿಯಗಳು ಹೋಗದಂತೆ ತಡೆಯುವುದೇ ಪ್ರತ್ಯಾಹಾರ. ಆಸನವೆಂದರೆ ಪದ್ಮಾನಸ ವೀರಾಸನ ಮುಂತಾದ ಧ್ಯಾನದ ಬೇರೆ ಬೇರೆ ಆಸನಗಳು.

**ಮೂರನೇ ಅಧ್ಯಾಯ ಮೂರನೇ ಪಾದನ್ಯಾಯಮಾಲಾ**

**ಅಪೃಥಗ್ಗ್ರುಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ ।**
**ವಿಶೇಷದರ್ಶನಂ ಕಾರ್ಯಲೋಪೋ ನಾನೋಕ್ತಿರಾಶುತಾ ।**
**ವಿಭ್ರಮೋಽಪಾಕೃತಿರ್ಲಿಂಗಂ ಅನವಸ್ಥಾ ವಿಶೇಷಿತಾ ।**
**ಅಪ್ರಯೋಜನತಾ ಚಾತಿ ಪ್ರಸಂಗೋಽದೂರ ಸಂಶ್ರಯಃ ।**
**ವಿಶಿಷ್ಟಕಾರಣಂ ಚೇಷ್ಟಾ ದೃಷ್ಟ ವೈರೂಪ್ಯಮುನ್ನತಿಃ ।**

ಅನುಕ್ತಿರಪ್ರಯತ್ನತ್ವಂ ದೃಢಬಂಧ ಪರಾಭವೌ ।
ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾನಿರ್ಣಯೋ ಭ್ರಮಃ ।
ವಿಶೇಷದರ್ಶಿತಾಲಾಪೌ ಗುಣಸಾಮ್ಯಂ ಪೃಥಗ್ದೃಶಿಃ ।
ಅಗಮ್ಯ ವರ್ತ್ಮ ಸಂಧಾನಮಿಷ್ಟಂ ಫಲಮಕಲ್ಪನಾ ।
ಶುದ್ಧ ವೈರೂಪ್ಯ ಮಂಗತ್ವಮವಿಶೇಷದೃಶಿಃ ಕ್ರಿಯಾ ।
ಯುಕ್ತಯಃ ಪೂರ್ವಪಕ್ಷಸ್ಥಾಃ ..................

..........................ಸುಜ್ಞೇಯತ್ವಂ ವಿಧಿಕ್ರಿಯಾ ।
ಮಾಹಾತ್ಮ್ಯಮಲ್ಪಶಕ್ತಿತ್ವಂ ಯಥಾಯೋಗ್ಯ ಫಲಂ ಭವಃ ।
ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।
ಯಥಾಶಕ್ತಿ ಕ್ರಿಯಾ ಸಂಧಿಃ ಪ್ರಮಾಣಬಲಮಾನತಿಃ ।
ಕಾರಣಂ ಕಾರ್ಯವೈಶೇಷ್ಯಂ ಸ್ವಭಾವೋ ವಸ್ತು ದೂಷಣಮ್।
ಪ್ರತಿಕ್ರಿಯಾ ವಿರೋಧಶ್ಚ ಪ್ರತಿಸಂಧಿರನೂನತಾ ।
ಸಂಸ್ಕಾರಪಾಟವಂ ಸ್ವೇಚ್ಛಾ ನಿಯತಿರ್ವಸ್ತು ವೈಭವಮ್।
ವಿಶೇಷೋಕ್ತಿರಮಾನತ್ವಂ ಪ್ರಾಧಾನ್ಯಂ ಪ್ರೀತಿರಾಗಮಃ ।
ಸುಸ್ಥಿರತ್ವಂ ಕೃತಪ್ರಾಪ್ತಿಃ ಅನಾದಿಗುಣವಿಸ್ತರಃ ।
ಸಾಧನೋತ್ತಮತಾ ನಾನಾದೃಷ್ಟಿ ಶಿಷ್ಟಿರನೂನತಾ ।
ಅವಿಘ್ನತ್ವಾವಿರೋಧೌ ಚ ಗುಣವೈಶೇಷ್ಯಮಾಗಮಃ ।
ಸಿದ್ಧಾಂತ ನಿರ್ಣಯಾ ಹ್ಯೇತಾಃ ಯುಕ್ತಯೋಽವ್ಯಾಹತಾಃ ಸದಾ ॥

೧) ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ

ಈ ಅಧಿಕರಣದಲ್ಲಿ ಪೃಥಕ್ ದೃಷ್ಟಿಯು ಪೂರ್ವಪಕ್ಷಯುಕ್ತಿ ವೇದಗಳಲ್ಲಿ ಅನೇಕ ಶಾಖೆಗಳಿವೆ. ಒಂದೊಂದು ಶಾಖೆಯಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯವೂ ಬೇರೆ ಬೇರೆ. ಆದ್ದರಿಂದ ಆಯಾ ಶಾಖಿಗಳು ಮಾತ್ರ ತಮ್ಮ ತಮ್ಮ ಶಾಖೆಯಲ್ಲಿ ಹೇಳಲ್ಪಟ್ಟ ವಿಷಯವನ್ನು ತಿಳಿಯಬೇಕೆಂದು ನಿಯಮ. ಇಲ್ಲದಿದ್ದರೆ ಶಾಖಾಭೇದ ಅಯುಕ್ತವಾಗುತ್ತದೆ ಎಂದು ಪೂರ್ವಪಕ್ಷ.

ಸುಜ್ಞೇಯತ್ವವು ಇಲ್ಲಿ ಸಿದ್ಧಾಂತ ಯುಕ್ತಿ. ''ನಾನಾ ವೇದ್ಯೈರಿತಿಹಾಸ್ಯೈಃ ಪುರಾಣ್ಯೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ (ನಾನಾ ವೇದಗಳಿಂದ ಇತಿಹಾಸ ಪುರಾಣಗಳಿಂದ ಯುಕ್ತಿಗಳಿಂದಲೂ ಭಗವಂತನು

ತಿಳಿಯಲ್ಪಡಬೇಕು) ಎಂದು ಶ್ರುತಿ ಇರುವುದರಿಂದ ಸಮಗ್ರ ವೇದವನ್ನು ಅಧ್ಯಯನ ಮಾಡಬೇಕು. ಅಶಕ್ತರನ್ನು ದೃಷ್ಟಿಯಲ್ಲಿಟ್ಟುಕೊಂಡು ಶಾಖಾ ಭೇದಮಾಡಲಾಗಿದೆ. ಅಂತೂ ಯಥಾ ಶಕ್ತಿ ಅಧ್ಯಯನ ಮಾಡಬೇಕೆಂದು ಸಿದ್ಧಾಂತ.

೨) ಓಂ ಉಪಸಂಹಾರೋಽರ್ಥಾಭೇದಾತ್ ವಿಧಿಶೇಷವತ್ಸಮಾನೇ ಚ ಓಂ

ಅಶಕ್ಯತ್ವವು ಇಲ್ಲಿ ಪೂರ್ವಪಕ್ಷಯುಕ್ತಿ. ಸಕಲ ವೇದೋಕ್ತ ಗುಣಗಳನ್ನು ಉಪ ಸಂಹಾರ ಮಾಡಿ ಅಂದರೆ ಒಂದೇ ಬುದ್ಧಿಯಲ್ಲಿ ವಿಷಯೀಕರಿಸಿ ಧ್ಯಾನ ಮಾಡುವುದು ಅಶಕ್ಯವಾದ ಕಾರ್ಯ. ಕ್ರಮವಾಗಿ ಒಂದೊಂದೇ ಗುಣವನ್ನು ಧ್ಯಾನ ಮಾಡುವುದೂ ವಿಹಿತವಾಗಿಲ್ಲ. ಆದ್ದರಿಂದ ಎಲ್ಲಾ ವೇದಗಳಲ್ಲಿ ಹೇಳಲ್ಪಟ್ಟ ಗುಣಗಳನ್ನು ತಿಳಿಯುವುದು ಅನಾವಶ್ಯಕ ಎಂದು ಪೂರ್ವಪಕ್ಷ.

ವಿಧಿಕ್ರಿಯಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ .ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಃ ತೇನೈವ ವಿದ್ವಾನ್ ವಿಧಿ ಕೃನ್ನಾನ್ಯಥಾ ಸ್ಯಾತ್ (ಎಲ್ಲಾ ಗುಣಗಳನ್ನು ಯಾವಾಗಲೂ ಧ್ಯಾನ ಮಾಡಬೇಕು) ಎಂದು ಶ್ರುತಿಯಿರುವುದರಿಂದ ಸಕಲ ಗುಣಗಳನ್ನು ಉಪಸಂಹಾರ ಮಾಡಿಯೇ ಧ್ಯಾನ ಮಾಡಬೇಕು ಇಲ್ಲದಿದ್ದರೆ ವಿಧಿಲೋಪವಾಗುತ್ತದೆ ಅಥವಾ ಉಪಸಂಹಾರ ಮಾಡಿ ಧ್ಯಾನಮಾಡುವುದು ಅಶಕ್ಯವಾದ್ದರಿಂದ ಅನುಪಸಂಹಾರದಿಂದ ಮಾಡಬೇಕು ಎಂದು ಸಿದ್ಧಾಂತ. ಬೇರೆ ಬೇರೆ ಪ್ರಕರಣಗಳಿರುವುದೂ ಇದಕ್ಕೆ ಸಾಧಕ.

೩) ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ

ಅನಿರ್ಣೀತಿಃ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ. ಉಪಸಂಹಾರ ಮಾಡಿ ಧ್ಯಾನ ಮಾಡುವುದು ಮತ್ತು ಉಪಸಂಹಾರ ಮಾಡದೇ ಧ್ಯಾನ ಮಾಡುವುದು ಎರಡೂ ವಿರುದ್ಧವಾದ್ದರಿಂದ ಯಾವ ಅಧಿಕಾರಿಗಳಿಗೆ ಉಪಸಂಹಾರ ಧ್ಯಾನ ಯಾರಿಗೆ ಇಲ್ಲ ಎಂದು ನಿರ್ಣಯವಾಗದಿರುವ ಪ್ರಯುಕ್ತ ಎರಡು ವಿಧವಾದ ಧ್ಯಾನವೂ ಸರಿಯಲ್ಲ ಎಂದು ಪೂರ್ವಪಕ್ಷ.

ಮಾಹಾತ್ಮ್ಯ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ ಮಾಹಾತ್ಮ್ಯ ಎಂದರೆ ಯೋಗ್ಯತೆ ಎಂದರ್ಥ. ವ್ಯಕ್ತಿಗಳನ್ನು ನೋಡುವಾಗ ಏಕಕಾಲದಲ್ಲಿ ಎರಡೂ ಭಜಗಳು ಕಾಣುವಂತೆ ಯಾರ್ಯಾರಿಗೆ ಏಕಕಾಲದಲ್ಲಿ ಎಷ್ಟೆಷ್ಟು ಗುಣಗಳು ತೋರುತ್ತವೋ ಅವರವರು ತಮ್ಮ ಯೋಗ್ಯತಾನುಸಾರ ಉಪಸಂಹಾರ ಮಾಡಿ ಧ್ಯಾನಮಾಡಬೇಕು ಬ್ರಹ್ಮದೇವರಿಗೆ ಸರ್ವವೇದೋಕ್ತಗುಣಗಳೂ ಭಾಸವಾಗುತ್ತವೆ ಬೇರೆಯವರಿಗೆ ಯಥಾ ಯೋಗ್ಯವಾಗಿ ಭಾಸವಾಗುತ್ತವೆ ಆದ್ದರಿಂದ ಎರಡೂ ವಿಧದ ಧ್ಯಾನವನ್ನು ಹೇಳಿದ್ದು ಯುಕ್ತವೇ ಆಗಿದೆ.

೪) ಓಂ ಸರ್ವಾಭೇದಾದನ್ಯತ್ರೇಮೇ ಓಂ

ಈ ಅಧಿಕರಣದಲ್ಲಿಯೂ ಅನಿರ್ಣೀತಿಯೇ ಪೂರ್ವಪಕ್ಷಯುಕ್ತಿ. ಸರ್ವಗುಣೋಪಸಂಹಾರಕರಿಗೆ ಅಧಿಕ ಫಲ. ಅನುಪಸಂಹಾರದಿಂದ ಧ್ಯಾನ ಮಾಡುವವರಿಗೆ ಕಡಿಮೆ ಫಲ ಎಂದು ನಿರ್ಣಯವಿಲ್ಲ. ದೃಷ್ಟೆ ್ವವ ತಂ ಮುಚ್ಯತೇ ಎಂದು ಸಾಮಾನ್ಯವಾಗಿ ದರ್ಶನದಿಂದ ಮುಕ್ತಿಯನ್ನು ಹೇಳಿದ್ದಾರೆ. ಆದ್ದರಿಂದ ಫಲಾಧಿಕ್ಯವಿಲ್ಲದ್ದರಿಂದ ಸರ್ವಗುಣೋಪಸಂಹಾರ ಬೇಡ ಎಂದು ಪೂರ್ವಪಕ್ಷ.

ಮಾಹಾತ್ಮ್ಯವೇ ಇಲ್ಲಿಯೂ ಸಿದ್ಧಾಂತ ಯುಕ್ತಿ . ಸರ್ವಗುಣೋಪ ಸಂಹಾರಕತ್ವ ರೂಪ ಮಹಿಮೆಯಿಂದಲೇ ಅಂತಹ ಸಾಧಕರಿಗೆ ಅಧಿಕಫಲವಿದೆಯೆಂದು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಸರ್ವಗುಣೋಪ ಸಂಹಾರ ವಿಧಾನವೇ ವ್ಯರ್ಥವಾಗುತ್ತದೆ.

೫) ಓಂ ಆನಂದಾದಯಃ ಪ್ರಧಾನಸ್ಯ ಓಂ

ಇಲ್ಲಿ ಸಮುಚ್ಚಯ ಎಂಬುದು ಪೂರ್ವಪಕ್ಷಯುಕ್ತಿ . ಯಾವ ಯಾವ ಸಾಧಕರು ಎಷ್ಟೆಷ್ಟು ಮತ್ತು ಯಾವ ಯಾವ ಗುಣಗಳನ್ನು ಉಪಾಸನೆ ಮಾಡಬೇಕೆಂದು ನಿರ್ಣಾಯಕಪ್ರಮಾಣವಿಲ್ಲ. ಸ್ವೇಚ್ಛೆಯಿಂದ ಉಪಾಸನೆಯನ್ನು ಹೇಳಿದರೆ ಗುಣಸಮುಚ್ಚಯ ಮಾಡುವಾಗ ತನ್ನ ಉಪಾಸನೆಗೆ ಯೋಗ್ಯ ಮತ್ತು ಅಯೋಗ್ಯವಾದ ಗುಣಗಳ ಸಮುಚ್ಚಯವೂ ಆಗುತ್ತದೆ. ಆದ್ದರಿಂದ ಧ್ಯಾನ ಯುಕ್ತವಲ್ಲ ಎಂದು ಪೂರ್ವಪಕ್ಷ.

ಇಲ್ಲಿ ಅಲ್ಪಶಕ್ತಿತ್ವ ಎಂಬುದು ಸಿದ್ಧಾಂತ ಪ್ರಾಪಕಯುಕ್ತಿ. ಮನುಷ್ಯರು ಅಲ್ಪಶಕ್ತರಾದ್ದರಿಂದ ಬ್ರಹ್ಮನು '' ಸತ್ ಚಿತ್ ಆನಂದ ಆತ್ಮ '' ಎಂಬುದಾಗಿ ಅವನ ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು. ಸತ್ ಎಂದು ಮಾಡುವುದರಿಂದ ಜೀವನಿಗೆ ಜನನಾದಿದೋಷರಾಹಿತ್ಯವು, ಚಿತ್ ಎಂಬ ಉಪಾಸನೆಯಿಂದ ಜ್ಞಾನವು, ಆನಂದ ಎಂಬ ಉಪಾಸನೆಯಿಂದ ಆನಂದವು ಮತ್ತು ಆತ್ಮ ಎಂಬ ಉಪಾಸನೆಯಿಂದ ಸ್ವಾವರನಿಯಾಮಕತ್ವವೂ ಲಭಿಸುತ್ತದೆ. ಅಧಿಕ ಗುಣೋಪಾಸನೆಯ ಶಕ್ತಿ ಇಲ್ಲವಾದ್ದರಿಂದ ಅವುಗಳನ್ನು ಉಪಾಸನೆ ಮಾಡಕೂಡದೆಂದು ನಿರ್ಣಯಿಸಲು ಪ್ರಮಾಣವಿರುವುದರಿಂದ ಧ್ಯಾನವು ಯುಕ್ತವಾಗಿದೆ.

೬) ಓಂ ಪ್ರಿಯಶಿರಸ್ತ್ವಾದ್ಯ ಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ

ವಿಷೇಷದರ್ಶನವು ಇಲ್ಲಿ ಸಿದ್ಧಾಂತ ಯುಕ್ತಿ - ವಿಶೇಷ ದರ್ಶನ ಎಂದರೆ ವಿಶೇಷತ್ವ ದರ್ಶನ ಎಂದರ್ಥ. ಭಗವಂತನ ಪ್ರಿಯ ಶಿರಸ್ತ್ವಾದಿ ಗುಣಗಳು ಆನಂದವಿಶೇಷ ರೂಪವಾಗಿವೆ. ಆದ್ದರಿಂದ ಎಲ್ಲರೂ ಅವುಗಳನ್ನು ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಯಥಾಯೋಗ್ಯ ಫಲ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ . ಪ್ರಿಯ ಶಿರಸ್ತ್ವಾದಿ ಗಳಿಗಿರುವಂತೆ ಎಲ್ಲ ಗುಣಗಳಿಗೂ ಆನಂದಾದಿ ನಾಲ್ಕು ಗುಣಗಳ ವಿಶೇಷ ರೂಪತ್ವವಿರುವುದರಿಂದ ಎಲ್ಲವನ್ನೂ ಉಪಾಸನೆ ಮಾಡುವ ಪ್ರಸಂಗ ಬರುತ್ತದೆ. ಆದರೆ ಅಶಕ್ಯವಾದುದರಿಂದ ಅದು ಅಸಾಧ್ಯ. ಆದ್ದರಿಂದ ಯೋಗ್ಯ ಗುಣೋಪಾಸನೆಗೇನೇ ಫಲವನ್ನು ಹೇಳಿದ್ದರಿಂದ ಮನುಷ್ಯರು ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಫಲತಾರತಮ್ಯ ನಿರ್ವಾಹವೂ ಅಶಕ್ಯವಾದೀತು.

೭) ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ

ಕಾರ್ಯಲೋಪ ಎಂಬುದು ಈ ಅಧಿಕರಣದ ಪೂರ್ವಪಕ್ಷ ನ್ಯಾಯ.

ಮನುಷ್ಯರಿಗೆ ನಾಲ್ಕು ಗುಣ ಉಪಾಸನೆಯಿಂದಲೇ ಸರ್ವಾಭೀಷ್ಟಸಿದ್ಧಿ ಯಾಗುವಾಗ ದೇವತೆಗಳು ಬಹುಗುಣಗಳನ್ನು ಯಾಕೆ ಉಪಸಂಹಾರ ಮಾಡಬೇಕು. ಅದರಿಂದ ಅವರಿಗೆ ಫಲವಿಲ್ಲ. ಮನುಷ್ಯರಿಗೆ ನಾಲ್ಕು ಗುಣಗಳ

ಉಪಸಂಹಾರಕ್ಕೆ ಪ್ರಮಾಣವಿದೆ. ಬ್ರಹ್ಮನಿಗೆ ಸಮಸ್ತ ಗುಣೋಪ ಸಂಹಾರಕ್ಕೆ ಪ್ರಮಾಣವಿದೆ. ದೇವತೆಗಳ ವಿಷಯದಲ್ಲಿ ಇಲ್ಲ. ಆದ್ದರಿಂದ ಬಹುಗುಣೋಪಾಸನ ರೂಪಕಾರ್ಯಕ್ಕೆ ಲೋಪ ಉಂಟಾಗುತ್ತದೆ. ಎಂದು ಪೂರ್ವಪಕ್ಷ.

ಭವಃ (ದೇವತೆಗಳಿಗೆ ಇಂತಿಷ್ಟು ಗುಣಗಳ ಉಪಾಸನೆ ಎಂಬ ನಿಯಮಸದ್ಭಾವ) ವೇ ಸಿದ್ಧಾಂತ ಯುಕ್ತಿ.

ಯೋಯೋ ಭಾವೋ ದೇವತಾನಾಂ
ವಿಮುಕ್ತೌ ತತ್ತತ್ಪ್ರಾಪ್ತೌ ಸುಗುಣಾ ನೀಶಿತುಶ್ಚ ।
ಬ್ರಹ್ಮಾऽऽದಿಶತ್ಯಥ ತಾಂಸ್ತೇ ವಿಚಿಂತ್ಯ
ತತ್ತದ್ಭಾವಂ ಪ್ರಾಪ್ನುವಂತ್ಯಾತ್ಮಶಕ್ತ್ಯಾ ॥

(ದೇವತೆಗಳಿಗೆ ವಿಮುಕ್ತಿಯಲ್ಲಿ ಉಂಟಾಗುವ ಉತ್ಕರ್ಷವನ್ನು ತಿಳಿದು ಆದಕ್ಕೆ ಅನುಗುಣವಾಗಿ ಬ್ರಹ್ಮದೇವರು ಅವರಿಗೆ ಭಗವಂತನ ಗುಣಗಳನ್ನು ಉಪದೇಶಿಸುತ್ತಾರೆ. ದೇವತೆಗಳು ಅವುಗಳನ್ನು ಉಪಾಸನೆ ಮಾಡಿ ಮುಕ್ತಿಯನ್ನು ಪಡೆಯುತ್ತಾರೆ. ) ಎಂಬ ಪ್ರಮಾಣಾನುಸಾರವಾಗಿ ನಿಯಮವಿರುವುದರಿಂದ ಕಾರ್ಯಲೋಪವಿಲ್ಲ.

೮) ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ

ಈ ಅಧಿಕರಣದಲ್ಲಿ ನಾನೋಕ್ತಿಯೇ ಪೂರ್ವಪಕ್ಷ ಬೀಜ. ಉಪಾಸನೆಗೋಸ್ಕರ ವೇದವು ಗುಣಗಳನ್ನು ಹೇಳುವುದಾದರೆ ಒಂದೊಂದು ಶಾಖೆಯಲ್ಲಿ ಒಂದೊಂದು ಗುಣಗಳನ್ನು ಹೇಳುವುದರ ಬದಲು ಏಕತ್ರ ಎಲ್ಲವನ್ನು ಹೇಳಬಹುದಾಗಿತ್ತು ಹಾಗೆ ಹೇಳಿಲ್ಲವಾದ್ದರಿಂದ ಉಪಾಸನೆಯ ಉದ್ದೇಶ್ಯವಿಲ್ಲ ಎಂದು ಪೂರ್ವಪಕ್ಷ.

ಫಲಸಾಮ್ಯವು ಇಲ್ಲಿಸಿದ್ಧಾಂತ ಯುಕ್ತಿ. ಬೇರೆ ಬೇರೆ ಕಡೆ ಹೇಳಿದ ಗುಣಗಳನ್ನು ಉಪಸಂಹಾರ ಮಾಡಿ ಧ್ಯಾನ ಮಾಡಿದ ಪ್ರಯತ್ನಕ್ಕೆ ಸಮಾನವಾದ ವಿಶೇಷ ಫಲವು ಮುಕ್ತಿಯಲ್ಲಿ ದೊರೆಯುತ್ತದೆ. ಆದ್ದರಿಂದ ಅಂತಹ ಫಲಕ್ಕಾಗಿ ಆ ಪ್ರಯತ್ನ ಮಾಡಲಿ ಎಂಬ ಉದ್ದೇಶದಿಂದ ವೇದದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಗುಣಗಳನ್ನು ಹೇಳಲಾಗಿದೆ.

೯) ಓಂ ಆತ್ಮಗೃಹೀತಿರಿತರವತ್ತದುತ್ತರಾತ್ ಓಂ

ಈ ಅಧಿಕರಣದಲ್ಲಿ ಆಶುತಾ (ಶೀಘ್ರತ್ವ) ಎಂಬುದು ಪೂರ್ವಪಕ್ಷ ಯುಕ್ತಿ.

'ಆತ್ಮೇತ್ಯೇವೋಪಾಸೀತ' ಎಂದು ಶ್ರುತಿ ಇರುವುದರಿಂದ ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡಿದ್ದರಿಂದ ಶೀಘ್ರದಲ್ಲಿ ಅಪರೋಕ್ಷವಾಗುವ ಪ್ರಯುಕ್ತ ಆತ್ಮತ್ವಗುಣ ಒಂದನ್ನೇ ಉಪಾಸನೆ ಮಾಡಬೇಕೆಂದು ಪೂರ್ವಪಕ್ಷ.

ವಿಶೇಷವು ಸಿದ್ಧಾಂತ ಯುಕ್ತಿ. ಆನಂದ ಚಿತ್ತ್ವ ಸತ್ತ್ವಗಳೂ ಕೂಡ ಆತ್ಮ ಶಬ್ದಾರ್ಥ ವಿಶೇಷವೇ ಆಗಿರುವುದರಿಂದ 'ಆತ್ಮೇತ್ಯೇವ ಉಪಾಸೀತ ' ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡಬೇಕೆಂಬುದಕ್ಕೆ ಸಚ್ಚಿದಾನಂದ ಆತ್ಮ ಎಂದು ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕೆಂದೇ ಅರ್ಥ.

೧೦) ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ

ವಿಭ್ರಮಃ ಎಂಬುದು ಇಲ್ಲಿ ಪೂರ್ವ ಪಕ್ಷ ಯುಕ್ತಿ. ವ್ಯಾಪ್ತತ್ವ ಮುಂತಾದ ಎಲ್ಲ ಗುಣಗಳಿಗೂ ಆತ್ಮ ಶಬ್ದವು ವಾಚಕವಾದ್ದರಿಂದ ಎಲ್ಲರೂ ಎಲ್ಲ ಗುಣಗಳನ್ನು ಉಪಾಸನೆ ಮಾಡಬೇಕೆಂದು ಅರ್ಥವಾಗುವುದರಿಂದ ಚತುರ್ಗುಣೋಪಾಸಕನಿಗೆ ಗೊಂದಲ ಉಂಟಾಗಿ ನಿರ್ಣಯವಾಗುವುದಿಲ್ಲ ಎಂದು ಪೂರ್ವಪಕ್ಷ.

ಗುಣಾಧಿಕ್ಯವು ಇಲ್ಲಿ ಸಿದ್ಧಾಂತ ಯುಕ್ತಿ. ಆತ್ಮ ಶಬ್ದವು ಸರ್ವಗುಣ ವಾಚಕವಾಗಿದ್ದರೂ ಅಧಿಕಗುಣ ಉಳ್ಳವರಿಗೆ ಮಾತ್ರ ಭಗವಂತನ ಅಧಿಕ ಗುಣಗಳನ್ನು ಬೋಧಿಸುತ್ತದೆ ಹೊರತು ಎಲ್ಲರಿಗೂ ಅದು ಅಧಿಕ ಗುಣಗಳನ್ನು ಬೋಧಿಸುವುದಿಲ್ಲ. ಅವರವರ ಯೋಗ್ಯತಾನುಸಾರ ಬೋಧಿಸುತ್ತದೆ. ಆದ್ದರಿಂದ ವಿಭ್ರಮಕ್ಕೆ ಅವಕಾಶವಿಲ್ಲ.

೧೧) ಓಂ ಕಾರ್ಯಾಖ್ಯಾನಾದಪೂರ್ವಂ ಓಂ

ಅಪಾಕೃತಿಯು ಇಲ್ಲಿ ಪೂರ್ವ ಪಕ್ಷ ಯುಕ್ತಿ -

ಭಗವಂತನಲ್ಲಿರುವ ಅಲೌಕಿಕ ಗುಣಗಳನ್ನು (ಅವುಗಳು ಅಲೌಕಿಕವಾದ್ದರಿಂದ) ಧ್ಯಾನ ಮಾಡಲು ಬರುವುದಿಲ್ಲ. ಲೌಕಿಕ ಗುಣಗಳ ಧ್ಯಾನ ಅಲೌಕಿಕ ಭಗವಂತನಲ್ಲಿ ಕೂಡುವುದಿಲ್ಲ. ಆದ್ದರಿಂದ ಭಗವಂತನ ಗುಣೋಪಾಸನೆಯೇ ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಪ್ರಾಧಾನ್ಯವು ಸಿದ್ಧಾಂತ ಯುಕ್ತಿ. ಲೌಕಿಕಗುಣಗಳಲ್ಲಿ ಪ್ರೇಮಾಸ್ಪದತ್ವವಿರುವಂತೆ ಅಲೌಕಿಕ ಗುಣಗಳಲ್ಲಿಯೂ ಪ್ರೇಮಾಸ್ಪದತ್ವ ಧರ್ಮವು ಸಮಾನ ವಾದ್ದರಿಂದ ಅಂತಹ ಪ್ರೇಮಾಸ್ಪದತ್ವ ಎಂಬ ಸದೃಶವಾದ ಧರ್ಮದ ಮೂಲಕ ಅಲೌಕಿಕ ಗುಣಗಳ ಜ್ಞಾನವೂ ಉಪದೇಶದಿಂದ ಕೂಡುತ್ತದೆ ಆದ್ದರಿಂದ ಉಪಾಸನೆ ಮಾಡಲೇಬೇಕು. ಏಕೆಂದರೆ ಧ್ಯಾನವು ಅಲೌಕಿಕವಾದ ಮೋಕ್ಷರೂಪವಾದ ಕಾರ್ಯ ಜನಕವಾದ್ದರಿಂದ ಅಂತಹ ಅಲೌಕಿಕ ಫಲಕ್ಕೆ ಅಲೌಕಿಕ ಗುಣ ಧ್ಯಾನವೇ ಪ್ರಧಾನ ಸಾಧನವಾಗಿದೆ.

೧೨) ಓಂ ಸಮಾನ ಏವಂ ಚಾಭೇದಾತ್ ಓಂ

ಲಿಂಗವು ಈ ಅಧಿಕರಣದಲ್ಲಿ ಪೂರ್ವಪಕ್ಷಯುಕ್ತಿ. ಬ್ರಹ್ಮ ದೇವರಿಗೂ ಮತ್ತು ಸರಸ್ವತೀದೇವಿಯರಿಗೂ ವೇದೋಕ್ತಸಮಸ್ತಗುಣೋಪಸಂಹಾರ ವಿದೆ. ನಾರಾ ಯಣನು ವಿಚಿತ್ರಕ್ರಿಯಾಶಾಲಿ ಎಂದು ಸಾಮಾನ್ಯವಾಗಿ ಸಮಸ್ತ ಕ್ರಿಯೋಪ ಸಂಹಾರವೂ ಇದೆ. ಆದರೆ ಮುಕ್ತಿಯಲ್ಲಿ ಇಬ್ಬರಿಗೂ ಸ್ಥಾನೈಕ್ಯ ರೂಪ ಫಲಸಾಮ್ಯ ಇದ್ದರೂ ಗುಣತಾರತಮ್ಯವಿರುವ ಪ್ರಯುಕ್ತ ಫಲದಲ್ಲಿ ವಿಷಮತೆಯೂ ಇದೆ. ಈ ಸ್ಥಾನೈಕ್ಯ ಮತ್ತು ಗುಣತಾರತಮ್ಯ ರೂಪ ಲಿಂಗದಿಂದಾಗಿ ಮುಕ್ತಿಯಲ್ಲಿ ಉಪಾಸನಾನುಸಾರ ವಾಗಿ ಫಲ ದೊರೆಯುವುದಿಲ್ಲ ಎಂದು ಪೂರ್ವಪಕ್ಷ.

ಯಥಾಶಕ್ತಿ ಕ್ರಿಯಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ.

ಬ್ರಹ್ಮದೇವರು ಧ್ಯಾನ ಮಾಡುವ ಸಮಸ್ತ ಗುಣಗಳನ್ನು ಸರಸ್ವತೀ ದೇವಿಯರು ಧ್ಯಾನ ಮಾಡುತ್ತಾರೆ. ಅದರಿಂದಾಗಿ ಮುಕ್ತಿಯಲ್ಲಿ ಇಬ್ಬರಿಗೂ ಸ್ಥಾನೈಕ್ಯವಿದೆ. ಆದರೆ ಸರಸ್ವತೀದೇವಿಯರು ಸಾಮಾನ್ಯವಾಗಿ ಭಗವಂತನ ಕ್ರಿಯೆಗಳನ್ನು ಉಪಾಸನೆ ಮಾಡುತ್ತಾರೆ ಹೊರತು, ವಿಶೇಷವಾಗಿ ತ್ರಿವಿಕ್ರಮತ್ವ ಮೊದಲಾದುದನ್ನು ಧ್ಯಾನಿಸುವುದಿಲ್ಲ. ಬ್ರಹ್ಮದೇವರಾದರೂ ಧ್ಯಾನ

ಮಾಡುತ್ತಾರೆ ಎಂದು ಪ್ರಮಾಣವಿದೆ. ಆದ್ದರಿಂದ ಗುಣದಲ್ಲಿ ಅವರಿಬ್ಬರಿಗೆ ತಾರತಮ್ಯವಿದೆ. ಆದ್ದರಿಂದ ಸಾಧನಾನುಸಾರವಾಗಿ ಫಲವೆಂಬ ನಿಯಮಕ್ಕೆ ಭಂಗವಿಲ್ಲ.

೧೩) ಓಂ ನ ವಾವಿಶೇಷಾತ್ ಓಂ

ಅನವಸ್ಥಾ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ . ಆತ್ಮ ಶಬ್ದವು ಇಂತಿಂತಹ ಅಧಿಕಾರಿಗಳನ್ನು ಕುರಿತು ಇಷ್ಟಿಷ್ಟು ಗುಣಗಳಿಗೆ ವಾಚಕ ಎಂದು ವ್ಯವಸ್ಥೆ ಇಲ್ಲವಾದ್ದರಿಂದ ಆತ್ಮಶಬ್ದೋಕ್ತಗುಣಗಳನ್ನು ಉಪಾಸನೆ ಮಾಡುವುದು ಸರಿಯಲ್ಲ ಎಂದು ಪೂರ್ವಪಕ್ಷ.

ಸಂಧಿಯು ಇಲ್ಲಿ ಸಿದ್ಧಾಂತ ಯುಕ್ತಿ - ಸಂಧಿ ಎಂದರೆ ಅಭಿಸಂಧಿ. ಅಭಿಪ್ರಾಯ ಎಂದರ್ಥ. ಯಾವ ಯಾವ ಅಧಿಕಾರಿಗಳಿಗೆ ಎಷ್ಟೆಷ್ಟು ಗುಣಗಳನ್ನು ಉಪಾಸನೆ ಮಾಡಲು ಯೋಗ್ಯತೆ ಇದೆಯೋ ಆಯಾ ಅಧಿಕಾರಿಗಳನ್ನು ಕುರಿತು ಆತ್ಮ ಶಬ್ದವು ಅಷ್ಟಷ್ಟು ಗುಣಗಳನ್ನು ಮಾತ್ರ ತಿಳಿಸುತ್ತದೆಯೆಂದು ಅಭಿಪ್ರಾಯವಿರುವುದರಿಂದ ಆತ್ಮ ಶಬ್ದೋಕ್ತ ಗುಣಗಳನ್ನು ಉಪಾಸಿಸಬೇಕೆಂದು ಹೇಳಿದ್ದು ಸರಿಯಾಗಿದೆ.

೧೪) ಓಂ ಸಂಭೃತಿ ದ್ಯುವ್ಯಾಪ್ತ್ಯಪಿ ಚಾತಃ ಓಂ

ಅವಿಶೇಷಿತಾ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ.

ಮುಮುಕ್ಷುತ್ವ ಅಂದರೆ ಮೋಕ್ಷೇಚ್ಛೆ, ಇದು ಎಲ್ಲರಲ್ಲಿಯೂ ಅವಿಶೇಷವಾಗಿ ಅಂದರೆ ಸಾಮಾನ್ಯತಃ ಇರುವುದರಿಂದ ಮತ್ತು ಎಲ್ಲರಿಗೂ ಸ್ವಾಧಮರ ಪೋಷಣ ಮತ್ತು ಪ್ರಕಾಶವ್ಯಾಪ್ತಿ ಅಪೇಕ್ಷಿತವಾದ್ದರಿಂದ ಎಲ್ಲರೂ ಭಗವಂತನ ಸಂಭರಣ ಮತ್ತು ಪ್ರಕಾಶ ವ್ಯಾಪ್ತಿ ಇವುಗಳನ್ನೂ ಉಪಾಸಿಸಬೇಕೆಂದು ಪೂರ್ವ ಪಕ್ಷ.

ಪ್ರಮಾಣಬಲವು ಇಲ್ಲಿ ಸಿದ್ಧಾಂತ ಯುಕ್ತಿ. ''ಸತ್ಯೋ ಜ್ಞಾನಃ ಪರಮಾನಂದರೂಪಃ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ । ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತೇ'' (ಮನುಷ್ಯರು ಸಚ್ಚಿದಾನಂದ ಆತ್ಮ ಎಂದು ಮಾತ್ರ ಉಪಾಸನೆ ಮಾಡಬೇಕು. ದೇವತೆಗಳು ಬಹುಗುಣಗಳಿಂದ ಉಪಾಸನೆ ಮಾಡುತ್ತಾರೆ )ಎಂಬ

ಪ್ರಮಾಣದ ಬಲದಿಂದ ನಾಲ್ಕುಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು. ಪ್ರಕಾಶಮಾನನಾದ ಧರ್ಮಿಯಾದ ಭಗವಂತನ ಧ್ಯಾನದಿಂದಲೇ ಜೀವರಿಗೆ ಮುಕ್ತಿಯಲ್ಲಿ ಪ್ರಕಾಶಸಿದ್ಧವಾಗುತ್ತದೆ.

೧೫) ಓಂ ಪುರುಷ ವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ

ಅಪ್ರಯೋಜನತಾ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ . ಪರಮಾತ್ಮನಲ್ಲಿ ಬಹುಗುಣಗಳನ್ನು ಪ್ರತಿಪಾದನೆ ಮಾಡತಕ್ಕ ಪುರುಷಸೂಕ್ತಾದಿಗಳು ಇವೆ. ಅಲ್ಪ ಗುಣಗಳನ್ನೂ ಪ್ರತಿಪಾದಿಸುವ 'ಸತ್ಯಂ ಜ್ಞಾನಂ ಅನಂತಂ' ಇತ್ಯಾದಿ ವಾಕ್ಯಗಳೂ ಕಂಡು ಬರುತ್ತದೆ. ಆದ್ದರಿಂದ ಬೇರೆ ಬೇರೆ ಕಡೆಯಿಂದ ಗುಣಗಳನ್ನು ಉಪಸಂಹಾರ ಮಾಡುವುದು ವ್ಯರ್ಥ. ಮಹಾಗುಣೋಪಾಸಕನು ಪುರುಷ ಸೂಕ್ತಾದಿಗಳಲ್ಲಿರುವ ಬಹುಗುಣ ಗಳನ್ನು ಉಪಾಸನೆ ಮಾಡಲಿ. ಅಲ್ಪ ಗುಣೋಪಾಸಕನು ಸತ್ಯಂ ಇತ್ಯಾದಿ ಶ್ರುತಿಯಲ್ಲಿ ಹೇಳಿದ್ದನ್ನು ಉಪಾಸನೆ ಮಾಡಲಿ ಎಂದು ಪೂರ್ವಪಕ್ಷ.

ಆನತಿ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ. 'ಗುಣಾಃ ಸರ್ವೇ ಬ್ರಹ್ಮಣ್ಯೈವ ಹ್ಯುಪಾಸ್ಯಾಃ' (ಬ್ರಹ್ಮದೇವರು ಸಕಲ ಗುಣಗಳನ್ನು ಉಪಾಸನಾ ಮಾಡಬೇಕು )ಎಂದು ಪ್ರಮಾಣವಿರುವುದರಿಂದ ಯಾವ ಒಂದು ವಿದ್ಯೆಯಲ್ಲೂ ವಿಸ್ತಾರವಾಗಿ ಸಕಲ ಗುಣಗಳು ವರ್ಣಿತವಾಗಿಲ್ಲವಾದ್ದರಿಂದ ಅಂತಹ ಉಪಾಸಕರಿಗೆ ಸರ್ವಗುಣೋಪ ಸಂಹಾರವು ಅಗತ್ಯವಾಗಿದೆ. ಇತರ ದೇವತೆಗಳಿಗೆ ಒಂದೊಂದು ವಿದ್ಯೆಯಲ್ಲಿ ಬಹುಗುಣಗಳು ಲಬ್ಧವಾದರೂ ಅಭೀಷ್ಟ ಗುಣಗಳು ಇರುವುದಿಲ್ಲವಾದ್ದರಿಂದ ಬೇರೆ ಕಡೆಯಿಂದ ಉಪಸಂಹಾರ ಮಾಡಿ ಧ್ಯಾನ ಮಾಡಬೇಕು. ಅಂತೂ ಇತರ ಉಪಾಯ ವಿಲ್ಲವಾದ್ದದ್ದರಿಂದ ಉಪಸಂಹಾರವೇ (ಆನತ) ಪ್ರಾಪ್ತವಾಯಿತು. ಆದ್ದರಿಂದ ಉಪಸಂಹಾರ ಮಾಡಿಯೇ ಧ್ಯಾನಮಾಡಬೇಕು.

೧೬) ಓಂ ವೇಧಾದ್ಯರ್ಥಭೇದಾತ್ ಓಂ

ಈ ಅಧಿಕರಣದಲ್ಲಿಯೂ ಅಪ್ರಯೋಜನತಾ ಎಂಬುದು ಪೂರ್ವಪಕ್ಷಯುಕ್ತಿ .

ಶತ್ರುಗಳನ್ನು ಗಾಯಗೊಳಿಸುವುದು ತುಂಡರಿಸುವುದು ಇವೇ ಮೊದಲಾದ ಭಗವದ್ಗುಣಗಳ ಉಪಾಸನೆ ಮಾಡಿದರೆ ದುಷ್ಟನಿಗ್ರಹರೂಪ 'ಫಲ ಉಂಟಾಗುವು ದರಿಂದ, ಈ ಉಪಾಸನೆಯಿಂದ ಅಪ್ರಯೋಜನತಾ ಅಂದರೆ 'ಸಜ್ಜನರ ದ್ರೋಹ ರೂಪವಾದ ದುರ್ಜನರ ಪ್ರಯೋಜನದ ಅಭಾವವು' ಸಿದ್ಧಿಸುವುದರಿಂದ ಇದು ಎಲ್ಲರಿಗೂ ಅಪೇಕ್ಷಿತವಾದ್ದರಿಂದ ಈ ಗುಣಗಳನ್ನು ಎಲ್ಲರೂ ಉಪಾಸಿಸಬೇಕು. ಎಮದು ಪೂರ್ವಪಕ್ಷ.

ಇಲಿಯ್ಲೂ ಆನತಿಯೇ ಸಿದ್ಧಾಂತ ಯುಕ್ತಿ . ಆನತಿ ಎಂದರೆ ಪ್ರಾಪ್ತಿ. ಯತಿಗಳಿಗೂ ಉಪಾಸನೆಯು ಪ್ರಾಪ್ತವಾದ್ದರಿಂದ ಅವರಿಗೆ ಇಂತಹ ಉಪಾಸನೆಯು ನಿಷಿದ್ಧವಾದ್ದರಿಂದ ಈ ಗುಣಗಳು ಸರ್ವೋಪಾಸ್ಯವಲ್ಲ.

೧೭) ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದ ಸ್ತುತ್ಯುಪಗಾನವತ್ ತದುಕ್ತಂ ಓಂ

ಅತಿಪ್ರಸಂಗವು ಇಲ್ಲಿ ಪೂರ್ವಪಕ್ಷಯುಕ್ತಿ. ಮುಕ್ತಿಯಲ್ಲೂ ಉಪಾಸನೆ ಇರುವುದಾದರೆ ಅದರಿಂದ ಫಲ ಉಂಟಾಗುವ ಪ್ರಸಂಗವು ಬರುತ್ತದೆ. ಮತ್ತು ಅಲ್ಲಿಯವರೆಗೆ ಆ ಫಲವಿದ್ದಿಲ್ಲ ಎಂಬ ಕಾರಣದಿಂದಾಗಿ ಮೋಕ್ಷಕ್ಕೆ ಅಪೂರ್ಣತ್ವ ಪ್ರಸಂಗವೂ ಬರುತ್ತದೆ ಆದ್ದರಿಂದ ಮುಕ್ತಿಯಲ್ಲಿ ಉಪಾಸನೆ ಇಲ್ಲ.

ಕಾರಣವೆಂಬುದು ಇಲ್ಲಿ ಸಿದ್ಧಾಂತ ಯುಕ್ತಿ. ಮುಕ್ತಿಯಲ್ಲಿ ಉಪಾಸನೆಗೆ ವಿಧಿ ಇಲ್ಲ. ಫಲವೂ ಇಲ್ಲ. ಆದರೂ ಮೊದಲಿನಿಂದ ಉಪಾಸನೆ ಮಾಡುವ ಸ್ವಭಾವ ಇದ್ದದ್ದರಿಂದ ಮುಕ್ತಿಯಲ್ಲೂ ಸ್ವಭಾವದಿಂದಲೇ ಉಪಾಸನೆ ಮಾಡುತ್ತಾರೆ.

೧೮) ಓಂ ಛಂದತ ಉಭಯಾವಿರೋಧಾತ್ ಓಂ

ಅದೂರಸಂಶ್ರಯ ಎಂಬುದು ಪೂರ್ವಪಕ್ಷಯುಕ್ತಿ - ಮುಕ್ತನು ಉಪಾಸನಾ ಸ್ವಭಾವ ಉಳ್ಳವನಾದ್ದರಿಂದ ಮುಕ್ತಿಯಲ್ಲೂ ಉಪಾಸನಾ ಮಾಡುವಂತೆ, ಕರ್ಮಗಳನ್ನು ಮಾಡುವ ಶಕ್ತಿಯೂ ಅವನಲ್ಲಿ ಸನ್ನಿಹಿತವಾದ್ದರಿಂದ ಅವನು ಕರ್ಮಗಳನ್ನೂ ಮಾಡಲಿ ಎಂದು ಪೂರ್ವಪಕ್ಷ.

ಕಾರ್ಯವೈಶೇಷ್ಯವು ಇಲ್ಲಿ ಸಿದ್ಧಾಂತ ಯುಕ್ತಿ - ಉಪಾಸನಾ ರೂಪ ಕಾರ್ಯವು ವಿಶೇಷ ಕಾರ್ಯವಾದ್ದರಿಂದ ನಿತ್ಯವೂ ಮಾಡುತ್ತಿದ್ದುದರಿಂದ ಆ ಸ್ವಭಾವವು ಮುಕ್ತಿಯಲ್ಲಿ ಸನ್ನಿಹಿತವಾಗಿರುವಂತೆ ಕರ್ಮಕರಣಸ್ವಭಾವವು ಸನ್ನಿಹಿತವಾಗಿರುವುದಿಲ್ಲ. ಏಕೆಂದರೆ ಉಪಾಸನಾ ಸ್ವಭಾವದಷ್ಟು ಕರ್ಮಕರಣ ಸ್ವಭಾವವು ಪ್ರಚುರವಾದದ್ದಲ್ಲ. ಆದ್ದರಿಂದ ಮುಕ್ತಿಯಲ್ಲಿ ಕರ್ಮಕರಣಪ್ರಸಂಗವಿಲ್ಲ.

೧೯) ಓಂ ಅನಿಯಮಃ ಸರ್ವೇಷಾಮ-
ವಿರೋಧಾಚ್ಛಬ್ದಾನುಮಾ ನಾಭ್ಯಾಂ ಓಂ

ವಿಶಿಷ್ಟಕಾರಣವು ಇಲ್ಲಿ ಪೂರ್ವಪಕ್ಷ ಯುಕ್ತಿ . ಭಗವಂತನ ಸರ್ವಗುಣಗಳನ್ನು ಉಪಾಸನೆ ಮಾಡಲು ಕೆಲವರಿಗೆ ಅಯೋಗ್ಯತೆ ಎಂದಿರುವಂತೆ ಜ್ಞಾನಿಗಳಲ್ಲೂ ಕೂಡ ಕೆಲವರಿಗೆ ಮೋಕ್ಷವನ್ನು ಹೊಂದಲು ಅಯೋಗ್ಯತೆ ಎಂಬ ವಿಶಿಷ್ಟ ಕಾರಣದಿಂದಾಗಿ ಕೆಲವರಿಗೆ ಮೋಕ್ಷವಾಗುವುದಿಲ್ಲ. ಎಂದು ಪೂರ್ವಪಕ್ಷ.

ಸ್ವಭಾವ ಎಂಬುದು ಇಲ್ಲಿ ಸಿದ್ಧಾಂತ ಸ್ಥಾಪಕ ಯುಕ್ತಿ. ಜ್ಞಾನಿಗಳಿಗೆ ನಿಯಮೇನ ಮೋಕ್ಷ ಕೊಡುವುದು ಭಗವಂತನ ಸ್ವಭಾವ. ಯಾರಾದರೂ ಮೋಕ್ಷಕ್ಕೆ ಅಯೋಗ್ಯರಾಗಿದ್ದರೆ ಅವರಿಗೆ ಜ್ಞಾನವನ್ನೇ ಉಂಟು ಮಾಡುವುದಿಲ್ಲ. ಆದರೆ ಜ್ಞಾನಿಗಳಾದ ಮೇಲೆ ಅವರಿಗೆ ಮೋಕ್ಷ ಇಲ್ಲವೆಂದಾಗುವುದಿಲ್ಲ.

೨೦) ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ

ಚೇಷ್ಟಾ (ಪ್ರಯತ್ನ) ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ . ಮುಕ್ತಿಯಲ್ಲಿರುವ ಬ್ರಹ್ಮಾದಿಗಳ ಆನಂದ ತಾರತಮ್ಯವನ್ನು ನಿರ್ವಾಹ ಮಾಡಲು ಉಪಾಸಕರಲ್ಲಿ ಪ್ರಯತ್ನ ತಾರತಮ್ಯವನ್ನು ಅಂಗೀಕಾರ ಮಾಡಿದರೆ ಸಾಕು. ಆನಂದತಾರತಮ್ಯವನ್ನು ನಿರ್ವಾಹಮಾಡಮಾಡ ಬಹುದು. ಆದ್ದರಿಂದ ಉಪಾಸನೆಗೆ ಇವರು ಅಧಿಕಾರಿಗಳು ಇವರು ಅಲ್ಲ ಎಂಬ ಅಧಿಕಾರ ನಿಯಮ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ವಸ್ತುದೂಷಣವು ಇಲ್ಲಿ ಸಿದ್ಧಾಂತ ಯುಕ್ತಿ.- ಅಧಿಕಾರನಿಯಮವನ್ನು ಒಪ್ಪದಿದ್ದರೆ ಪ್ರಯತ್ನ ತಾರತಮ್ಯವನ್ನೇ ನಿರ್ವಾಹ ಮಾಡಲು ಶಕ್ಯವಿಲ್ಲ. ಪ್ರಯತ್ನ ತಾರತಮ್ಯವು (ಅಧಿಕಾರ) ಯೋಗ್ಯತಾ ತಾರತಮ್ಯಕ್ಕೆ ಅಧೀನವಾಗಿದೆ. ಯಾರಾದರೂ ಯೋಗ್ಯತೆ ಮೀರಿ ಪ್ರಯತ್ನ ಮಾಡಿದರೆ ಅವರ ಸಾಧನವೇ ದೂಷಿತವಾಗುತ್ತದೆ. ಎಂದು ಪ್ರಮಾಣವಿದೆ. ಆದ್ದರಿಂದ ಉಪಾಸನಾವಿಷಯದಲ್ಲಿ ಅಧಿಕಾರನಿಯಮ ವನ್ನು ಒಪ್ಪಲೇಬೇಕು.

೨೧) ಓಂ ಇಯದಾಮನನಾತ್ ಓಂ

ಈ ಅಧಿಕರಣದಲ್ಲಿ ದೃಷ್ಟವೈರೂಪ್ಯವು ಪೂರ್ವಪಕ್ಷ ಯುಕ್ತಿ. ಸಾಧಕರಲ್ಲಿ ಒಬ್ಬರಿಗಿಂತೊಬ್ಬರು ಅಧಿಕರು ಎಂದು ಕಂಡಿದೆ. ಆದ್ದರಿಂದ ಪ್ರಾಣನಿಗಿಂತ ಅಧಿಕರಾದವರು ಯಾರೂ ಇಲ್ಲವೆಂದಾದ ಪಕ್ಷದಲ್ಲಿ ಲೋಕದಲ್ಲಿ ಕಂಡಂತಹ ಪರಿಸ್ಥಿತಿಗೆ ವಿಪರೀತವಾಗುತ್ತದೆ. ಆದ್ದರಿಂದ ಪ್ರಾಣನಿಗಿಂತ ವಿಶಿಷ್ಟಾರಾದವರು ಇದ್ದಾರೆ. ಆದ್ದರಿಂದ ಉಪಾಸಕರಲ್ಲಿ ಪ್ರಾಣ ಅಥವಾ ಬ್ರಹ್ಮದೇವರೇ ಸರ್ವ ಗುಣೋಪಾಸನೆಗೆ ಅಧಿಕಾರಿಗಳು ಎಂದು ಹೇಳುವುದು ಯುಕ್ತವಲ್ಲ. ಎಂದು ಪೂರ್ವಪಕ್ಷ.

ಪ್ರತಿಕ್ರಿಯಾ ವಿರೋಧ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ. ಪ್ರಪಂಚದಲ್ಲಿ ನಿತ್ಯಮುಕ್ತರಾದ ನಾರಾಯಣ ಮತ್ತು ಲಕ್ಷ್ಮಿಯ ಅನಂತರದಲ್ಲಿ ಉಪಾಸಕರಲ್ಲಿ ಪ್ರಾಣದೇವರೇ ಶ್ರೇಷ್ಠರು. ಯಾರಾದರೂ ಮುಖ್ಯಪ್ರಾಣನನ್ನು ಅವಮಾನಿಸಿದರೆ ಅವಮಾನಿಸಿದವರು ಆತ್ಮಾ ದೇವಾನಾಂ ಇತ್ಯಾದಿ ಮಂತ್ರವನ್ನು ಜಪಿಸಿ ಮುಖ್ಯಪ್ರಾಣನಿಗೆ ಆಹುತಿಯನ್ನು ಕೊಡಬೇಕೆಂದು ಅವಮಾನಕ್ಕೆ ಪರಿಹಾರವನ್ನು ವಿಧಿಸಿದ್ದಾರೆ. ಮುಖ್ಯಪ್ರಾಣ ನಿಗಿಂತ ಶ್ರೇಷ್ಠನಾದ ಮತ್ತೊಬ್ಬ ಉಪಾಸಕರನ್ನು ಒಪ್ಪಿದರೆ ಪ್ರತಿಕ್ರಿಯಾ (ಪರಿಹಾರ) ವಿಧಾನದ ವಿರೋಧ ಬರುತ್ತದೆ. ಆದ್ದರಿಂದ ಉಪಾಸಕರಲ್ಲಿ ಪ್ರಾಣದೇವರೇ ಶ್ರೇಷ್ಠರು

೨) ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ.

ಇಲ್ಲಿ ಉನ್ನತಿ ಯು ಪೂರ್ವಪಕ್ಷ ಪ್ರಾಪಕಯುಕ್ತಿ - ಛಾಂದೋಗ್ಯ ಉಪನಿಷತ್ತಿನ ತಾರತಮ್ಯ ಪ್ರಕರಣದಲ್ಲಿ ಯಾರಿಗಿಂತ ಯಾರು ಶ್ರೇಷ್ಠರು?

ಎಂಬ ಪ್ರಶ್ನೆ ಮತ್ತು ಅದಕ್ಕೆ ಪ್ರತಿವಚನದ ಮೂಲಕ ನಾಮಾಭಿಮಾನಿ ಉಷಾ ದೇವಿಯಿಂದಾರಂಭಿಸಿ ಪ್ರಾಣ ಪರ್ಯಂತ ತಾರತಮ್ಯವನ್ನು ಹೇಳಿದ್ದಾರೆ. ಅನಂತರದಲ್ಲಿ ಪ್ರಾಣನಿಗಿಂತ ಯಾರು ಶ್ರೇಷ್ಠ ಎಂದು ಪ್ರಶ್ನೆ ಕಂಡು ಬರುವುದಿಲ್ಲ. ಆದ್ದರಿಂದ ಪ್ರಾಣನಿಗೇ ಉನ್ನತಿ (ಶ್ರೇಷ್ಠತ್ವ) ಪ್ರಾಪ್ತವಾಯಿತು. ಹೊರತು ವಿಷ್ಣುವಿಗೆ ಉತ್ತಮತ್ವ ಸಿದ್ಧಿಸುವುದಿಲ್ಲ. ಎಂದು ಪೂರ್ವಪಕ್ಷ.

ಪ್ರತಿಸಂಧಿ(ಅಧ್ಯಾಹಾರ)ಯು ಇಲ್ಲಿ ಸಿದ್ಧಾಂತ ಯುಕ್ತಿ. ಪ್ರಾಣಪ್ರಕರಣದಲ್ಲಿ ಪ್ರಾಣಜ್ಞಾನಿಯನ್ನು ಅತಿವಾದಿ (ಉತ್ಕೃಷ್ಟ ತತ್ವಬೋಧಕ) ಎಂದು ಪ್ರಶಂಸಿಸಿ ಮುಂದಿನ ವಾಕ್ಯದಲ್ಲಿ ಸತ್ಯಜ್ಞಾನಿಯನ್ನು ಪ್ರಾಣಬೋಧಕನಿಗಿಂತಲೂ ಅತ್ಯುತ್ಕೃಷ್ಟ ತತ್ತ್ವಬೋಧಕ ಎಂದು ತು ಎಂಬ ವಿಶೇಷಣದಿಂದ ಪ್ರಶಂಸಿದ್ದಾರೆ (ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ) ಆದ್ದರಿಂದ ' ಸತ್ಯಪ್ರಕರಣವು ಪ್ರಾಣಪ್ರಕರಣಕ್ಕಿಂತ ಭಿನ್ನವಾದ ಪ್ರಕರಣವೆಂದು ತಿಳಿಯುತ್ತದೆ. ಆದ್ದರಿಂದ ಅವೆರಡರ ಮಧ್ಯದಲ್ಲಿ ಪ್ರಾಣನಿಗಿಂತ ಶ್ರೇಷ್ಠ ಯಾರು ಎಂಬ ಪ್ರಶ್ನೆಯನ್ನೂ ಸತ್ಯ ನಾಮಕ ಭಗವಂತ ಶ್ರೇಷ್ಠ ಎಂಬ ಉತ್ತರವನ್ನೂ ಅಧ್ಯಾಹಾರ ಮಾಡುವುದು ಅವಶ್ಯವಾದ್ದರಿಂದ ವಿಷ್ಣುವೇ ಸರ್ವೋತ್ತಮ. ಎಂದು ಸಿದ್ಧಾಂತ.

೨೩) ಓಂ ಸೈವ ಹಿ ಸತ್ಯಾದಯಃ ಓಂ

ಈ ಅಧಿಕರಣದಲ್ಲಿ ಅನುಕ್ತಿಯು ಪೂರ್ವಪಕ್ಷ ಯುಕ್ತಿ . ಛಾಂದೋಗ್ಯದಲ್ಲಿ ಪ್ರಾಣ ಪ್ರಕರಣದ ನಂತರದಲ್ಲಿ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮ, ಅಹಂಕಾರ, ಆತ್ಮ ಎಂಬ ಶಬ್ದಗಳು ಕಂಡು ಬರುತ್ತವೆ. ಆಯಾ ಪ್ರಕರಣದಲ್ಲಿ ಆ ಶಬ್ದಗಳಿಂದ ವಾಚ್ಯವಾದದ್ದು ಒಂದೇ ಎಂದು ಅಭೇದವನ್ನು ಹೇಳಿಲ್ಲ (ಅನುಕ್ತಿ). ಆದ್ದರಿಂದ ಸತ್ಯ ವಿಜ್ಞಾನಮತಿ ಇತ್ಯಾದಿಗಳು ಬೇರೆ ಬೇರೆ ಎಂದು ಸಿದ್ಧವಾಯಿತು. ಆದ್ದರಿಂದ ಸತ್ಯ ಪದೋಕ್ತನಾದ ವಿಷ್ಣುವಿಗಿಂತ ವಿಜ್ಞಾನಾದಿಗಳಿಗೆ ಉತ್ತಮತ್ವಪ್ರಾಪ್ತ ವಾಗುದರಿಂದ ವಿಷ್ಣುವು ಸರ್ವೋತ್ತಮ ಅಲ್ಲ ಎಂದು ಪೂರ್ವಪಕ್ಷ.

ಅನೂನತಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ . ಸತ್ಯಾದಿ ಎಲ್ಲ ಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಹೊರತು ಇತರ ದೇವತೆಗಳಲ್ಲ. ಏಕೆಂದರೆ 'ಸತ್ಯಂ ಪೂರ್ಣಂ, ವಿಜ್ಞಾನಂ, ಪೂರ್ಣಂ , ಕೃತಿಃ ಪೂರ್ಣಾ, ನಿಷ್ಠಾ ಪೂರ್ಣಾ' ಇತ್ಯಾದಿಯಾಗಿ ಶಾಖಾಂತರದಲ್ಲಿ ಅನೂನತಾ (ಪೂರ್ಣತ್ವ) ವನ್ನು ಹೇಳಿದ್ದರಿಂದ ಆ ಪೂರ್ಣತ್ವವು ವಿಷ್ಣು ಲಕ್ಷಣವಾದ್ದರಿಂದ ಸತ್ಯಜ್ಞಾನಾದಿ ಗಳೆಲ್ಲವೂ ಭಗವದ್ರೂಪಗಳೆಂದು ಭಾವಿಸಬೇಕು.

೨೪) ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ

ಈ ಅಧಿಕರಣದಲ್ಲಿ ಅಪ್ರಯತ್ನತ್ವವು ಪೂರ್ವಪಕ್ಷಯುಕ್ತಿ . ಲಕ್ಷ್ಮೀದೇವಿಯರು ನಿತ್ಯಮುಕ್ತರಾದ್ದರಿಂದ ಅವರು ಉಪಾಸನಾದಿಗಳಲ್ಲಿ ಪ್ರಯತ್ನ ಪಡಬೇಕಾಗಿಲ್ಲ. ಆದ್ದರಿಂದ ಉಪಾಸನೆಯು ಕೂಡುವುದಿಲ್ಲ. ಅವರು ಮಾಡುತ್ತಿರುವ ಉಪಾಸನೆಯನ್ನು ಸಮರ್ಥಿಸಲು ಪ್ರಯತ್ನವನ್ನು ಒಪ್ಪಿದರೆ ಅವರು ಸಂಸಾರಿಗಳೆಂದು ಒಪ್ಪಬೇಕಾಗುತ್ತದೆ. ಆವಾಗ ಪ್ರಾಣದೇವರು ಉಪಾಸಕರಲ್ಲಿ ಶ್ರೇಷ್ಠರೆನ್ನುವುದು ಅಯುಕ್ತವಾಗುತ್ತದೆ. ಎಂದು ಪೂರ್ವಪಕ್ಷ.

ಸಂಸ್ಕಾರ ಪಾಟವ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ . ಲಕ್ಷ್ಮೀದೇವಿಯರಿಗೆ ಪರಮಾತ್ಮನು ಅತಿಸಮೀಪಸ್ಥ ಮತ್ತು ಅತಿಪ್ರಿಯತಮ. ಆದ್ದರಿಂದ ಅವರು ಅನಾದಿಕಾಲದಿಂದ ಭಗವಂತನನ್ನು ಧ್ಯಾನಿಸುತ್ತಾರೆ. ಅತಿಪ್ರಿಯವಾದ ವಸ್ತುವನ್ನು ಸದಾ ಧ್ಯಾನಮಾಡುವುದು ಲೋಕದಲ್ಲಿ ಕಂಡಿದೆ. ಲಕ್ಷ್ಮೀದೇವಿಯರೂ ಮುಕ್ತ್ಯರ್ಥ ಪ್ರಯತ್ನವಿಲ್ಲದೇ ಸಂಸ್ಕಾರ ಪಾಟವದಿಂದ ನಿತ್ಯೋಪಾಸನಾಯುಕ್ತರಾಗಿದ್ದಾರೆ. ಎಂದು ಕೂಡಿಸಲು ಬರುವುದರಿಂದ ಅವರು ಸಂಸಾರಿಗಳೆಂದು ಒಪ್ಪುವ ಅಗತ್ಯವಿಲ್ಲ. ಎಂದು ಸಿದ್ಧಾಂತ.

೨೫) ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ
ಪೃಥಗ್ಘ್ಯಪ್ರತಿಬಂಧಃ ಫಲಂ ಓಂ

ದೃಢಬಂಧ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ . ಸಂಸಾರಬಂಧವು ಅದೃಢ ಎಂಬ ಪಕ್ಷದಲ್ಲಿ ಉಪಾಸನಾ ಇಲ್ಲದೆಯೇ ಶ್ರವಣಾದಿಗಳಿಂದಲೇ

ಅದರ ಭೇದವಾಗಬೇಕಾಗುತ್ತದೆ. ಆದ್ದರಿಂದ ಅದನ್ನು ದೃಢ ಎಂದರೆ ದೃಢವಾದುದನ್ನು ಭೇದಿಸಲು ಸಾಧ್ಯವಿಲ್ಲವಾದ್ದರಿಂದ ಉಪಾಸನಾದಿಗಳು ವ್ಯರ್ಥ ಎಂದು ಪೂರ್ವಪಕ್ಷ..

ಸ್ವೇಚ್ಛಾ(ಈಶ್ವರೇಚ್ಛಾ)ನಿಯತಿಯು ಸಿದ್ಧಾಂತ ಯುಕ್ತಿ. ಸಂಸಾರಬಂಧವು ಅದೃಢವೇ ಆಗಿದೆ. ಆದರೂ ಶ್ರವಣ ಮನನ ನಿದಿಧ್ಯಾಸನ (ಉಪಾಸನಾ) ಇವುಗಳಿಂದಲೇ ನಾನು ಬಂಧವನ್ನು ಬಿಡಿಸುತ್ತೇನೆ ಎಂದು ಈಶ್ವರ ಸಂಕಲ್ಪ (ನಿಯಮ)ವಿರುವುದರಿಂದ ಉಪಾಸನೆಯು ಸಾರ್ಥಕ.

೨೬) ಓಂ ಪ್ರದಾನವದೇವ ಹಿ ತದುಕ್ತಂ ಓಂ

ಪರಾಭವವು ಈ ಅಧಿಕರಣದ ಪೂರ್ವಪಕ್ಷಯುಕ್ತಿ. ಜ್ಞಾನ ಮತ್ತು ಮೋಕ್ಷಗಳು ಗುರುಗಳ ಅಧೀನ ಎಂದು ಒಪ್ಪಿದರೆ ಜ್ಞಾನಿಗಳಿಗೂ ಕೂಡ ಯಾವಾಗಲಾದರೊಮ್ಮೆ ಗುರು ಕೋಪದಿಂದ ಜ್ಞಾನವು ಪರಾಭವ ಹೊಂದಿ ಅಂದರೆ ನಾಶವಾಗಿ ಮೋಕ್ಷ ಇಲ್ಲದಂತಾಗುವ ಪ್ರಸಂಗ ಬರುತ್ತದೆ. ಆಗ ಜ್ಞಾನಿಗಳಿಗೆ ಮೋಕ್ಷ ನಿಯತ ಎಂದು ಹಿಂದೆ ಹೇಳಿದ್ದು ಅಯುಕ್ತವಾಗುತ್ತದೆ. ಆದ್ದರಿಂದ ಜ್ಞಾನವು ಕೇವಲ ಶ್ರವಣಾದ್ಯಧೀನ ಎಂದು ಪೂರ್ವಪಕ್ಷ.

ವಸ್ತು ವೈಭವವು ಇಲ್ಲಿ ಸಿದ್ಧಾಂತ ನ್ಯಾಯ. ಜ್ಞಾನವು ಗುರುಗಳಿಗೆ ಅಧೀನವೇ ಆಗಿದೆ. ಆದರೂ,

'ಜ್ಞಾನಿನೊ ಗುರುಶಾಪೇಽಪಿ ನಾಮುಕ್ತಿಃ ಸಂಸೃತೇಃ ಕ್ವಚಿತ್ ।
ಆನಂದಹ್ರಾಸದೋಷೇಣ ನೈವ ಮುಕ್ತಿರ್ವಿದುಷ್ಯತಿ ॥'

ಜ್ಞಾನಿಗಳಿಗೆ ಗುರುಶಾಪದಿಂದಲೂ ಮೋಕ್ಷಕ್ಕೇನೂ ಪ್ರತಿಬಂಧವಾಗುವುದಿಲ್ಲ. ಮುಕ್ತಿಯಲ್ಲಿ ಆನಂದ ಹ್ರಾಸ ಮಾತ್ರ ಉಂಟಾಗುತ್ತದೆ. ಎಂಬ ಪ್ರಮಾಣಾನು ಸಾರವಾಗಿ ಆ ಶಾಪವು ಜ್ಞಾನವನ್ನು ಪರಾಭವಗೊಳಿಸುವುದಿಲ್ಲವೆಂದು ತಿಳಿಯಬೇಕು ವಸ್ತು ವೈಭವವೆಂದರೆ ಜ್ಞಾನದ ವೈಭವ. ಪರಾಭವ ಹೊಂದದಿರುವಿಕೆ. ಎಂದು ಭಾವಿಸಬೇಕು. ಗುರು ಪ್ರಸಾದವನ್ನೂ ಸಂಪಾದಿಸಬೇಕೆಂದು ಸಿದ್ಧಾಂತ.

೨೭) ಓಂ ಲಿಂಗ ಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ

ಪುಂಸಾಮ್ಯವು ಇಲ್ಲಿ ಪೂರ್ವಪಕ್ಷಯುಕ್ತಿ. ಶಿಷ್ಯ ಮತ್ತು ಗುರುಗಳಲ್ಲಿ ಪುರುಷತ್ವ ಸಮಾನವಾಗಿರುವಾಗ ಗುರುಪ್ರಸಾದಕ್ಕೆ ಪ್ರಾಬಲ್ಯವನ್ನು ಏಕೆ ಹೇಳಬೇಕು. ಶಿಷ್ಯ ಪ್ರಯತ್ನವೇ ಪ್ರಧಾನಸಾಧನವಾಗಿ ಗುರುಪ್ರಸಾದವು ಸಹಕಾರಿಮಾತ್ರ ಆಗಬಾರದೇಕೇ? ಎಂದು ಪೂರ್ವಪಕ್ಷ.

ವಿಶೇಷೋಕ್ತಿಯು ಸಿದ್ಧಾಂತ ಸ್ಥಾಪಕ. ' ಗುರುಪ್ರಸಾದೋ ಬಲವಾನ್' ಎಂಬ ವಿಶೇಷವಚನವಿರುವುದರಿಂದ ಗುರುಗಳ ಅನುಗ್ರಹವೇ ಪ್ರಬಲ. ಆದ್ದರಿಂದ ಅವಶ್ಯವಾಗಿ ಗುರುಗಳ ಅನುಗ್ರಹವನ್ನು ಸಂಪಾದಿಸಬೇಕು.

೨೮) ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ

ಪ್ರಾಪ್ತಸಂತ್ಯಾಗವು ಪೂರ್ವಪಕ್ಷಯುಕ್ತಿ. ಪ್ರಥಮಪ್ರಾಪ್ತಗುರುಗಳ ತ್ಯಾಗದಿಂದ ಬರುವ ದೋಷ ಎಂದರ್ಥ. ಗುರುಪರಿತ್ಯಾಗದಿಂದ ಅನರ್ಥವನ್ನು ಹೇಳಿರುವ ಪ್ರಯುಕ್ತ ಉತ್ತಮಗುರುಗಳ ಲಾಭವಾದಾಗಲೂ ಪ್ರಥಮಪ್ರಾಪ್ತ ಗುರುಗಳನ್ನು ಬಿಡಕೂಡದು. ಆದ್ದರಿಂದ ಸರ್ವಜ್ಞ ಗುರುಗಳು ಪ್ರಥಮ ಪ್ರಾಪ್ತರಾಗದಿದ್ದರೆ, ಅನಂತರ ಪ್ರಾಪ್ತರಾದರೆ ಅವರನ್ನು ಸ್ವೀಕರಿಸಬಾರದು ಎಂದು ಪೂರ್ವಪಕ್ಷ.

ಅಮಾನತ್ವವು ಸಿದ್ಧಾಂತ ಯುಕ್ತಿ. ಉತ್ತಮ ಗುರುಗಳನ್ನು ಸ್ವೀಕಾರ ಮಾಡಲು ಪೂರ್ವಗುರುಗಳನ್ನು ಪರಿತ್ಯಾಗ ಮಾಡಿದರೆ ದೋಷವಿದೆ ಎಂಬುದಕ್ಕೆ ಪ್ರಮಾಣವಿಲ್ಲವಾದ್ದರಿಂದ ಉತ್ತಮ ಗುರುಗಳನ್ನು ಸ್ವೀಕರಿಸಬಹುದೆಂದು ಸಿದ್ಧಾಂತ.

೨೯) ಓಂ ವಿದ್ಯೈವತು ನಿರ್ಧಾರಣಾತ್ ಓಂ

ಕಾರಣಾನಿರ್ಣಯವು ಇಲ್ಲಿ ಪೂರ್ವಪಕ್ಷಪ್ರಾಪಕಯುಕ್ತಿ. ವಿದ್ವಾನಮೃತೋ ಭವತಿ (ಜ್ಞಾನಿಯು ಮುಕ್ತನಾಗುವನು) ಎಂಬ ಶ್ರುತಿ ಪ್ರಕಾರ ಜ್ಞಾನವು ಮೋಕ್ಷಕಾರಣವೋ ಅಥವಾ 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ '(ಜನಕಾದಿಗಳು ಕರ್ಮದಿಂದಲೇ ಮೋಕ್ಷವನ್ನು ಪಡೆದಿದ್ದಾರೆ ) ಎಂಬ ಸ್ಮೃತಿ ಪ್ರಕಾರ ಕರ್ಮ ಕಾರಣವೋ

ಎಂದು ನಿರ್ಣಯವಾಗದಿರುವುದರಿಂದ ಉಪಾಸನೆ ವ್ಯರ್ಥ ಎಂದು ಪೂರ್ವಪಕ್ಷ.

ಪ್ರಾಧಾನ್ಯವು ಸಿದ್ಧಾಂತ ಸ್ಥಾಪಕಯುಕ್ತಿ. 'ನಾನ್ಯಃ ಪಂಥಾ ಅಯನಾಯ ವಿದ್ಯತೇ' (ಮೋಕ್ಷಕ್ಕೆ ಜ್ಞಾನವನ್ನು ಹೊರತುಪಡಿಸಿ ಬೇರೆ ಮಾರ್ಗವೇ ಇಲ್ಲ) ಎಂದು ಬೇರೆ ಮಾರ್ಗವನ್ನು ನಿಷೇಧಿಸಿ ಜ್ಞಾನವೇ ಸಾಧನವೆಂದು ಹೇಳುವ ಈ ಶ್ರುತಿ ವಚನವು ಪ್ರಧಾನವಾದುದರಿಂದ ಅಪರೋಕ್ಷ ಜ್ಞಾನವೇ ಮೋಕ್ಷಸಾಧನ. ಅದಕ್ಕಾಗಿ ಉಪಸನಾದಿಗಳನ್ನು ಮಾಡಲೇಬೇಕು.

೩೦) ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ

ಈ ಅಧಿಕರಣದಲ್ಲಿ ಭ್ರಮವು ಪೂರ್ವಪಕ್ಷಯುಕ್ತಿ. ಕರ್ಮಣೈವ ಎಂಬ ಸ್ಮೃತಿಯಲ್ಲಿಯೂ ಏವಕಾರದಿಂದ ಕರ್ಮವೇ ಮುಖ್ಯ ಸಾಧನವೆಂದು ತಿಳಿಯುತ್ತಿರುವಾಗ ನಾನ್ಯಃ ಪಂಥಾ ಎಂಬ ಜ್ಞಾನವನ್ನೇ ಪ್ರಧಾನೋಪಾಯವನ್ನಾಗಿ ಹೇಳುವ ಶ್ರುತಿವಚನವೇ ಪ್ರಧಾನ ಎನ್ನುವುದು ಭ್ರಾಂತಿ ಮೂಲಕವಾದುದರಿಂದ ಕರ್ಮವೂ ಮೋಕ್ಷಸಾಧನ ಎಂದು ಪೂರ್ವಪಕ್ಷ.

ಪ್ರೀತಿಯು ಸಿದ್ಧಾಂತ ಸ್ಥಾಪಕ ಯುಕ್ತಿ. 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ'- ಜ್ಞಾನಿಗಳಿಗೆ ನಾನು ಪ್ರಿಯ. ನನಗೆ ಜ್ಞಾನಿಗಳು ಪ್ರಿಯರು - ಎಂಬ ವಚನದಿಂದ ಜ್ಞಾನಿಗಳಲ್ಲೇ ಭಗವಂತನಿಗೇ ಪ್ರೀತಿ ಇರುತ್ತದೆಂದು ಸಿದ್ಧವಾಗಿದೆ. 'ಯಮೆವೈಷ ವೃಣುತೇ' ಎಂಬ ವಚನದಿಂದ ಪ್ರೀತಿಯಿಂದಲೇ ಮೋಕ್ಷ ಎಂದೂ ಸಿದ್ಧವಾಗಿದೆ. ಆದ್ದರಿಂದ ಜ್ಞಾನವೇ ಪ್ರಧಾನ.

೩೧) ಓಂ ಅನುಬಂಧಾದಿಭ್ಯಃ ಓಂ

ವಿಶೇಷದರ್ಶಿತಾ ಎಂಬುದು ಇಲ್ಲಿ ಪೂರ್ವಪಕ್ಷ ಯುಕ್ತಿ. ಯಾರಾದರೊಬ್ಬ ಶಿಷ್ಯನಿಗೆ ಸರ್ವಜ್ಞ ಗುರುಗಳ ಅನುಗ್ರಹದಿಂದ ಮೋಕ್ಷಸಾಧನವಾದ ವಿಶೇಷ ಜ್ಞಾನವು ಉಂಟಾಗಬಹುದಾದ್ದರಿಂದ ಅಂತಹವರಿಗೆ ಭಕ್ತ್ಯಾದಿಗಳು ಅನಾವಶ್ಯಕ ಎಂದು ಪೂರ್ವಪಕ್ಷ.

ಆಗಮವು ಸಿದ್ಧಾಂತ ಸ್ಥಾಪಕಯುಕ್ತಿ. 'ಭಕ್ತ್ಯೈವೈನಂ ಜಾನಾತಿ, ಭಕ್ತೈವಾನಂದೀ ಭವತಿ' - ಭಕ್ತಿಯಿಂದಲೇ ಜ್ಞಾನಿಯಾಗುತ್ತಾನೆ. ಭಕ್ತಿಯಿಂದಲೇ ಮುಕ್ತಿಯನ್ನು ಪಡೆಯುತ್ತಾನೆ ಎಂದು ಆಗಮವಿರುವುದರಿಂದ ಭಕ್ತ್ಯಾದಿ ಸಾಧನಗಳಿಲ್ಲದೆ ವಿಶೇಷ ಜ್ಞಾನವೂ ಬರಲಾರದು.

೩೨) ಓಂ ಪ್ರಜ್ಞಾಂತರ ಪೃಥಕ್ತ್ವವತ್ ದೃಷ್ಟಿಶ್ಚ ತದುಕ್ತಮ್ ಓಂ

ಆಲಾಪವು ಇಲ್ಲಿ ಪೂರ್ವಪಕ್ಷಯುಕ್ತಿ. 'ಯಾವಾನ್ ಯಶ್ಚಾಸ್ಮಿತತ್ತ್ವತಃ । ತತೋ ಮಾಂ ತತ್ತ್ವತೋ ಜ್ಞಾತ್ವಾ' - ನಾನು ಏನು? ಎಂತು ಎನ್ನುವುದನ್ನು ಸರಿಯಾಗಿ ತಿಳಿದವನು ಮುಕ್ತನಾಗುತ್ತಾನೆ 'ದೃಷ್ಟ್ವೈವ ತಂ ಮುಚ್ಯತೇ 'ಭಗವಂತನ ದರ್ಶನ ಪಡೆದು ಮುಕ್ತನಾಗುತ್ತಾನೆ ಎಂದು ವಿಶೇಷ ಪ್ರಕಾರವನ್ನು ತಿಳಿಸದೇ ಇರುವ ಸಾಮಾನ್ಯ ವಚನಾದಿಂದಾಗಿ ಎಲ್ಲರಿಗೂ ಭಗವಂತನ ಸಂಪೂರ್ಣ ಸ್ವರೂಪ ಜ್ಞಾನದಿಂದ ಮೋಕ್ಷ ಎಂದಂತಾಯಿತು. ಆದ್ದರಿಂದ ಮುಕ್ತಿಯಲ್ಲಿ ತಾರತಮ್ಯ ಅಯುಕ್ತ ಎಂದು ಪೂರ್ವಪಕ್ಷ.

ಸುಸ್ಥಿರತ್ವವು ಸಿದ್ಧಾಂತ ಯುಕ್ತಿ. 'ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ' ಭಗವಂತನು ಯಥಾಯೋಗ್ಯವಾಗಿಯೇ ತನ್ನ ದರ್ಶನವನ್ನುಂಟು ಮಾಡುತ್ತಾನೆ. ಎಂಬ ಶ್ರುತಿಯಿರುವುದರಿಂದ ನಾನಾ ಪ್ರಕಾರದ ದರ್ಶನವೇ ಸ್ಥಿರವಾದ ದು. ಆದ್ದರಿಂದ ದರ್ಶನ ತಾರತಮ್ಯ ಪ್ರಯುಕ್ತ ಮುಕ್ತಿ ತಾರತಮ್ಯವೂ ಇದೆ ಎಂದು ಸಿದ್ಧವಾಯಿತು.

೩೩) ಓಂ ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನಹಿ ಲೋಕಾಪತ್ತಿಃ ಓಂ

ಗುಣಸಾಮ್ಯವು ಈ ಅಧಿಕರಣದ ಪೂರ್ವಪಕ್ಷಯುಕ್ತಿ. ಭಗವಂತನ ಎಲ್ಲ ರೂಪಗಳಲ್ಲಿ ಗುಣ ಸಾಮ್ಯವಿರುವ ಪ್ರಯುಕ್ತ ಯಾವರೂಪದ ಸಾಕ್ಷಾತ್ಕಾರವಾದರೂ ಮುಕ್ತಿಯಾಗುತ್ತದೆ ಎಂದು ಪೂರ್ವಪಕ್ಷ.

ಇಲ್ಲಿ ಕೃತಪ್ರಾಪ್ತಿಯು ಸಿದ್ಧಾಂತ ಯುಕ್ತಿ. ಎಲ್ಲ ಅಶ್ವಮೇಧ ಯಾಗಗಳು ಸಮಾನವಾದರೂ ತಾನು ಮಾಡಿದ ಯಾಗ ಮಾತ್ರ ತನಗೆ ಫಲಪ್ರದ. ಎಂಬ ದೃಷ್ಟಾಂತ ಶ್ರುತಿಯಲ್ಲಿರುವುದರಿಂದ ಎಲ್ಲ ರೂಪಗಳು ಸಮವಾಗಿದ್ದರೂ ತನ್ನ ಬಿಂಬ ರೂಪದ ದರ್ಶನ ಮಾತ್ರ ತನಗೆ ಫಲಪ್ರದ ಎಂದು ಶ್ರುತ್ಯನುಸಾರವಾಗಿ ತಿಳಿಯಬೇಕು.

೩೪) ಓಂ ಪರೇಣ ಚ ಶಬ್ದಸ್ಯತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ

ಪೃಥಕ್ ದೃಷ್ಟಿಯು ಪೂರ್ವಪಕ್ಷಯುಕ್ತಿ. 'ಭಕ್ತಿರೇವೈನಂ ನಯತಿ' - ಭಕ್ತಿಯೇ ಸಾಧಕನನ್ನು ಮೋಕ್ಷಕ್ಕೆ ಕರೆದೊಯ್ಯುತ್ತದೆ ಎಂಬ ಪ್ರಮಾಣದಲ್ಲಿ ಪ್ರತ್ಯೇಕವಾಗಿ ಭಕ್ತಿಗೆ ಮೋಕ್ಷಪ್ರದತ್ವ ಕಂಡಿರುವುದರಿಂದ ಭಗವಂತನ ದ್ದೇನೂ ಕೃತ್ಯವಿಲ್ಲ ಎಂದು ಪೂರ್ವಪಕ್ಷ.

ಅನಾದಿಗುಣ ವಿಸ್ತರವು ಇಲ್ಲಿ ಸಿದ್ಧಾಂತ ಯುಕ್ತಿ - ಈಶನ ಅಪೇಕ್ಷೆ ಇಲ್ಲದೆ ಕೇವಲ ಭಕ್ತ್ಯಾದಿ ಗುಣಗಳು ಮೋಕ್ಷಪ್ರದವಾಗಲು ಶಕ್ಯವಿಲ್ಲ. ಏಕೆಂದರೆ ಆ ಗುಣಗಳು ಅನಾದಿಕಾಲದಿಂದಲೂ ಜೀವನಲ್ಲಿ ಅವ್ಯಕ್ತವಾಗಿ ಇವೆ. ಆದರೂ ಮೋಕ್ಷವಾಗಿಲ್ಲ. ಸ್ವತಂತ್ರನಾದ ಭಗವಂತನು ಅವುಗಳನ್ನು ವ್ಯಕ್ತಗೊಳಿಸಿ ಅವುಗಳನ್ನೇ ನಿಮಿತ್ತ ಮಾಡಿಕೊಂಡು ತಾನೇ ಮುಕ್ತಿ ಪ್ರದನಾಗಿದ್ದಾನೆ.

೩೫) ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ

ಅಗಮ್ಯವರ್ತ್ಮ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ. ಅಂಶಿಯ ಮಾರ್ಗ ಅಂಶಕ್ಕೆ ತಿಳಿಯುವುದಿಲ್ಲ. ಅಂದರೆ ಅಂಶಿಯಾದ ಇಂದ್ರಾದಿಗಳ ವ್ಯಾಪಾರವು (ಜ್ಞಾನಾದಿಗಳು) ಅಂಶರಾದ ಅರ್ಜುನಾದಿಗಳಿಗೆ ತಿಳಿಯುವುದಿಲ್ಲ. ಆದ್ದರಿಂದ ಅಂಶಾಂಶಿಗಳು ಬೇರೆ ಬೇರೆ. ಆದ್ದರಿಂದ ಅಂಶಿಯಾದ ಇಂದ್ರಜೀವನು ಅನಾದಿ ನಿತ್ಯನಾದರೂ ಅಂಶವಾದ ಅರ್ಜುನನು ಉತ್ಪತ್ತಿನಾಶ ಉಳ್ಳವನು. ಆದ್ದರಿಂದ ಅವನ ಸ್ವರೂಪಭೂತವಾದ ಯೋಗ್ಯತೆಯೂ ಅನಾದಿಯಲ್ಲವೆಂದಾಯಿತು. ಆ ಯೋಗ್ಯತೆಯು ಅನಾದಿಯಾಗಿದ್ದ ಪಕ್ಷದಲ್ಲಿ ಅಂಶನು ಮಾಡುವ ಉಪಾಸನೆಯು ಅನಾದಿ ಯೋಗ್ಯತಾನುಗುಣ ಎಂದು ವ್ಯವಸ್ಥೆ ಮಾಡಬಹುದಾಗಿತ್ತು. ಆದರೆ ಯೋಗ್ಯತೆಯೇ ಅನಾದಿಯಲ್ಲದೆ ಆಗಂತುಕವಾದ್ದರಿಂದ ಒಂದೊಂದು ಅಂಶದ ಯೋಗ್ಯತೆ ಒಂದೊಂದು ಪ್ರಕಾರ ಎಂದು ಅವ್ಯವಸ್ಥೆ ಇರುವುದರಿಂದ ಯೋಗ್ಯತೆಯು ಯಾವುದೇ ಜೀವರ ಉಪಾಸನಾವ್ಯವಸ್ಥೆಗೂ ನಿರ್ವಾಹಕವಾಗಲಾರದು. ಎಂದು ಪೂರ್ವಪಕ್ಷ.

ಇಲ್ಲಿ ಸಾಧನೋತ್ತಮತಾ ಎನ್ನುವುದು ಸಿದ್ಧಾಂತ ಯುಕ್ತಿ - ಸಾಧನಗಳಲ್ಲಿ ಅದೃಷ್ಟಕ್ಕೆ ಉತ್ತಮತ್ವವಿದೆ. ಅಂಶಿಯ ಅದೃಷ್ಟದಿಂದ ನಿರ್ಮಿತವಾದ ಶರೀರವನ್ನು ಅಂಶನು ಪಡೆಯುತ್ತಾನೆ. ಇಲ್ಲದಿದ್ದರೆ ಅಂಶದ ದೇಹಕ್ಕೆ ಕಾರಣವೇ ಇಲ್ಲದಂತಾಗುತ್ತದೆ. ಈ ರೀತಿಯಲ್ಲಿ ಅಂಶಾಂಶಿಗಳಿಗೆ ಅಭೇದವನ್ನು ಒಪ್ಪಬೇಕಾದ್ದರಿಂದ ಅಂಶನೂ ಅವನ ಸ್ವರೂಪ ಭೂತವಾದ ಯೋಗ್ಯತೆಯೂ ಅನಾದಿನಿತ್ಯ ಎಂದೇ ಅಂಗೀಕರಿಸಬೇಕು. ಉಪಾಸನೆಯೂ ಅನಾದಿ ಯೋಗ್ಯತಾನುಗುಣ ಎಂದೇ ಒಪ್ಪಬೇಕು. ಆದ್ದರಿಂದಲೇ ಅಂಶಗತ ಸರ್ವವ್ಯಾಪಾರದ ಅನುಸಂಧಾನ ಅಂಶಿಗೆ ಇರುತ್ತದೆ. ಆದರೆ ಭಗವಂತನ ಅಚಿಂತ್ಯ ಶಕ್ತಿಯಿಂದಾಗಿ ಅಂಶಿಗತವಾದದ್ದೆಲ್ಲ ಅಂಶಕ್ಕೆ ಅನುಭವ ಬರುವುದಿಲ್ಲ. ಅದಕ್ಕೆ ಮಾನುಷಶರೀರಾದಿಗಳೂ ಪ್ರತಿಬಂಧಕವಾಗಿರುತ್ತದೆ. ಅಂಶಿಗೆ ಉಂಟಾಗುವ ಬಿಂಬಾಪರೋಕ್ಷ ಮೊದಲಾದ ಪ್ರಧಾನ ಸಾಧನ ಫಲಗಳು ಅನುಭವಕ್ಕೆ ಬರುತ್ತವೆ.

೩೬) ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ

ಸಂಧಾನಂ ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ - ಭಗವಂತನನ್ನು ಉಪಾಸನೆ ಮಾಡುವಾಗ ಬ್ರಹ್ಮಾದಿಗಳನ್ನೂ ಅವನ ಪರಿವಾರತಯಾ ಉಪಾಸನೆ ಮಾಡಬೇಕೆಂದು ಹೇಳಿದರೆ ಸಾಧಾರಣವಾದ ದೇವತ್ವಾದಿಗುಣಗಳನ್ನು ಎಲ್ಲರಲ್ಲೂ ಅನುಸಂಧಾನ ಮಾಡುವುದರಿಂದ ಒಬ್ಬರ ಅಸಾಧಾರಣವಾದ ಗುಣಗಳನ್ನೂ ಮತ್ತೊಬ್ಬರಲ್ಲಿ ಅನುಸಂಧಾನ ಮಾಡುವ ಪ್ರಸಂಗವಿರುವುದರಿಂದ ಪರಿವಾರದೇವತೆಗಳನ್ನು ಉಪಾಸನೆ ಮಾಡುವುದು ಸರಿಯಲ್ಲ. ಆದ್ದರಿಂದ ವೇದದಲ್ಲಿ ಅವರ ಗುಣಗಳನ್ನು ಹೇಳಿದ್ದು ವ್ಯರ್ಥ ಎಂದು ಪೂರ್ವಪಕ್ಷ.

ನಾನಾದೃಷ್ಟಿಯು ಇಲ್ಲಿ ಸಿದ್ಧಾಂತ ಯುಕ್ತಿ - ವೇದದಲ್ಲಿ ಪರಿವಾರ ದೇವತೆಗಳನ್ನು ಪರಸ್ಪರ ವಿಲಕ್ಷಣಗುಣಉಳ್ಳವರನ್ನಾಗಿ ಪ್ರತಿಪಾದಿಸಿದ್ದರಿಂದ ಹಾಗೆಯೇ ಅವರ ಉಪಾಸನೆಯನ್ನು ಮಾಡಬೇಕು. ಆದರೆ ಉತ್ತಮರ ಗುಣಗಳು ಅಧಮರಲ್ಲಿ ಅಯೋಗ್ಯವಾದ್ದರಿಂದ ಉತ್ತಮರ ಗುಣಗಳನ್ನು ಅಧಮರಲ್ಲಿ ಉಪಾಸನೆ ಮಾಡಬಾರದು. ದೇವತ್ವ ಯಜ್ಞಭೋಕ್ತೃತ್ವಾದಿ

ಗಳನ್ನು ನಿಷೇಧ ಮಾಡದ ಪ್ರಯುಕ್ತ ಎಲ್ಲರಲ್ಲಿಯೂ ಉಪಾಸನೆ ಮಾಡಬಹುದು. ಚತುರ್ಮುಖತ್ವ ಇತ್ಯಾದಿಗಳನ್ನು ಅಧಮರಲ್ಲಿ ಉಪಾಸಿಸಬಾರದು.

೩೭) ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ

ಇಷ್ಟ ಫಲವು ಇಲ್ಲಿ ಪೂರ್ವಪಕ್ಷಯುಕ್ತಿ - ಜೀವರಿಗೆ ಇಷ್ಟವಾದ ಆನಂದಾದಿ ಗುಣಗಳ ಉಪಾಸನೆಯಿಂದಲೇ ಅವರ ಸ್ವರೂಪಾನಂದಾವಿರ್ಭಾವ ಮೊದಲಾದ ಇಷ್ಟ ಫಲಗಳು ಲಭಿಸುವಾಗ ಭೂಮ (ಪೂರ್ಣತ್ವ) ಗುಣವನ್ನು ಉಪಾಸನೆ ಮಾಡಿದ್ದರಿಂದ ಲಭಿಸುವ ಫಲ ವಿಶೇಷವಿಲ್ಲವಾದ್ದರಿಂದ ಭೂಮಗುಣೋಪಾಸನೆ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಶಿಷ್ಟಿಯು ಇಲ್ಲಿ ಸಿದ್ಧಾಂತ ಯುಕ್ತಿ- 'ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯಃ' ಪೂರ್ಣತ್ವ ವಿಶಿಷ್ಟನಾದ ಪರಮಾತ್ಮನನ್ನೇ ಉಪಾಸನೆ ಮಾಡಬೇಕು ಎಂದು ಶಾಸನ (ಶಿಷ್ಟಿ) ವಿರುವುದರಿಂದ ಭೂಮ ಆನಂದ ಭೂಮಜ್ಞಾನ ಇತ್ಯಾದಿ ರೂಪದಿಂದ ಉಪಾಸನೆ ಮಾಡಬೇಕು.

೩೮) ಓಂ ನಾನಾ ಶಬ್ದಾದಿ ಭೇದಾತ್ ಓಂ

ಅಕಲ್ಪನಾ ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ - ಬ್ರಹ್ಮದೇವರು ಉಪಾಸನೆ ಮಾಡುವ ಪೂರ್ಣತ್ವ ಗುಣ(ಭೂಮ)ವನ್ನೇ ಬೇರೆಯವರು ಉಪಾಸನೆ ಮಾಡಬೇಕು. ಪೂರ್ಣತ್ವದಲ್ಲಿ ನಾನಾ ಪ್ರಕಾರಗಳನ್ನು ಕಲ್ಪನೆ ಮಾಡುಲು ಪ್ರಮಾಣವಿಲ್ಲ. ವಿಶೇಷ ಕಲ್ಪಕದ ಅಭಾವವೇ ಅಕಲ್ಪನಾ ಎಂದು ವಿವಕ್ಷಿತವಾಗಿದೆ. ಅಂತಹ ಯುಕ್ತಿಯಿಂದ ಈ ಪೂರ್ವಪಕ್ಷವನ್ನು ಮಾಡಲಾಗಿದೆ.

ಅನೂನತಾ ಎನ್ನುವುದು ಸಿದ್ಧಾಂತ ಯುಕ್ತಿ - ಅನೂನತಾ ಎಂದರೆ ಅಧಿಕಾರಾನುಸಾರಿತಾ - ಯೋಗ್ಯತಾನುಗುಣ್ಯ - ಎಂದರ್ಥ ಯಾವಾನೇ ವಾಧಿಕಾರೇಷು ವಿಶೇಷೋಽನೂನ ಏವ ಹಿ । ತತೋ ಭೂಮತ್ವ ದೃಷ್ಟ್ಯಾ ತು ಬ್ರಹ್ಮಾದೀನಾಂ ಪೃಥಕ್ ಪೃಥಕ್ ಎಂಬ ವಚನದಿಂದ ಸಾಧಕರು ತಮ್ಮ ಯೋಗ್ಯತಾನುಗುಣವಾಗಿ ಪೂರ್ಣತ್ವವನ್ನು ಉಪಾಸನೆ ಮಾಡಬೇಕೆಂದು ಸಿದ್ಧವಾಗುತ್ತದೆ.

೩೯) ಓಂ ವಿಕಲ್ಪೋ ವಿಶಿಷ್ಟ ಫಲತ್ವಾತ್ ಓಂ

ಶುದ್ಧ ವೈರೂಪ್ಯವು ಇಲ್ಲಿ ಪೂರ್ವಪಕ್ಷಯುಕ್ತಿ - ಶುದ್ಧ =ಮೋಕ್ಷ ಸಾಧನವಾದ ಬಿಂಬರೂಪ. ಇತರ ಭಗವದ್ರೂಪಗಳಲ್ಲಿ ಅದಕ್ಕಿಂತ ವೈರೂಪ್ಯ ಅವಶ್ಯೋಪಾಸ್ಯತ್ವಾಭಾವ ಎಂದರ್ಥ. ಮೋಕ್ಷ ಸಾಧನವಾದ ಬಿಂಬ ರೂಪಕ್ಕಿಂತ ಬೇರೆ ರೂಪಗಳನ್ನು ಉಪಾಸನೆ ಮಾಡುವ ಆವಶ್ಯಕತೆ ಇಲ್ಲವಾದ್ದರಿಂದ ಉಪಾಸನೆ ಮಾಡಕೂಡದು ಎಂದು ಪೂರ್ವಪಕ್ಷ.

ಅವಿಘ್ನತ್ವವು ಸಿದ್ಧಾಂತ ಸ್ಥಾಪಕಯುಕ್ತಿ - ವಿಘ್ನ ಪರಿಹಾರ ಸಾಧನವಾದ್ದರಿಂದ ಬಿಂಬಾತಿರಿಕ್ತವಾದ ನರಸಿಂಹಾದಿರೂಪಗಳನ್ನೂ ಉಪಾಸನೆ ಮಾಡಬೇಕು.

೪೦) ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್
ನ ವಾ ಪೂರ್ವಹೇತ್ವಭಾವಾತ್ ಓಂ

ಅಂಗತ್ವವು ಪೂರ್ವಪಕ್ಷಯುಕ್ತಿ - ಮೋಕ್ಷಕ್ಕೆ ಅಂಗಭೂತವಾದ ಗುರ್ವನುಗ್ರಹವನ್ನು ಸಂಪಾದಿಸಲು ಗುರು ದಕ್ಷಿಣಾದಿಗಳು ಆವಶ್ಯಕ. ಅದಕ್ಕೆ ಅಂಗವಾದ ಧನಕನಕಾದಿಗಳಿಗಾಗಿ ಶ್ರೀಕರ ಮೊದಲಾದ ಭಗವದ್ರೂಪಗಳನ್ನು ಉಪಾಸನೆ ಮಾಡಬೇಕೆಂದು ಪೂರ್ವಪಕ್ಷ.

ಅವಿರೋಧವು ಸಿದ್ಧಾಂತ ಯುಕ್ತಿ - ಶ್ರೀಕರಾದಿ ಭಗವದ್ರೂಪಗಳ ಉಪಾಸನೆಯು ವೈಕಲ್ಪಿಕ. ಅಂದರೆ ಆ ರೂಪಗಳನ್ನುಪಾಸನೆ ಮಾಡದಿದ್ದರೆ ಮೋಕ್ಷಕ್ಕೇನೂ ವಿರೋಧವಿಲ್ಲ. ಏಕೆಂದರೆ ಧನಾಪೇಕ್ಷೆ ಇಲ್ಲದ ಗುರುಗಳಿಂದ ಜ್ಞಾನವನ್ನು ಸಂಪಾದಿಸಬಹುದು. ಉಪಾಸನೆ ಮಾಡುವುದಾದರೂ ಹರಿ ಪ್ರಸಾದಕ್ಕಾಗಿ ಮಾಡಬೇಕು ಹೊರತು ಕಾಮ್ಯ ಫಲಕ್ಕಾಗಿ ಅಲ್ಲ.

೪೧) ಓಂ ಅಂಗೇಷು ಯಥಾಶ್ರಯಭಾವಃ ಓಂ

ಅವಿಶೇಷ ದೃಶಿ ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ - ಬ್ರಹ್ಮಾ ಶಿರಸಿ, ಲಲಾಟೇ ರುದ್ರ: (ಬ್ರಹ್ಮದೇವರು ಭಗವಂತನ ತಲೆಯಲ್ಲಿ ರುದ್ರನು ಹಣೆಯಲ್ಲಿ ಆಶ್ರಯಿಸಿರುತ್ತಾರೆ) ಎಂಬ ಶ್ರುತಿಯಲ್ಲಿ ಹೇಳಿದಂತೆ ಉಪಾಸನೆ ಮಾಡಲು ದೇವತೆಗಳು ಮಾತ್ರ ಅಧಿಕಾರಿಗಳು ಎಂಬ ವಿಷಯದಲ್ಲಿ ವಿಶೇಷ

ವಚನವೇನೂ ಇಲ್ಲವಾದ್ದರಿಂದ ಎಲ್ಲರೂ ಆರೀತಿಯಾಗಿ ಉಪಾಸನೆ ಮಾಡಬಹುದು ಎಂದು ಪೂರ್ವಪಕ್ಷ.

ಗುಣವೈಶೇಷ್ಯವು ಸಿದ್ಧಾಂತ ಯಕ್ತಿ - ಮುಕ್ತಿಯಲ್ಲಿ ಭಗವಂತನ ಆಯಾ ಅಂಗಗಳಲ್ಲಿ ಆಶ್ರಯಸಿರುವಿಕೆ ಆಯಾ ದೇವತೆಗಳ ವಿಶೇಷ ಗುಣವಾಗಿದೆ. ಆದ್ದರಿಂದ ಆಯಾ ದೇವತೆಗಳು ಮಾತ್ರ ನಾನು ಈ ಅಂಗವನ್ನು ಆಶ್ರಯಿಸಿದವನು ನನಗೆ ಆಧಾರವಾದ ಇಂತಹ ಅಂಗವಿಶಿಷ್ಟನು ಭಗವಂತನು ಎಂದು ಉಪಾಸನೆ ಮಾಡಲು ಅರ್ಹರಾಗಿದ್ದಾರೆ.

೪೨) ಓಂ ನವಾ ತತ್ಸಹಭಾವಾತ್ ಶ್ರುತೇಃ ಓಂ

ಕ್ರಿಯಾ ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ - ಉಪಾಸನೆಯೂ ಒಂದು ಕ್ರಿಯೆಯೇ ಆದ್ದರಿಂದ ಯಾಗ ಕ್ರಿಯೆಯನ್ನು ವಿಧಿಸುವಾಗ ಜ್ಯೋತಿಷ್ಟೋಮೇನ ಯಜೇತ ಎಂದು ಯಾಗವನ್ನು ಹೇಳದಂತೆ ಪ್ರತಿಶಾಖೆ ಯಲ್ಲಿಯೂ ಉಪಾಸನಾವಿಧಿವಾಕ್ಯದಲ್ಲಿ ಉಪಾಸೀತ ಎಂಬುದಾಗಿ ಮಾತ್ರ ಹೇಳಿದಂತೆ ಚಕ್ಷೋಃ ಸೂರ್ಯೋ ಅಜಾಯತ ಇತ್ಯಾದಿಯಾಗಿ ಅಂಗಾಶ್ರಿತತ್ವವನ್ನೂ ಹೇಳಬೇಕಾಗಿತ್ತು. ಆದರೆ ಉಪಾಸನಾ ವಿಧಿ ವಾಕ್ಯದಲ್ಲಿ ನಿಯಮೇನ ಆ ಧರ್ಮವನ್ನು ವಿಧಿಸಿಲ್ಲವಾದ್ದರಿಂದ ಅಂಗಾಶ್ರಿತತ್ವವು ಅವಶ್ಯ ಉಪಾಸನೀಯವಲ್ಲ. ಎಂದು ಪೂರ್ವಪಕ್ಷ.

ಇಲ್ಲಿ ಆಗಮವು ಸಿದ್ಧಾಂತ ಯುಕ್ತಿ - ಅಂಗಾಶ್ರಿತತ್ವಾದಿಗಳು ಯಾವ ಯಾವ ಶಾಖೆಗಳಲ್ಲಿ ಹೇಳಲ್ಪಟ್ಟಿವೆಯೋ ಆಯಾ ಶಾಖೆಗಳಿಂದ ಅವುಗಳನ್ನು ಉಪ ಸಂಹಾರ ಮಾಡಿ ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಆಯಾ ಶಾಖೆಗಳಲ್ಲಿ ಹೇಳಿದ್ದು ವ್ಯರ್ಥವಾಗುತ್ತದೆ. ಎಂಬ ಆಗಮವಿರುವುದರಿಂದ ಆಯಾ ಅಧಿಕಾರಿಗಳು ಅಂಗಾಶ್ರಿತತ್ವವನ್ನು ಉಪಾಸನೆ ಮಾಡಬೇಕು. ಎಲ್ಲರೂ ಮಾಡಕೂಡದು ಎಂಬ ಅಭಿಪ್ರಾಯವಿದ್ದದ್ದರಿಂದ ಉಪಾಸನಾ ವಿಧಿ ವಾಕ್ಯದಲ್ಲಿ ಹೇಳಿಲ್ಲ. ಎಂದು ಸಿದ್ಧಾಂತ.

**ಅಧ್ಯಯನಾದಿ ಲಕ್ಷಣ**

ವೇದಗಳ ಅಧ್ಯಯನವೆಂದರೆ ಗುರುಗಳು ಉಚ್ಚರಿಸಿದಂತೆ ತಾನೂ ಉಚ್ಚರಿಸಲು ಸಾಧ್ಯವಾಗುವಂತೆ ಉಚ್ಚಾರಣೆ ಕಲಿಯುವುದು. ಗುರುಗಳ

ಉಪದೇಶದಿಂದ ಹುಟ್ಟಿದ ವಾಕ್ಯಗಳ ಅರ್ಥದ ಜ್ಞಾನವೇ ಶ್ರವಣ. ಹೀಗೆ ತಿಳಿದ ಅರ್ಥವನ್ನು ಯುಕ್ತಿಗಳಿಂದ ನಿಶ್ಚಯಿಸಿಕೊಳ್ಳುವುದು ಮನನ. ಹೀಗೆ ಅಧ್ಯಯನ-ಶ್ರವಣ-ಮನನಗಳಿಂದ ತಮ್ಮ ತಮ್ಮ ಶಕ್ತಿಗನುಸಾರವಾಗಿ ವೇದದ ಶಾಖೆಗಳನ್ನೂ ಅಧ್ಯಯನ ಮಾಡಬೇಕೆಂದು 'ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ' ಎಂಬ ಸೂತ್ರದಲ್ಲಿ ವೇದವ್ಯಾಸರು ಹೇಳಿದ್ದಾರೆ.

**ವಿಶ್ವಜಿತ್ ಯಾಗದ ಅಧಿಕರಣ ಮೀಮಾಂಸಾ**

ವಿಶ್ವಜಿತಾ ಯಜೇತ ಎಂಬ ವಾಕ್ಯದಲ್ಲಿ ಯಾವುದೇ ಸ್ವರ್ಗಾದಿ ಫಲವು ಶ್ರುತವಾಗಿಲ್ಲವಾದ್ದರಿಂದ ಸ್ವರ್ಗಕಾಮಾದಿರೂಪ ನಿಯೋಜ್ಯ (ಅಧಿಕಾರಿ) ಇಲ್ಲ. ಯಾಗವನ್ನು ಮಾಡಬೇಕೆಂದು ಹೇಳಿದ್ದರಿಂದಲೇ ವಾಕ್ಯವು ಪೂರ್ಣವಾಗುವುದರಿಂದ ಇಲ್ಲಿ ಸ್ವರ್ಗಕಾಮಾದಿ ರೂಪಪದವನ್ನು ಅಧ್ಯಾಹಾರ ಮಾಡಿಕೊಳ್ಳುವ ಆವಶ್ಯಕತೆಯೂ ಇಲ್ಲ. ಹೀಗೆ ವಿಶ್ವಜಿದ್ಯಾಗಕ್ಕೆ ಫಲವಿಲ್ಲದಿರುವುದರಿಂದ ಅದರಲ್ಲಿ ಯಾರೂ ಪ್ರವೃತ್ತಿ ಮಾಡಲಾರರು. ಆದ್ದರಿಂದ ಅದನ್ನು ಹೇಳುವ ವಿಶ್ವಜಿತಾ .. ಎಂಬ ವಾಕ್ಯವು ಅಪ್ರಮಾಣವೇ ಎಂದು ಪೂರ್ವಪಕ್ಷ.

ಸಿದ್ಧಾಂತ - ಸಕಲ ವೇದಗಳಿಗೂ ಪ್ರವರ್ತಕತ್ವವಿದೆಯಾದ್ದರಿಂದ ವಿಶ್ವಜಿತಾ ಎಂಬುದೂ ಕರ್ಮದಲ್ಲಿ ಪುರುಷನನ್ನು ಪ್ರೇರಿಸಬೇಕು. ಆದ್ದರಿಂದ ಪ್ರವರ್ತಕತ್ವಕ್ಕಾಗಿ ಈ ವಾಕ್ಯದಲ್ಲೂ ಸ್ವರ್ಗ ಕಾಮಾದಿ ಪದವನ್ನೂ ಅಧ್ಯಾಹಾರ ಮಾಡಿಕೊಂಡು ನಿಯೋಜ್ಯನನ್ನೂ ಅಂಗೀಕರಿಸಬೇಕು. ಆದ್ದರಿಂದ ಈ ವಾಕ್ಯವು ಅಪ್ರಮಾಣವಲ್ಲ.

ಹೀಗೆ ವಿಶ್ವಜಿದಾದಿ ವಾಕ್ಯಗಳಲ್ಲಿ ನಿಯೋಜ್ಯನನ್ನು ಕಲ್ಪಿಸುವಂತೆ ಸ್ವಾಧ್ಯಾಯೋಽಧ್ಯೇತವ್ಯ (ವೇದವನ್ನು ಓದಬೇಕು) ಎಂಬ ವಾಕ್ಯದಲ್ಲಿ ನಿಯೋಜ್ಯಕಲ್ಪನೆ ಯುಕ್ತವಲ್ಲ ಏಕೆಂದರೆ ಅಷ್ಟವರ್ಷಂ ಬ್ರಾಹ್ಮಣಮುಪ ನಯೀತ ತಮಧ್ಯಾಪಯೀತ ಎಂಬ ವಾಕ್ಯದಿಂದ ಎಂಟು ವರ್ಷದ ಹುಡುಗನನ್ನು ಕರೆತಂದು ಅವನನ್ನು ಓದಿಸಬೇಕು ಎಂದು ಗೊತ್ತಾಗುತ್ತದೆ. ಅದೇ ವಿಧಿವಾಕ್ಯ. ಆದ್ದರಿಂದ ಸ್ವಾಧ್ಯಾಯೋ... ಎಂಬುದು ಅನುವಾದಕವೆಂದು ಪ್ರಾಭಾಕರರ ಅಭಿಪ್ರಾಯ.

ಇದು ಸರಿಯಲ್ಲ ಏಕೆಂದರೆ ಅಧ್ಯಯನವು ನಿತ್ಯಕರ್ಮ ಅಧ್ಯಾಪನವು ಕಾಮ್ಯಕರ್ಮ.

ಷಣ್ಣಾಂ ತು ಕರ್ಮಣಾಂ ಮಧ್ಯೇ ತ್ರೀಣಿ ಕರ್ಮಾಣಿ ಜೀವಿಕಾ .।
ಯಾಜನಾಧ್ಯಾಪನೇ ಚೈವ ವಿಶಿಷ್ಟಾಚ್ಚ ಪ್ರತಿಗ್ರಹಃ ..॥

(ಬ್ರಾಹ್ಮಣನ ಅಧ್ಯಯನ ಅಧ್ಯಾಪನ ಯಜನ ಯಾಜನ, ದಾನ ಪ್ರತಿಗ್ರಹ ಗಳೆಂಬ ಆರು ಕರ್ತವ್ಯಗಳಲ್ಲಿ ಅಧ್ಯಾಪನ ಯಾಜನ ವಿಶಿಷ್ಟರಿಂದ ಪ್ರತಿಗ್ರಹಗಳೆಂಬ ಮೂರು ಕರ್ಮಗಳು ಜೀವನಕ್ಕಾಗಿರುವವು, ಅವಗಳನ್ನೂ ಅವಶ್ಯ ಮಾಡಲೇ ಬೇಕೆಂದಿಲ್ಲ) ಎಂಬ ಸ್ಮೃತಿಯಂತೆ ಕಾಮ್ಯಕರ್ಮವಾದ ಅಧ್ಯಾಪನವು ನಿತ್ಯವಾದ ಅಧ್ಯಯನಕ್ಕೆ ಪ್ರಯೋಜಕವಾಗಲಾರದು.

(ಬ್ರಾಹ್ಮಣರು ವೇದಗಳನ್ನು ಅಧ್ಯಯನ ಮಾಡದಿದ್ದರೆ ಜಾತಿ ಬಾಹ್ಯರಾಗುವರೆಂದು

ಯೋಽನಧೀತ್ಯ ದ್ವಿಜೋ ವೇದಾನ್ ಅನ್ಯತ್ರ ಕುರುತೇ ಶ್ರಮಂ ।
ಸ ಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥

ಎಂಬ ಸ್ಮೃತಿಯು ಹೇಳುವುದರಿಂದ ಅಧ್ಯಯನವು ನಿತ್ಯಕರ್ಮವೆಂದು ಸಿದ್ಧವಾಗಿದೆ) ಹೀಗೆ ಪ್ರಾಭಾಕರರ ಮತವು ಸರಿಯಲ್ಲವೆಂದು ಸುಧಾದಲ್ಲಿ ತೋರಿಸಿದ್ದಾರೆ.

ಇಲ್ಲಿ ಉಪನಯೀತ ಎಂಬಲ್ಲಿ ಪ್ರಾಯಶಃ ಪರಸ್ಮೈ ಪದದಲ್ಲಿರುವ ನೀ ಧಾತುವಿಗೆ ಆತ್ಮನೇ ಪದವನ್ನು ಹೇಳುವ ಸೂತ್ರ - 'ಸಂಮಾನನಾ ಉತ್ಸಜನ ಆಚಾರ್ಯಕರಣ ಜ್ಞಾನ-ಭೃತಿ-ವಿಗಣನ - ವ್ಯಯೇಷುನಿಯಃ' ಎಂಬುದು ಇದಕ್ಕೆ ಸಂಮಾನನಂ - ಪೂಜೆ, ಉತ್ಸಂಜನಂ-ಬಿಡುವುದು, ಆಚಾರ್ಯ ಕರಣಂ-ತನಗೆ ಆಚಾರ್ಯತ್ವ ಹೇಗೆ ಬರುತ್ತದೋ ಹಾಗೆ ಮಾಡುವುದು, ಜ್ಞಾನಂ-ವಸ್ತುವನ್ನು ಸರಿಯಾಗಿ ತಿಳಿಯುವುದು, ಕಾರ್ಯಗಳಿಗೆ ವಿನಿಯೋಗಿಸುವುದು ಇಷ್ಟು ಅರ್ಥಗಳಲ್ಲಿ ನೀ ಧಾತುವಿಗೆ ಆತ್ಮನೇ ಪದವು ಬರುತ್ತದೆ ಎಂದು ಅರ್ಥ. ಹೀಗೆ ಆತ್ಮನೇ ಪದ ಬಂದಾಗ ಅಷ್ಟವರ್ಷಂ ಬ್ರಾಹ್ಮಣಂ ಉಪನಯೀತ ಎಂಬುದಕ್ಕೆ ಅಧ್ಯಯನ ಮಾಡಿಸುವುದಕ್ಕಾಗಿ ಎಂಟು ವರ್ಷದ ಬ್ರಾಹ್ಮಣನನ್ನು ತನ್ನ ಹತ್ತಿರ ಕರೆದು ಕೊಂಡು ಬರುತ್ತಾನೆ.

ಎಂದು ಅರ್ಥವಾಗುತ್ತದೆ. ಆದ್ದರಿಂದ ಆಚಾರ್ಯಕರಣದ ಲಾಭವಾಗುತ್ತದೆ.

**ಗುಣೇ ತ್ವನ್ಯಾಯ ಕಲ್ಪನಾ - ಮೀಮಾಂಸಾ**

ಮುಖ್ಯ ಹಾಗೂ ಅಮುಖ್ಯ ಎರಡರಲ್ಲೂ ಸ್ವಾರಸ್ಯ ಕೂಡುವುದಿಲ್ಲ. ಯಾವುದರಲ್ಲಾದರೂ ಒಂದರಲ್ಲಿ ಮಾತ್ರ ಸ್ವಾರಸ್ಯ ಅಂಗೀಕರಿಸಲು ಸಾಧ್ಯ. ಆಗ ಯಾವುದರಲ್ಲಿ ಸ್ವಾರಸ್ಯವನ್ನಂಗೀಕರಿಸಬೇಕೆಂದು ಪ್ರಶ್ನೆ ಬಂದಾಗ ಜೈಮಿನಿಗಳು ಈ ಸೂತ್ರದಿಂದ ನಿರ್ಣಯ ಕೊಟ್ಟಿದ್ದಾರೆ. ಗುಣೇತ್ವನ್ಯಾಯ ಕಲ್ಪನಾ (ಅಮುಖ್ಯವಾದ್ದರಲ್ಲಿಯೇ ಅಸ್ವಾರಸ್ಯವನ್ನಂಗೀಕರಿಸಬೇಕು)

ಉದಾಹರಣೆಯನ್ನೂ ಶಾಬರ ಭಾಷ್ಯದಲ್ಲಿ ಹೀಗೆ ತೋರಿಸಲಾಗಿದೆ. ಅಗ್ನಿಷೋಮೀಯ ಪಶುಯಾಗದಲ್ಲಿ ಒಂದೇ ಪಶುವನ್ನು ಆಹುತಿ ಕೊಡಲಾಗುತ್ತದೆ. ಆದ್ದರಿಂದ ಪಶುವನ್ನು ಕಟ್ಟಲು ಬಳಸುವ (ಹಗ್ಗ) ಪಾಶವೂ ಒಂದೇ ಆಗಿರುತ್ತದೆ. ಆದರೆ ಇಲ್ಲಿ ಬಳಸುವ ಅದಿತಿಃ ಪಾಶಾನ್ ಪ್ರಮುಮೋಕ್ತು (ಅದಿತಿ ದೇವತೆಯು ಪಾಶಗಳನ್ನು ಬಿಡಿಸಲಿ) ಎಂಬ ಮಂತ್ರದಲ್ಲಿ ಬಹುವಚನಾಂತವಾದ ಪಾಶಾನ್ ಎಂಬ ಶಬ್ದವಿದೆ ಈ ಯಾಗದಲ್ಲಿ ಹಗ್ಗವು ಒಂದೇ ಆದ್ದರಿಂದ ಈ ಮಂತ್ರವನ್ನು ಈ ಏಕಪಶುಕ ಯಾಗದಲ್ಲಿ ಬಳಸದೇ ಬಹುಪಶುಕಯಾಗಗಳಲ್ಲಿ ಮಾತ್ರ ಬಳಸಬೇಕು. ಇಲ್ಲ ದಿದ್ದರೆ ಈ ಬಹುವಚನಕ್ಕೆ ಸ್ವಾರಸ್ಯ (ಮುಖ್ಯಾರ್ಥತ್ವ) ಕೂಡುವುದಿಲ್ಲ. ಹೀಗೆ ಪೂರ್ವಪಕ್ಷ.

ಸಿದ್ಧಾಂತ - ಪಾಶವೆಂಬ ಪ್ರಾತಿಪಾದಿಕ ಮುಖ್ಯವಾದದ್ದು. ಆದ್ದರಿಂದ ಅದರಲ್ಲೇ ಸ್ವಾರಸ್ಯವನ್ನಂಗೀಕರಿಸಬೇಕು. ಹೊರತು ಅಮುಖ್ಯವಾದ ವಿಭಕ್ತಿಯ ಸ್ವಾರಸ್ಯಕ್ಕನುಗುಣವಾಗಿ ಮುಖ್ಯವಾದ ಪ್ರಾತಿಪದಿಕದಲ್ಲಿ ಅಸ್ವಾರಸ್ಯವನ್ನಂಗೀಕರಿಸಬಾರದು. ಆದ್ದರಿಂದ ಈ ಮಂತ್ರವನ್ನು ಅಗ್ನಿಷೋಮೀಯ ಪಶುಯಾಗದಲ್ಲೇ ಬಳಸಬೇಕು. ಪಾಶದ ಅವಯುವಗಳು ಬಹಳವಾದ್ದರಿಂದ ಪಾಶಾನ್ ಎಂದು ಬಹುವಚನವಿದೆ ಎಂದು ಅಮುಖ್ಯವಾದ ವಿಭಕ್ತಿಯಲ್ಲಿ ಅಸ್ವಾರಸ್ಯವನ್ನಂಗೀಕರಿಸಬೇಕು.

ಹಾಗೆಯೇ, ಶ್ರವಣಾದಿಗಳಿಗೂ ಗುರುವೇ ಅಂಗವಾದ್ದರಿಂದ ಗುರು ಅಪ್ರಧಾನ ಶ್ರವಣವೇ ಪ್ರಧಾನ. ಸರ್ವಜ್ಞನಾದ ಗುರುವೇ ಶ್ರವಣಾದಿಗಳಿಗೆ

ಅಂಗ ಅಂತಹ ಗುರುವು ಸಿಗದಿದ್ದರೆ 'ಗುಣೇ ತ್ವನ್ಯಾಯ ಕಲ್ಪನಾ' ಎಂಬ ನ್ಯಾಯದಂತೆ ಅಂಗವಾದ ಗುರುವಿನಲ್ಲಿ ಅಸ್ವಾರಸ್ಯವನ್ನಿಟ್ಟುಕೊಂಡು ಅಸರ್ವಜ್ಞನಾದ ಗುರುವಿನಿಂದಾದರೂ ಮುಖ್ಯವಾದ ಶ್ರವಣಾದಿಗಳನ್ನು ನಡೆಸಲೇಬೇಕು.

**ದುಃಶಾಸ್ತ್ರಂ ಪರಿವರ್ಜಯೇತ್**

ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಃಶಾಸ್ತ್ರಂ ಪರಿವರ್ಜಯೇತ್ (ಯಾವಾಗಲೂ ಒಳ್ಳೆಯ ಶಾಸ್ತ್ರಗಳನ್ನು ಓದಬೇಕು ಕೆಟ್ಟ ಶಾಸ್ತ್ರಗಳನ್ನು ಸರ್ವಥಾ ವರ್ಜಿಸಬೇಕು ಓದಬಾರದು) ಎಂದು ಅನುವ್ಯಾಖ್ಯಾನದ ಈ ಶ್ಲೋಕದಲ್ಲಿ ಹೇಳಿದ್ದಾರೆ.

ದುಃಶಾಸ್ತ್ರಂ ನಾಭ್ಯಸೇತ್ ಎಂದಷ್ಟೇ ಹೇಳಿದ್ದರೂ ದುಃಶಾಸ್ತ್ರಧ್ಯಯನ ಮಾಡಬಾರದೆಂದು ಗೊತ್ತಾಗುತ್ತಿತ್ತು. ಆದರೂ ಪರಿವರ್ಜಯೇತ್ ಎಂದು ಹೇಳಿದ್ದಾರೆ. ಆದ್ದರಿಂದ ಕೇವಲ ಉದಾಸೀನನಾಗಿ ಓದದಿರುವುದಷ್ಟೇ ಅಲ್ಲ, ಅದು ಹೇಯ ಎಂದು ಕೂಡ ತಿಳಿಯಬೇಕು. ಎಂದು ತಿಳಿಯುತ್ತದೆ.

ಏಕೆಂದರೆ

ಅಸಚ್ಛಾಸ್ತ್ರಾದಿಗಮನಂ ವ್ಯಸನಾದಾತ್ಮವಿಕ್ರಯಃ ।
ವ್ರಾತತಾತ್ಮಾರ್ಥಪಂಚತ್ವಮೆಕೈಕಮುಪಪಾತಕಮ್ ॥

ಎಂಬ ಸ್ಮೃತಿಯಲ್ಲಿ ಹಾಗೂ

ಅಸಚ್ಛಾಸ್ತ್ರಾಧಿಗಮನಂ ಶುಷ್ಕತರ್ಕಾವ ಲಂಬನಮ್ ।
ಮೌರ್ಖ್ಯೇನಾಧ್ಯಾಪನಂ ಬ್ರಹ್ಮನ್ ಉಪಪಾತಕ ಸಂಜ್ಞಿತಮ್॥

ಎಂಬ ಪುರಾಣದಲ್ಲೂ ಅಸಚ್ಛಾಸ್ತ್ರಾಭ್ಯಾಸವನ್ನೂ ಉಪಪಾತಕವೆಂದು ಪರಿಗಣಿಸಲಾಗಿದೆ.

**ಗರ್ಭೇ ಬಾಲ್ಯೇಽಪ್ಯಪೌಷ್ಕಲ್ಯಾತ್ ಎಂಬ ಭಾಗವತ ಶ್ಲೋಕ ವಿವರಣೆ**

' ದೋಷಗಳಿರುವುದರಿಂದ ಎಲ್ಲರಿಗೂ ಮುಕ್ತಿಯಾಗುತ್ತಿಲ್ಲ. ಆ ದೋಷಗಳು ಎಲ್ಲ ಶಿಶು, ಬಾಲಕ, ಯುವಕ, ವೃದ್ಧರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ಇದ್ದೇ ಇರುತ್ತವೆ. 'ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದಕ್ಕೆ ವ್ಯಾಖ್ಯಾನ ಮಾಡುವಾಗ ಜಯತೀರ್ಥರು 'ಗರ್ಭೇ ಬಾಲ್ಯೇ' ಎಂಬ

ಚತುರ್ಥಸ್ಕಂಧ ಭಾಗವತ ಶ್ಲೋಕವನ್ನುದಾಹರಿಸಿ ಬಾಲ ಮುಗ್ಧಾದಿಗಳಲ್ಲೂ ಈ ದೋಷಗಳಿರುತ್ತವೆಂದು ತೋರಿಸಿದ್ದಾರೆ. ಆ ಶ್ಲೋಕದ ಪೂರ್ಣ ರೂಪ ಹಾಗೂ ಅರ್ಥಗಳು ಹೀಗಿವೆ.

ಗರ್ಭೇ ಬಾಲ್ಯೇಽಪ್ಯಪೌಷ್ಕಲ್ಯಾತ್ ಏಕಾದಶ ವಿಧಂ ತದಾ।
ಲಿಂಗಂ ನ ದೃಶ್ಯತೇ ಯೂನಃ ಕುಹ್ವಾಂ ಚಂದ್ರಮಸೋ ಯಥಾ ॥

ಇಲ್ಲಿ ಲಿಂಗವೆಂದರೆ ನಾನು ನನ್ನದು ಎಂಬ ಜ್ಞಾನ. ಇದು 'ನಾಹಂ ಮಮೇತ್ಯಯಂ ಭಾವಃ' ಎಂಬ ಪೂರ್ವಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಈ 'ನಾನು ನನ್ನದು' ಎಂಬ ಜ್ಞಾನದಿಂದಲೇ ಪುರುಷನಲ್ಲಿರುವ ಕಾಮ ಕ್ರೋಧಾದಿಗಳು ತಿಳಿಯಬರುತ್ತದೆ. ಈ ಕಾಮ ಕ್ರೋಧಾದಿಗಳು ಬಾಲ್ಯದಲ್ಲಿ ಗರ್ಭದಲ್ಲಿ ಪುರುಷನಿಗೆ ಇದ್ದರೂ, ಬಹಳ ಇರುವುದಿಲ್ಲವಾದ್ದರಿಂದ ಸ್ಪಷ್ಟವಾಗಿ ಗೋಚರಾಗುವುದಿಲ್ಲ. ಆದರೆ ಯೌವನದಲ್ಲಿರುವ ಪುರುಷನಲ್ಲಿ ಐದು ಕರ್ಮೇಂದ್ರಿಯಗಳು ಐದು ಜ್ಞಾನೇಂದ್ರಿಯಗಳು ಹಾಗೂ ಮನಸ್ಸೆಂಬ ಹನ್ನೊಂದು ಇಂದ್ರಿಯಗಳಿಂದ ವಿಶೇಷವಾಗಿ ಈ ಕಾಮಾದಿಗಳು ವ್ಯಕ್ತವಾಗುತ್ತವೆ. ಚಂದ್ರನು ಅಮಾವಾಸ್ಯೆಯ ದಿನ ಸೂರ್ಯನ ಜೊತೆಗಿದ್ದಾಗ ಅವನ ಬಿಂಬವು ಕಾಣಿಸುವುದಿಲ್ಲ. ಆದರೆ ಪಾಡ್ಯದ ದಿನ ಅದು ಸ್ವಲ್ಪ ಕಾಣಿಸುತ್ತದೆ. ನಂತರ ಬಿದಿಗೆ ತದಿಗೆಗಳಲ್ಲಿ ಸ್ವಲ್ಪ ಸ್ವಲ್ಪ ಹೆಚ್ಚಾಗಿ ಕಾಣಿಸುತ್ತದೆ ಹಾಗೆಯೇ ಈ ಕಾಮಾದಿಗಳೂ ದಿನ ದಿನ ಕಳೆದಂತೆ ಹೆಚ್ಚು ಹೆಚ್ಚು ಕಾಣಿಸುತ್ತವೆ.

ಕಾಮಾದಿಗಳು ನಾಲ್ಕು ವಿಧ ಪ್ರಸುಪ್ತ ,ತನು ,ವಿಚ್ಛಿನ್ನ ,ಉದಾರ ಎಂದು. ಇದರಲ್ಲಿ ಪ್ರಸುಪ್ತವೆಂದರೆ ಅವ್ಯಕ್ತ. ತನುವೆಂದರೆ ಸನ್ನತ. (ಬೇರೆ ಭಾವನೆಗಳಿಂದ ಪ್ರತಿರುದ್ಧವಾದದ್ದು) ವಿಚ್ಛಿನ್ನವೆಂದರೆ ಸುಂದರವಾದ ನಾನಾವಸ್ತುಗಳಲ್ಲಿ ವಿಕ್ಷಪ್ತವಾಗರುವುದು. ಉದಾರವೆಂದರೆ ಚೆನ್ನಾಗಿ ಅಭಿವ್ಯಕ್ತವಾಗಿರುವುದು ಈ ರೀತಿ ನಾಲ್ಕು ವಿಧವಾದ ಕಾಮಗಳು ಎಲ್ಲ ಹೊತ್ತಿನಲ್ಲಿ ಕಾಣದಿದ್ದರೂ ಕೆಲವು ಸಲ ಕಾಣುತ್ತವೆ.

### ಋಜುಗಳಿಗೆ ಮೋಕ್ಷ ವಿಲಂಬ ಪ್ರಾರಬ್ಧ ಕರ್ಮಗಳಿಂದಲ್ಲ

ಎಲ್ಲರಿಗೂ ದೋಷಗಳಿವೆ ಋಜುಗಳಿಗೂ ಪರಮೋತ್ಸಾಹರಾಹಿತ್ಯ ವೆಂಬ ದೋಷವಿರುವುದರಿಂದಲೇ ಮೋಕ್ಷವು ವಿಲಂಬವಾಗುತ್ತದೆ. ಎಂದು

ಋಜೂನಾ ಮೇಕ ಏವಾಸ್ತಿ ಪರಮೋತ್ಸಾಹವರ್ಜನಂ (ಋಜುಗಳಿಗೂ ಪರಮೋತ್ಸಾಹವರ್ಜನವೆಂಬ ದೋಷವಿದೆ) ಎಂಬ ಶ್ಲೋಕದಲ್ಲಿ ಹೇಳಿದ್ದಾರೆ.

ಆದರೆ ಋಜುಗಳು ಸಂಪೂರ್ಣವಾಗಿ ನಿರ್ದೋಷರೆಂದೇ ಅಂಗೀಕರಿಸಿದರೂ ಅವರ ಮೋಕ್ಷ ವಿಲಂಬಕ್ಕೆ ಪ್ರಾರಬ್ಧಕರ್ಮಗಳೇ ಕಾರಣವಾಗಿದ್ದಾವೆಂದು ಏಕೆ ಹೇಳಬಾರದು ? ಏಕೆಂದರೆ 'ಮುಕ್ತಿ ಫಲಾನಿಯಮಸ್ತದವಸ್ಥಾಧೃತೇ....' ಎಂಬ ಸೂತ್ರದಲ್ಲಿ ಅಪರೋಕ್ಷಜ್ಞಾನವಾದರೂ ಪ್ರಾರಬ್ಧ ಕರ್ಮಗಳನ್ನು ಅನುಭವಿಸದ ಹೊರತು ಮೋಕ್ಷವಾಗುವುದಿಲ್ಲ ಎಂದು ಹೇಳಿದ್ದಾರೆ. ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಅಪರೋಕ್ಷಜ್ಞಾನ ಬಂದಾಗ ಋಜುಗಳ ಪ್ರಾರಬ್ಧಕರ್ಮಗಳೂ ಕೂಡ ಭಗವದನುಗ್ರಹದಿಂದ ನಾಶವಾಗಬಹುದು. ಆದ್ದರಿಂದ ಅವುಗಳು ಋಜುಗಳ ಮೋಕ್ಷ ವಿಲಂಬಕ್ಕೆ ಕಾರಣವೆಂದು ಹೇಳಲಾಗುವುದಿಲ್ಲ.

**ಸಕೃದಸಕೃದನುಷ್ಠೇಯ ಕರ್ಮಗಳು**

ಕೆಲವು ಕರ್ಮಗಳನ್ನು ಒಂದು ಸಲ ಮಾಡಿದರೆ ಸಾಕು ಕೆಲವು ಕರ್ಮಗಳನ್ನು ಫಲ ಸಿಗುವ ತನಕ ಮಾಡುತ್ತಿರಬೇಕು. ಕ್ರಮವಾಗಿ ಅವುಗಳಿಗೆ ಉದಾ - ಯಜ್ಞದಲ್ಲಿ ಆಹುತಿ ಹಾಕುವ ಪುರೋಡಾಶ ತಯಾರಿಸಲು ಅಕ್ಕಿಬೇಕು. ಈ ಅಕ್ಕಿಗಳನ್ನು ನೀರಿನಿಂದ ಪ್ರೋಕ್ಷಿಸ ಬೇಕೆಂದು 'ವ್ರೀಹೀನ್ ಪ್ರೋಕ್ಷತಿ' ಎಂಬ ಶ್ರುತಿ ಹೇಳುತ್ತದೆ. ಈ ಪ್ರೋಕ್ಷಣದಿಂದ ವ್ರೀಹಿಗಳಲ್ಲಿ ಕಣ್ಣಿಗೆ ಕಾಣುವ ಯಾವುದೇ ಪ್ರಯೋಜನವೂ ಕಾಣುವುದಿಲ್ಲ. ಈ ರೀತಿ ಅದೃಷ್ಟ (ಪುಣ್ಯ) ರೂಪ ಫಲಜನಕ ಕರ್ಮಗಳನ್ನು ಒಂದು ಸಲ ಮಾಡಿದರೆ ಸಾಕು. ಆದರೆ ಯಾಗಾಗ್ನಿಯನ್ನು ಉತ್ಪಾದಿಸುವುದಕ್ಕಾಗಿ ಮಾಡುವ ಅರಣಿಮಥನ ಮತ್ತು ಭತ್ತಗಳ ಹೊಟ್ಟು ಹೋಗಿಸಲಿಕ್ಕಾಗಿ ಮಾಡುವ ಅವಘಾತ (ಕುಟ್ಟುವಿಕೆ) ಮೊದಲಾದವುಗಳನ್ನು ಅವುಗಳ ಫಲ ಸಿಗುವ ತನಕ ಮಾಡಬೇಕು. ಫಲ ಸಿಕ್ಕ ನಂತರವೇ ನಿಲ್ಲಿಸಬೇಕು. ಹಾಗೆಯೇ ಶ್ರವಣ ಮನನ ನಿದಿಧ್ಯಾಸನಗಳನ್ನು ಒಂದು ಸಲ ಮಾಡಿ ಮುಗಿಸಬೇಕೇ ಅಥವಾ ಮೋಕ್ಷ ಸಿಗುವ ತನಕ ನಿರಂತರ ಮಾಡುತ್ತಿರಬೇಕೆ? ಎಂದು ಸಂದೇಹಕ್ಕೆ ಉತ್ತರ ಹೀಗಿದೆ. ಈ ಶ್ರವಣ ಮನನಾದಿಗಳನ್ನು ನಿರಂತರ ಮಾಡುತ್ತಿರಬೇಕು. ಸಕೃತ್ - ಒಂದು ಸಲ ಅಸಕೃತ್ - ಅನೇಕ ಬಾರಿ.

**ಹತ್ಯಾ ಮತ್ತು ಬ್ರಹ್ಮ ಹತ್ಯಾ ಎಂಬ ಶಬ್ದಗಳ ಸಾಧುತ್ವ**

ಜೈನರ ಮತದಂತೆ ಅಪೌರುಷೇಯವಾದ ವೇದವನ್ನು ಒಪ್ಪದಿದ್ದರೆ ''ಇವು ಧರ್ಮಾಧರ್ಮಗಳು'' ಎಂಬ ನಿರ್ಣಯವಾಗುವುದಿಲ್ಲ. ಪರೋಪಕಾರವು ಧರ್ಮವೆಂದು ಹೇಗೆ ತೀರ್ಮಾನಿಸುವುದು? ಪರಹಿಂಸೆಯನ್ನೇ ಧರ್ಮವೆಂದು ಏಕೆ ಹೇಳಬಾರದು? ಎಂದು ''ಹತ್ಯಾಯಾ ಮೋಕ್ಷ ಹೇತುತ್ವಂ ಕುತೋ ಮಾನಾನ್ನಿವಾರ್ಯತೇ'' (ಪರಹತ್ಯೆಯೇ ಮೋಕ್ಷಸಾಧನವಲ್ಲವೆಂದು ಹೇಗೆ ತಿಳಿಯುವುದು?) ಎಂದು ಆಚಾರ್ಯರು ದೋಷವನ್ನು ಹೇಳಿದ್ದಾರೆ. ಇಲ್ಲಿ ಹತ್ಯಾ ಎಂಬ ಶಬ್ದದ ನಿಷ್ಪತ್ತಿ ಹೀಗಿದೆ. 'ಹನಸ್ತಚ' ಎಂಬ ಸೂತ್ರದಲ್ಲಿ ಹನ್ ಧಾತುವಿಗೆ ಕ್ಯಪ್ ಪ್ರತ್ಯಯ ಹಾಗೂ ನ ಕಾರಕ್ಕೆ ತಕಾರವು ಬರುತ್ತದೆಂದು ಹೇಳಲಾಗಿದೆ. ಆದ್ದರಿಂದ ಹತ್ ಯ ಆ (ಟಾಪ್) ಒಟ್ಟು ಸೇರಿದಾಗ ಹತ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಈ ಸೂತ್ರದಲ್ಲಿ 'ವದಃ ಸುಪಿ ಕ್ಯಪ್ ಚ 'ಎಂಬ ಹಿಂದಿನ ಸೂತ್ರದಿಂದ ಕ್ಯಪ್ ಎಂಬುದು ಅನುವೃತ್ತವಾದರೂ ಸುಪಿ ಎಂಬುದು ಅನುವೃತ್ತವಾಗುವುದಿಲ್ಲ ವಾದ್ದರಿಂದ ಸುಬಂತವಾದದ್ದು ಉಪಪದವಾಗದಿದ್ದಾಗಲೂ ಕ್ಯಪ್ ಬರುತ್ತದೆ. ಆದ್ದರಿಂದ ಕೇವಲ ಹತ್ಯಾ ಎಂಬ ಸುಬಂತೋಪಪದವಿಲ್ಲದ ರೂಪವು ನಿಷ್ಪನ್ನವಾಗುತ್ತದೆ. ಹೀಗೆ ಜಯತೀರ್ಥರು ಹೇಳಿದ್ದರಿಂದ ಈ ಹನಸ್ತಚ ಎಂಬ ಸೂತ್ರದಲ್ಲಿ ಸುಪಿ ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು ಎಂದು ಹೇಳುವ ವ್ಯಾಕರಣ ವೃತ್ತಿಕಾರರ ಅಭಿಪ್ರಾಯವು ಸರಿಯಲ್ಲವೆಂದು ಸೂಚಿತವಾಗುತ್ತದೆ. ಬ್ರಹ್ಮಹತ್ಯಾ ಎಂಬ ಶಬ್ದದಲ್ಲಿಯೂ ಮೊದಲಿಗೆ ಹತ್ಯಾ ಶಬ್ದದ ನಿಷ್ಪತ್ತಿಯ ನಂತರವೇ ಅದಕ್ಕೆ ಬ್ರಹ್ಮ ಶಬ್ದದೊಂದಿಗೆ ಷಷ್ಠೀ ಸಮಾಸವಾದಾದ ಆ ರೂಪ ನಿಷ್ಪತ್ತಿಯಾಗು ವುದರಿಂದ ಅದಕ್ಕೋಸ್ಕರವಾಗಿಯೂ ಈ ಸೂತ್ರದಲ್ಲಿ ಸುಪಿ ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವ ಆವಶ್ಯಕತೆಯಿಲ್ಲ. ವಾ ಸರೂಪೋಽಸ್ತ್ರಿಯಾಂ ಎಂಬ ಸೂತ್ರದಲ್ಲಿ ವಿಕಲ್ಪವಾಗಿ ಅಸರೂಪ ಪ್ರತ್ಯಯವು ಬೇರೆ ಪ್ರತ್ಯಯಗಳಿಗೆ ಬಾಧಕವಾಗುತ್ತದೆಂದು ಹೇಳಿರುವುದ ರಿಂದ ಘಞ್ ಪ್ರತ್ಯಯವು ಕ್ಯಪ್ ಗೆ ಬಾಧಕವಾದಾಗ ವ್ಯಾಘಾತ ಎಂಬ ರೂಪವೂ, ಕ್ಯಪ್ ಗೆ ಘಞ್ ಪ್ರತ್ಯಯವು ಬಾಧಕವಾಗದಿದ್ದಾಗ ವ್ಯಾಹತ್ಯಾ ಎಂಬ ರೂಪವೂ ಸಿದ್ಧವಾಗುತ್ತವೆ.

**ನಿತ್ಯಕರ್ಮಗಳ ಲಕ್ಷಣ**

''ಯುದಕರಣೇ ಪ್ರತ್ಯವಾಯಃ, ಬ್ರಾಹ್ಮಣ್ಯಾದಿಕಮೇವ ನಿಮಿತ್ತ ಮುಪಾದಾಯ ವಿಹಿತಂ ತತ್ ನಿತ್ಯಂ ಕರ್ಮ'' ಎಂದು ನಿತ್ಯಕರ್ಮದ ಲಕ್ಷಣವನ್ನು ಸುಧಾದಲ್ಲಿ ಭಾಟ್ಟ ಮತವನ್ನು ಅನುವಾದ ಮಾಡುವಾಗ ಹೇಳಿದ್ದಾರೆ. ಯಾವುದನ್ನು ಮಾಡದಿದ್ದಾಗ ಪಾಪವುಂಟಾಗುತ್ತದೋ ಅಂತಹ ಕೇವಲ ಬ್ರಾಹ್ಮಣ್ಯಾದಿಗಳನ್ನು ನಿಮಿತ್ತವಾಗಿಟ್ಟುಕೊಂಡು (ಬ್ರಾಹ್ಮಣರಾದವರು ಇಂಥ ಕೆಲಸ ಮಾಡಬೇಕು ಎಂದು) ಹೇಳಲ್ಪಟ್ಟ ಕರ್ಮವೇ ನಿತ್ಯಕರ್ಮ. ಉದಾ - ಬ್ರಾಹ್ಮಣರೆಲ್ಲರೂ ಸಂಧ್ಯಾವಂದನೆಯನ್ನು ಮಾಡಬೇಕೆಂದು ಹೇಳಿರುವುದರಿಂದ, ಕೇವಲ ಬ್ರಾಹ್ಮಣ್ಯವನ್ನೇ ನಿಮಿತ್ತ ವಾಗಿಟ್ಟುಕೊಂಡು ಸಂಧ್ಯಾವಂದನೆಯೆಂಬ ಕರ್ಮವು ವಿಹಿತವಾಗಿದೆ. ಈ ಸಂಧ್ಯಾವಂದನೆಯನ್ನು ಮಾಡದಿದ್ದರೆ ಬ್ರಾಹ್ಮಣರಿಗೆ ಪ್ರತ್ಯವಾಯ (ಪಾಪ) ವುಂಟಾಗುವುದು. ಆದ್ದರಿಂದ ಈ ಸಂಧ್ಯಾವಂದನೆ ನಿತ್ಯಕರ್ಮ. ಇದರಲ್ಲಿ ಕೇವಲ ಬ್ರಾಹ್ಮಣ್ಯಾದಿಗಳನ್ನು ನಿಮಿತ್ತವನ್ನಾಗಿಟ್ಟುಕೊಂಡು ವಿಹಿತವಾದ ಕರ್ಮವೇ ನಿತ್ಯಕರ್ಮವೆಂದು ಹೇಳಿದರೆ (ಯಾವುದನ್ನು ಮಾಡದಿದ್ದರೆ ಪ್ರತ್ಯವಾಯವಿದೆಯೆಂದು ಹೇಳದಿದ್ದರೆ) ಬ್ರಾಹ್ಮಣೋ ವಾಜಪೇಯೇನ ಯಜೇತ (ಬ್ರಾಹ್ಮಣನು ವಾಜಪೇಯ ಯಾಗವನ್ನು ಮಾಡಬೇಕು) ರಾಜಾ ರಾಜಸೂಯೇನ ಯಜೇತ (ಕ್ಷತ್ರಿಯನು ರಾಜಸೂಯಯಾಗವನ್ನು ಮಾಡಬೇಕು) ಎಂಬ ವಾಕ್ಯಗಳಿಂದ ಬ್ರಾಹ್ಮಣ್ಯ, ಕ್ಷತ್ರಿಯತ್ವಗಳನ್ನು ನಿಮಿತ್ತವಾಗಿಟ್ಟುಕೊಂಡು ಹೇಳಲ್ಪಟ್ಟ ವಾಜಪೇಯ ರಾಜಸೂಯ ಮುಂತಾದ ಕಾಮ್ಯ ಕರ್ಮಗಳೂ ನಿತ್ಯಕರ್ಮಗಳಾಗಬೇಕಾದೀತು. ಆದ್ದರಿಂದ (ಯದಕರಣೇ ಪ್ರತ್ಯವಾಯಃ) ಯಾವುದನ್ನು ಮಾಡದಿದ್ದಾಗ ಪ್ರತ್ಯವಾಯವುಂಟಾಗುವುದೋ ಎಂದು ಹೇಳಿದ್ದಾರೆ. ಬ್ರಾಹ್ಮಣರು ವಾಜಪೇಯ ಯಾಗ ಮಾಡದಿದ್ದರೂ ಪ್ರತ್ಯವಾಯವುಂಟಾಗುವುದಿಲ್ಲ ವಾದ್ದರಿಂದ ಈ ಲಕ್ಷಣಕ್ಕೆ ವಾಜಪೇಯಾದಿ ಗಳಲ್ಲಿ ಅತಿವ್ಯಾಪ್ತಿ ಇಲ್ಲ. ಯಾವುದನ್ನು ಮಾಡದಿದ್ದರೆ ಪಾಪವಿದೆಯೋ ಅದೇ ನಿತ್ಯ ಕರ್ಮವೆಂದು ಹೇಳಿದರೆ ನೈಮಿತ್ತಿಕವಾದ ಪಿತೃ ಶ್ರಾದ್ಧಾದಿಗಳನ್ನು ಮಾಡದಿದ್ದರೂ ಪ್ರತ್ಯವಾಯವಿರುವುದರಿಂದ ಅವೂ ನಿತ್ಯ ಕರ್ಮಾದಿಗಳಾಗಬೇಕಾದೀತು.

ಆದ್ದರಿಂದ ಕೇವಲ ಬ್ರಾಹ್ಮಣ್ಯಾದಿಗಳನ್ನು ನಿಮಿತ್ತವಾಗಿಟ್ಟುಕೊಂಡು ಹೇಳಲ್ಪಟ್ಟಿದ್ದು. ಎಂಬುದನ್ನೂ ಈ ಲಕ್ಷಣದಲ್ಲಿ ಸೇರಿಸಬೇಕು. ಈ ಪಿತೃಶ್ರಾದ್ಧಕ್ಕೆ ಕೇವಲ ಬ್ರಾಹ್ಮಣ್ಯವು ನಿಮಿತ್ತವಾಗಿಲ್ಲ. ಹೊರತು ತಂದೆಯ ಮರಣ ಮುಂತಾದವುಗಳೂ ನಿಮಿತ್ತವಾಗಿವೆ. ಆದ್ದರಿಂದ ಪಿತೃಶ್ರಾದ್ಧವು ನಿತ್ಯಕರ್ಮವಾಗಬೇಕಾಗಿಲ್ಲ. ಈ ರೀತಿ ಯಾವುದನ್ನು ಮಾಡದಿದ್ದಾಗ ಪ್ರತ್ಯವಾಯವಿದೆಯೋ ಅಂತಹ ಕೇವಲ ಬ್ರಾಹ್ಮಣ್ಯಾದಿಗಳನ್ನು ನಿಮಿತ್ತವನ್ನಾಗಿಟ್ಟುಕೊಂಡು ಹೇಳಲ್ಪಟ್ಟ ಕರ್ಮ ನಿತ್ಯಕರ್ಮ ಎಂಬ ಲಕ್ಷಣವು ಬೇರೆ ಎಲ್ಲೂ ಬರುವುದಿಲ್ಲ.

## ನೈಮಿತ್ತಿಕ ಕರ್ಮದ ಲಕ್ಷಣ

ಯಾವುದನ್ನು ಮಾಡದಿದ್ದಾಗ ಪ್ರತ್ಯವಾಯವಿದೆಯೋ ಮತ್ತು ಯಾವುದು ಆಗಂತುಕವಾದ ಪಿತೃಮರಣಾದಿಗಳನ್ನು ನಿಮಿತ್ತವನ್ನಾಗಿಟ್ಟು ಕೊಂಡು ವಿಹಿತವಾಗಿ ದೆಯೋ ಅದು ನೈಮಿತ್ತಿಕ. ಉದಾ - ಪಿತೃಶ್ರಾದ್ಧ. ತಂದೆಯ ಮರಣವೆಂಬ ನಿಮಿತ್ತವನ್ನಿಟ್ಟುಕೊಂಡು ಪಿತೃಶ್ರಾದ್ಧ ವಿಹಿತವಾಗಿದೆ ಹಾಗೂ ಅದನ್ನು ಮಾಡದಿದ್ದರೆ ಪ್ರತ್ಯವಾಯವಿದೆ. ಆದ್ದರಿಂದ ಪಿತೃಶ್ರಾದ್ಧ ನೈಮಿತ್ತಿಕ ಕರ್ಮ. ಇದರಲ್ಲಿಯೂ ಆಗುಂತಕ ಪಿತೃ ಮರಣಾದಿ ನಿಮಿತ್ತಗಳನ್ನಿಟ್ಟುಕೊಂಡು ವಿಹಿತ ಎಂದು ಮಾತ್ರ ಹೇಳಿದರೆ ವೃಷ್ಟಿಕಾಮನೆಯಿಂದ ಮಾಡುವ ಕಾಮ್ಯವಾದ ಕಾರೀರ್ಯಾದಿ ಯಾಗಗಳಲ್ಲೂ ಈ ಲಕ್ಷಣ ಬರುತ್ತದೆ. ಆದ್ದರಿಂದ ಯಾವುದನ್ನು ಮಾಡದಿದ್ದರೆ ಪ್ರತ್ಯವಾಯವಿದೆಯೋ ಎಂದು ಸೇರಿಸಿದ್ದಾರೆ. ಕಾರೀರ್ಯಾದಿಗಳನ್ನು ಮಾಡದಿದ್ದರೆ ಪ್ರತ್ಯವಾಯವಿಲ್ಲವಾದ್ದರಿಂದ ಈ ಲಕ್ಷಣ ಕಾರೀರ್ಯಾದಿಗಳಲ್ಲಿ ಬರುವುದಿಲ್ಲ. ಬರೇ ಅಷ್ಟೇ ಹೇಳಿದರೆ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡದಿದ್ದರೂ ಪ್ರತ್ಯವಾಯವಿರುವುದರಿಂದ ಅವುಗಳಲ್ಲಿಯೂ ಈ ಲಕ್ಷಣ ಬರುತ್ತದೆ. ಆದ್ದರಿಂದ ಆಗಂತುಕ ನಿಮಿತ್ತಗಳನ್ನಿಟ್ಟುಕೊಂಡು ವಿಹಿತ ಎಂದು ಹೇಳಿದ್ದಾರೆ. ಆದ್ದರಿಂದ ಈ ಲಕ್ಷಣ ಯುಕ್ತವಾಗಿದೆ.

**ದಧಿತ್ರಪುಸ ಶಬ್ದಾರ್ಥ**

'ಅವೃಜಿನೋಽಕಾಮಹತಃ' ಎಂಬ ಶ್ರುತಿಯಲ್ಲಿರುವ ವೃಜಿನ ಶಬ್ದಕ್ಕೆ ದುಃಖವೆಂದರ್ಥ. ಅಥವಾ ದುಃಖಕ್ಕೆ ಕಾರಣವಾದ ಪಾಪವೂ ವೃಜಿನವೆನಿಸುತ್ತದೆ. ಈ ವೃಜಿನವಿಲ್ಲದವನು ಹಾಗೂ ಕಾಮನಿಮಿತ್ತವಾದ ಉಪದ್ರವಗಳಿಲ್ಲದವನು ಮಕ್ತನೆಂದು 'ಅವೃಜಿನೋಽಕಾಮಹತಃ 'ಎಂಬ ಶ್ರುತಿಯು ತಿಳಿಸುತ್ತದೆ. ಹೀಗೆ ಕಾರ್ಯ ಕಾರಣಗಳಿಗೆ ಅಭೇದ ವ್ಯಪದೇಶಕ್ಕೆ 'ದಧಿತ್ರಪುಸಂ ಪ್ರತ್ಯಕ್ಷೋ ಜ್ವರಃ' ಎಂಬ ಮಹಾಭಾಷ್ಯದ ಉಕ್ತಿಯು ಉದಾಹರಣೆ. ಒಂದು ವಿಶಿಷ್ಟ ಹಂತವನ್ನು ತಲುಪಿರುವ ಮೊಸರು ತ್ರಪುಸ ಎಂದು ಕೈಯಟರು ತಮ್ಮ ಮಹಾಭಾಷ್ಯ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರೆ ಬೇರೆ ಕೆಲವರು ಹತ್ತು ದಿನಗಳವರೆಗೆ ಹಾಗೇ ಇದ್ದಾಗ ಮೊಸರಾಗುವ ಹಾಲೇ ತ್ರಪುಸವೆಂದು ಹೇಳುತ್ತಾರೆ. ಈ ತ್ರಪುಸವು ಜ್ವರಕ್ಕೆ ಕಾರಣವಾಗಿದ್ದರೂ ಅದನ್ನೇ ಸಾಕ್ಷಾತ್ ಜ್ವರವೆಂದು ಈ ಪ್ರಯೋಗದಲ್ಲಿ ಕರೆಯಲಾಗಿದೆ. ಹೀಗೇ ಅನೇಕ ಕಡೆ ಕಾರ್ಯಕಾರಣಗಳಿಗೆ ಅಭೇದವ್ಯಪದೇಶವಿದೆ.

**ಮೋಕ್ಷ ಆನಂದ ವಿಷಯಕ ಶ್ರುತಿದ್ವಯ ವಿರೋಧ ಪರಿಹಾರ**

ಮುಕ್ತರ ಆನಂದವನ್ನು ಹೇಳುವ ತೈತ್ತಿರೀಯೋಪನಿಷತ್ತಿನಲ್ಲಿ ಮುಕ್ತ ಮನುಷ್ಯೋತ್ತಮರ ಆನಂದಕ್ಕಿಂತಲೂ ಮುಕ್ತ ಮನುಷ್ಯಗಂಧರ್ವರ ಆನಂದವು ನೂರು ಪಟ್ಟು ಅಧಿಕ. ಹಾಗೂ ಮನುಷ್ಯ ಗಂಧರ್ವರ ಆನಂದಕ್ಕಿಂತ ಮುಕ್ತ ದೇವಗಂಧರ್ವರ ಆನಂದವು ನೂರು ಪಟ್ಟು ಅಧಿಕ ಹಾಗೂ ದೇವಗಂಧರ್ವರ ಆನಂದಕ್ಕಿಂತ ಮುಕ್ತ ಪಿತೃಗಳ ಆನಂದವು ನೂರು ಪಟ್ಟು ಅಧಿಕವೆಂದು ಹೇಳಲಾಗಿದೆ. ಆ ತೈತ್ತಿರೀಯೋಪನಿಷತ್ತು ''ತೇ ಯೇ ಶತಂ ಮಾನುಷಾ ಆನಂದಾಃ ಸ ಏಕೋ ಮನುಷ್ಯಗಂಧರ್ವಣಾಮಾನಂದಃ । ತೇ ಯೇ ಶತಂ ಮನುಷ್ಯಗಂಧ ರ್ವಾಣಾಮಾನಂದಾಃ ಸ ಏಕೋ ದೇವಗಂಧರ್ವಾಣಾಮಾನಂದಃ । ತೇ ಯೇ ಶತಂ ದೇವಗಂಧರ್ವಾಣಾ ಮಾನಂದಾಃ ಸ ಏಕಃ ಪಿತೄಣಾಂ ಚಿರಲೋಕ ಲೋಕಾನಾಮಾನಂದಃ''ಎಂಬುದಾಗಿದೆ.

ಆದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಮುಕ್ತ ಮನುಷ್ಯೋತ್ತಮರ ಆನಂದಕ್ಕಿಂತ ಮುಕ್ತ ಪಿತೃಗಳ ಆನಂದವು ನೂರು ಪಟ್ಟು ಅಧಿಕ. ಹಾಗೂ ಮುಕ್ತ ಪಿತೃಗಳ ಆನಂದಕ್ಕಿಂತಲೂ ಮುಕ್ತ ಗಂಧರ್ವರ ಆನಂದವು ನೂರು ಪಟ್ಟು ಅಧಿಕವೆಂದು ಹೇಳಲಾಗಿದೆ. ಆ ಶ್ರುತಿಯು ''ಯೇ ಶತಂ ಮನುಷ್ಯಾಣಾಂ ಆನಂದಾಃ, ಸ ಏಕ ಪಿತೃಣಾಂ ಜಿತಲೋಕಾನಾಂ ಆನಂದಃ ಯೇ ಶತಂ ಪಿತೃಣಾಂ ಜಿತ ಲೋಕಾನಾಂ ಆನಂದಾಃ ಸ ಏಕೋ ಗಂಧರ್ವಲೋಕ ಆನಂದಃ ''ಎಂಬುದಾಗಿದೆ. ಹೀಗೇ ತೈತ್ತಿರೀಯ ಶ್ರುತಿಯಲ್ಲಿ ಮನುಷ್ಯ-ಗಂಧರ್ವ-ಪಿತೃಗಳ ಆನಂದವು ಉತ್ತರೋತ್ತರ ನೂರು ಪಟ್ಟು ಅಧಿಕವೆಂದು ಹೇಳಲಾಗಿದೆ. ಬೃಹದಾರಣ್ಯಕದಲ್ಲಿ ಮನುಷ್ಯ-ಪಿತೃ-ಗಂಧರ್ವರ ಆನಂದವು ಉತ್ತರೋತ್ತರ ನೂರು ಪಟ್ಟು ಅಧಿಕವೆಂದು ಹೇಳಲಾಗಿದೆ. ಆದ್ದರಿಂದ ಪರಸ್ಪರ ವಿರೋಧವು ಬರುವಂತೆ ಕಾಣುತ್ತದೆ.

ಏಕೆಂದರೆ ತೈತ್ತಿರೀಯೋಪನಿಷತ್ತಿನಂತೆ ಗಂಧರ್ವರ ಆನಂದಕ್ಕಿಂತ ಪಿತೃಗಳ ಆನಂದವು ನೂರು ಪಟ್ಟು ಅಧಿಕವಾದರೆ (ಮನುಷ್ಯರ ಆನಂದಕ್ಕಿಂತ ಗಂಧರ್ವರ ಆನಂದವು ನೂರು ಪಟ್ಟ ಅಧಿಕವಾದ್ದರಿಂದ ಒಟ್ಟಾರೆ ಪಿತೃಗಳ ಆನಂದವು ಮನುಷ್ಯರ ಆನಂದಕ್ಕಿಂತ ೧೦,೦೦೦ ಪಟ್ಟು ಅಧಿಕವಾಗಬೇಕು. ಹೀಗೆ ಹೇಳಿದಾಗ ಬೃಹದಾರಣ್ಯಕದಲ್ಲಿ ಮನುಷ್ಯರ ಆನಂದಕ್ಕಿಂತ ಪಿತೃಗಳ ಆನಂದವು ಕೇವಲ ನೂರು ಪಟ್ಟು ಅಧಿಕವೆಂದು ಹೇಳಿದ್ದು ಹೇಗೆ ಸರಿಯಾಗುತ್ತದೆ? ಇದು ಒಂದು ವಿರೋಧ. ಹಾಗೂ ತೈತ್ತಿರೀಯೋಪನಿಷತ್ತಿನಲ್ಲಿ ಪಿತೃಗಳು ಗಂಧರ್ವರಿಗಿಂತ ಹೆಚ್ಚು ಆನಂದವುಳ್ಳವರೆಂದು ಹೇಳಲಾಗಿದೆ. ಆದರೆ ಬೃಹದಾರಣ್ಯಕದಲ್ಲಿ ಗಂಧರ್ವರೇ ಪಿತೃಗಳಿಗಿಂತ ಹೆಚ್ಚು ಆನಂದವುಳ್ಳವರೆಂದು ಹೇಳಲಾಗಿದೆ. ಹೀಗೆ ಈ ಎರಡಕ್ಕೂ ಪರಸ್ಪರ ವಿರೋಧವಿಲ್ಲವೇ? ಹೀಗೆ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧವಿದ್ದಂತೆ ಕಾಣುತ್ತದೆ. ಈ ವಿರೋಧವನ್ನು ಆಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಪರಿಹರಿಸಿದ್ದಾರೆ. ಶತ ಎಂದರೆ ಕೇವಲ ನೂರು ಎಂದರ್ಥವಲ್ಲ ನೂರು ಅಥವಾ ಹತ್ತುಸಾವಿರ ಅಥವಾ ಹತ್ತು ಲಕ್ಷವೂ ಆಗಬಹುದು. ಆದ್ದರಿಂದ ಮನುಷ್ಯರಿಗಿಂತ ಪಿತೃಗಳ ಆನಂದವು ಶತ ಅಧಿಕ

ಎಂದು ಹೇಳಿದರೂ ಅದಕ್ಕೆ ಹತ್ತು ಲಕ್ಷ ಪಟ್ಟು ಎಂದು ಅರ್ಥವಾಗಬಹುದು. ಆದ್ದರಿಂದ ವಾಸ್ತವಿಕವಾಗಿ ಮನುಷ್ಯರ, ಆನಂದಕ್ಕಿಂತ ಪಿತೃಗಳ ಆನಂದವು ಹತ್ತು ಲಕ್ಷಪಟ್ಟು ಅಧಿಕವಾದರೂ, ಅದಕ್ಕೆ ಶತಾಧಿಕ ಎಂಬ ಉಕ್ತಿಯು ವಿರೋಧವಿರುವುದಿಲ್ಲ.

ಹಾಗೂ ವಾಸ್ತವಿಕವಾಗಿ ಗಂಧರ್ವರಿಗಿಂತ ಪಿತೃಗಳು ಅಧಿಕರಾದರೂ ಕೆಲವು ಉತ್ತಮಗಂಧರ್ವರಿಗಿಂತ ಪಿತೃಗಳು ಕೆಳಗಿನವರಾಗಿದ್ದಾರೆ. ಆದ್ದರಿಂದ ತೈತ್ತಿರೀಯ ಶ್ರುತಿಯಲ್ಲಿ ಗಂಧರ್ವರಿಗಿಂತ ಪಿತೃಗಳು ಅಧಿಕವೆಂದು ಹೇಳಿದ್ದಕ್ಕೂ, ಬೃಹದಾರಣ್ಯಕದಲ್ಲಿ ಪಿತೃಗಳಿಗಿಂತ ಗಂಧರ್ವರು ಅಧಿಕವೆಂದು ಹೇಳಿದ್ದಕ್ಕೂ ಪರಸ್ಪರ ವಿರೋಧವಿಲ್ಲ. ಇದರ ಅಬಿಪ್ರಾಯ ಹೀಗೆ - ಮನುಷ್ಯೋತ್ತಮರ ಆನಂದಕ್ಕಿಂತ ಮನುಷ್ಯಗಂಧರ್ವರ ಆನಂದವು ಶತಾಧಿಕ. ಅದಕ್ಕಿಂತ ದೇವಗಂಧರ್ವರ ಆನಂದ ಶತಾಧಿಕ. ಅದಕ್ಕಿಂತ ಪಿತೃಗಳ ಆನಂದ ಶತಾಧಿಕ. ಆದ್ದರಿಂದ ಮನುಷ್ಯರ ಆನಂದಕ್ಕಿಂತ ಪಿತೃಗಳ ಆನಂದವು ಹತ್ತು ಲಕ್ಷ ಪಟ್ಟು ಅಧಿಕ.

**ಅಕ್ಷಣ್ವಂತಃ ಎಂಬ ಶಬ್ದದ ನಿಷ್ಪತ್ತಿ**

ಮೋಕ್ಷದಲ್ಲಿ ತಾರತಮ್ಯವಿದೆಯೆಂದು ಸಮರ್ಥಿಸಲು ''ಅಕ್ಷಣ್ವಂತಃ ಕರ್ಣವಂತಃ ಸಖಾಯಃ ಮನೋಜವೇಷ್ವಸಮಾಬಭೂವುಃ (ಕಣ್ಣುಗಳುಳ್ಳ ಕಿವಿಗಳುಳ್ಳ ಮತ್ತು ಸಮಸ್ತ ಇಂದ್ರಿಯಗಳ ಫಲವನ್ನು ಹೊಂದಿರುವ ಪರಸ್ಪರ ಸ್ನೇಹಿತರಾದ ಮುಕ್ತರು ಪ್ರಜ್ಞಾ-ಜ್ಞಾನಾದಿ ಗುಣಗಳಲ್ಲಿ ಅಸಮಾಃ= ತಾರತಮ್ಯ ವುಳ್ಳವರು ಆಗಿದ್ದಾರೆ) ಎಂಬ ಶ್ರುತಿಯನ್ನು ಆಚಾರ್ಯರು ಉದಾಹರಿಸಿದ್ದಾರೆ.

ಇಲ್ಲಿ ಅಕ್ಷಣ್ವಂತಃ ಎಂಬ ಶಬ್ದದ ನಿಷ್ಪತ್ತಿ ಹೀಗೆ ತೋರಿಸಲ್ಪಟ್ಟಿದೆ. ಅಕ್ಷನ್ ಎಂಬ ಅನ್ ಅಂತವಾಗಿ ಉಳ್ಳ ಶಬ್ದದ ಮೇಲೆ ಅನೋ ನುಟ್ (ಅನ್ನಂತವಾದ ಶಬ್ದಕ್ಕೆ ನುಟ್ ಎಂಬ ಆಗಮವು ವೇದದಲ್ಲಿ ಮಾತ್ರ ಬರುತ್ತದೆ) ಎಂಬ ಸೂತ್ರದಿಂದ ನುಟ್ ಆಗಮ ಬಂದಾಗ ಅಕ್ಷನ್ ನ್ ಮತ್ ಎಂದಾಗುತ್ತದೆ. ನಂತರ 'ನಲೋಪಃ ಪ್ರತಿಪದಿಕಾಂತಸ್ಯ' ಎಂಬುದರಿಂದ ಅಕ್ಷನ್ ಶಬ್ದದ ನಕಾರಕ್ಕೆ ಲೋಪ ಬರುತ್ತದೆ. ಹಾಗೂ 'ಅಟ್‌ಕುಪ್ವಾಙ್ ನುಮ್ ವ್ಯವಾಯೇಽಪಿ' ಎಂಬ ಸೂತ್ರದಿಂದ ನುಟ್ ನ ನಕಾರಕ್ಕೆ ಣಕಾರ

ಬರುತ್ತದೆ. ಮತ್ತು ''ಮಾದುಪಧಾಯಾಶ್ಚಾ ಮುತೋರ್ವಃ ''ಎಂಬ ಸೂತ್ರದಿಂದ ಮಕಾರಕ್ಕೆ ವಕಾರ ಬಂದರೆ ಅಕ್ಷಣ್‌ವತ್ ಎಂಬ ಪ್ರಾತಿಪದಿಕ ಸಿದ್ಧವಾಗುತ್ತದೆ. ಇಲ್ಲಿ ಅಕ್ಷನ್ ಎಂಬುದು ಅಕ್ಷಿ ಎಂಬ ಇಕಾರಾಂತ ಶಬ್ದಕ್ಕಿಂತ ಬೇರೆಯೇ ಆದ ಅನ್ ಅಂತ ಶಬ್ದ. ದಧಿ ಶಬ್ದದಂತೆ ಅನ್ ಅಂತವಾದ ದಧನ್ ಎಂಬ ಶಬ್ದವಿದೆ. ಹಾಗೆಯೇ ಇಲ್ಲಿ ಅಕ್ಷನ್ ಶಬ್ದ. ಅದರದ್ದೇ ಅಕ್ಷಣ್ವತ್ ಎಂಬ ರೂಪ. ಎಂದು ಕೆಲವರು ಹೇಳುತ್ತಾರೆ.

ಇನ್ನು ಕೆಲವರು '' ಛಂದಸ್ಯಪಿ ದೃಶ್ಯತೇ'' ಎಂಬ ಸೂತ್ರದಿಂದ (ಈ ಸೂತ್ರದಲ್ಲಿ ದೃಶ್ಯತೇ ಎಂದು ಹೇಳಿದ್ದರಿಂದ )ತೃತೀಯಾ ವಿಭಕ್ತಿ ಮುಂತಾದವುಗಳು ಇಲ್ಲದಿದ್ದರೂ ಅಕ್ಷಿ ಶಬ್ದಕ್ಕೆ ಅನಙ್ ಬಂದು ಅಕ್ಷನ್ ಎಂದಾಗಿದೆ. ಹೀಗೇ ಅನ್ ಅಂತವಾದ ಅಕ್ಷಿ ಶಬ್ದಕ್ಕೆ ನುಟ್ ಆಗಮ ಬರುತ್ತದೆ. ಆದ್ದರಿಂದ ಅಕ್ಷಣ್ ವತ್ ಎಂಬ ರೂಪ ನಿಷ್ಪತ್ತಿಯಾಗಿದೆ. ಎಂದು ಹೇಳುತ್ತಾರೆ.

ಆದರೆ ವಿದ್ಯಾರಣ್ಯರು ಛಂದಸ್ಯಪಿ ಎಂಬಲ್ಲಿರುವ ಅಪಿ ಪದದ ಸಾಮರ್ಥ್ಯದಿಂದಲೇ ಅನಙ್ ಪ್ರಾಪ್ತವಾಗುತ್ತದೆಂದು ಹೇಳಿದ್ದಾರೆ.

**ಅಪರೋಕ್ಷ ಜ್ಞಾನದ ಸಾಧನಗಳು**

''ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ । ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ । ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಕೆಲವರಿಗೆ ಧ್ಯಾನದಿಂದ ಕೆಲವರಿಗೆ ಸ್ವಪ್ರತಿಭೆಯಿಂದ, ಹಾಗೂ ಕೆಲವರಿಗೆ ರಾಜಸೂಯಾದಿ ಕರ್ಮಗಳಿಂದ ಹಾಗೂ ಇನ್ನುಳಿದವರಿಗೆ ಶ್ರವಣ ಮನನ ಧ್ಯಾನಗಳಿಂದ ಪರಮಾತ್ಮನ ಅಪರೋಕ್ಷಜ್ಞಾನವಾಗುತ್ತದೆಂದು ಹೇಳಿದ್ದಾರೆ.

ಇದರ ವಿವರಣೆ - ನಾರದಾದಿ ಋಷಿಗಳನ್ನು ಬಿಟ್ಟು ಬೇರೆ ಋಷಿಗಳು 'ಋಷಯೋಂತಃಪ್ರಕಾಶಾಃ' ಎಂಬ ಉಕ್ತಿಯ ಪ್ರಕಾರ ತಮ್ಮ ಹೃದಯದಲ್ಲಿ ಪರಮಾತ್ಮನನ್ನು ನೋಡುತ್ತಾರೆ. ಅವರ ಅಪರೋಕ್ಷಜ್ಞಾನಕ್ಕೆ ಮುಖ್ಯವಾಗಿ ಧ್ಯಾನವು ಕಾರಣ. ಈ ಋಷಿಗಳ ಜ್ಞಾನಕ್ಕೆ ಪ್ರತಿಭಾ ಮತ್ತು ಶ್ರವಣಗಳೂ ಸ್ವಲ್ಪ ಮಟ್ಟಿಗೆ ಕಾರಣವಾಗಿದೆ. ಆದರೆ ಪ್ರಧಾನಕಾರಣ ಧ್ಯಾನವೇ. ನಾರದಾದಿ

ಋಷಿಗಳು ತಮ್ಮೊಳಗೆ ಹಾಗೂ ಹೊರಗೂ ಪರಮಾತ್ಮನನ್ನು ನೋಡುತ್ತಾರೆ. ಆದ್ದರಿಂದ ಅವರ ವಿಷಯದಲ್ಲಿ ತಮ್ಮ ಹೃದಯದೊಳಗೆ ಪರಮಾತ್ಮನನ್ನು ನೋಡುತ್ತಾರೆ. ಎಂದು ಹೇಳುವುದು ಸರಿಯಾಗುವುದಿಲ್ಲ ಆದ್ದರಿಂದ ನಾರದಾದಿ ಋಷಿಗಳನ್ನು ಬಿಟ್ಟು ಎಂದು ಹೇಳಲಾಗಿದೆ.

ಇನ್ನು ದೇವತೆಗಳು ಪರಮಾತ್ಮ ಪ್ರಸಾದದದಿಂದ ಲಬ್ಧವಾದ ತಮ್ಮ ಸ್ವ ಪ್ರತಿಭೆಯಿಂದ ಪರಮಾತ್ಮನ ಅಪರೋಕ್ಷಜ್ಞಾನ ಪಡೆಯುತ್ತಾರೆ. ಹೀಗೆ ಧ್ಯಾನವಿಲ್ಲದೆ ಕೇವಲ ಸ್ವಪ್ರತಿಭೆಯಿಂದ, ಹಾಗೂ ಧ್ಯಾನದಿಂದಲೂ ಎರಡೂ ರೀತಿ ಅವರಿಗೆ ಹೃದಯದೊಳಗೂ ಹೊರಗೂ ಪರಮಾತ್ಮನ ದರ್ಶನವಾಗುತ್ತದೆ. ಇನ್ನು ರಾಜರುಗಳಿಗೆ ರಾಜಸೂಯ. ಅಶ್ವಮೇಧಾದಿಗಳಿಂದ ಪರಮಾತ್ಮನ ದರ್ಶನವಾಗುತ್ತದೆ. ಶ್ರವಣ ಮತ್ತು ಪ್ರತಿಭೆಗಳಿಂದ ಪರಮಾತ್ಮನನ್ನು ಸ್ಮರಿಸುವ ಅವರು ಯಜ್ಞಕಾಲದಲ್ಲಿ ಆಹುತಿ ಸ್ವೀಕಾರಕ್ಕಾಗಿ ಬಂದ ಪರಮಾತ್ಮನನ್ನು ನೋಡುತ್ತಾರೆ. ಅದಕ್ಕೆ ಕರ್ಮ ಯೋಗವೇ ಕಾರಣ. ಇಲ್ಲಿಯೂ ಶ್ರವಣ ಪ್ರತಿಭೆಗಳು ಮುಖ್ಯ ಕಾರಣವಲ್ಲವಾದ್ದರಿಂದ ಅವುಗಳನ್ನು ಹೇಳಿಲ್ಲ.

ಇನ್ನು ಉತ್ತಮ ಮನುಷ್ಯರು ಬೇರೆ ಗುರುಗಳಿಂದ ಪರಮಾತ್ಮ ವಿಷಯಕ ಶ್ರವಣ ಮಾಡಿ ನಂತರ ಮನನ ಧ್ಯಾನಗಳಿಂದ ಪರಮಾತ್ಮನ ದರ್ಶನ ಪಡೆಯುತ್ತಾರೆ. ಇಲ್ಲಿ ಮನುಷ್ಯರಿಗೆ ಪರಮಾತ್ಮ ದರ್ಶನಕ್ಕೆ ಪ್ರತಿಭೆ ಮನನ ಧ್ಯಾನಗಳು ಕಾರಣವಾದರೂ ಮುಖ್ಯವಾಗಿ ಶ್ರವಣವೇ ಕಾರಣವಾದ್ದರಿಂದ ಹೀಗೆ ಹೇಳಲಾಗಿದೆ.

**ಯಶಸ್ವತಾ ಎಂಬ ಪಾಠ ಸರಿ.**

ಮೋಕ್ಷದಲ್ಲಿ ದುಃಖವಿಲ್ಲವೆಂಬ ವಿಷಯಕ್ಕೆ ಸಾಧಕವಾಗಿ ಆಚಾರ್ಯರು ಸರ್ವೇ ನಂದಂತಿ ಯಶಸಾ ಎಂಬ ಶ್ರುತಿಯನ್ನುದಾಹರಿಸಿದ್ದಾರೆ. ಇದಕ್ಕೆ ವ್ಯಾಖ್ಯಾನ ಮಾಡುವಾಗ ಯಶಸಾ ಎಂಬುದಕ್ಕೆ ಯಶಸ್ವತಾ ಎಂಬ ಅರ್ಥವನ್ನು ಜಯತೀರ್ಥರು ಬರೆದಿದ್ದಾರೆ ಇಲ್ಲಿ ಯಶೋವತಾ ಎಂಬ ಪಾಠವಿಲ್ಲ. ಅದು ಅಪಪಾಠ. ಯಶಸ್ವತಾ ಎಂಬುದು ಸರಿಯಾದ ಪಾಠ. ಅಥವಾ ಯಶಸ್ವಿನಾ ಎಂದಾದರೂ ಆಗಬಹುದು. 'ಅಸ್ಮಾಯಾ ಮೇಧಾಸ್ರಜೋ ವಿದಿ' ಎಂಬ ಸೂತ್ರದ ಪ್ರಕಾರ

ವಿನಿಪ್ರತ್ಯಯ ಅಥವಾ ಮತುಪ್ ಗಳು ಬಂದಾಗ ಯಶಸ್ವಿನಾ ಯಶಸ್ವತಾ ಎಂದು ರೂಪಗಳಾಗುತ್ತವೆ. ಆದರೆ ಇಲ್ಲಿ ಯಶಃ ಶಬ್ದಕ್ಕೆ ರುತ್ವ ಬರುವುದು ಸಾಧ್ಯವಿಲ್ಲ. ಆದ್ದರಿಂದ ರುವಿಗೆ ಉ ಪ್ರತ್ಯಯವೂ ಬರುವುದಿಲ್ಲ. ಆದ್ದರಿಂದ ಯಶೋವತಾ ಎಂದಾಗುವುದಿಲ್ಲ.

ಕೆಲವರು ಯಶೋಽವತಾ ಎಂಬಲ್ಲಿ ಯಶಃ ಅವತಾ ಎಂದು ಪದಚ್ಛೇದ ಮಾಡುತ್ತಾರೆ. ಅವ ರಕ್ಷಣೇ ಎಂಬ ಧಾತುವಿನಿಂದ ಈ ಅವತಾ ಎಂಬ ರೂಪ ನಿಷ್ಪನ್ನವಾಗಿದೆ. ಆದ್ದರಿಂದ ಯಶಸ್ಸನ್ನು ಹೊಂದಿದವನೆಂದು ಯಶೋಽವತಾ ಎಂಬುದಕ್ಕೆ ಅರ್ಥವಾಗುತ್ತದೆ.

ಇನ್ನೂ ಕೆಲವರು ಇಲ್ಲಿ ಮತ್ವರ್ಥ ಪ್ರತ್ಯಯ ಪರದಲ್ಲಿದ್ದಾಗ ಯಶಸ್ ಶಬ್ದಕ್ಕೆ ಭ ಸಂಜ್ಞೆಯನ್ನು ಇಟ್ಟುಕೊಂಡಿಲ್ಲ. ಆದ್ದರಿಂದ ಪದ ಸಂಜ್ಞೆಯಿರುವುದರಿಂದ ರುತ್ವ ಉತ್ವ ವಿಸರ್ಗಗಳು ಬಂದು ಯಶೋವತಾ ಎಂದು ರೂಪ ಸಿದ್ಧವಾಗುತ್ತದೆಂದು ಹೇಳುತ್ತಾರೆ.

ಅಥವಾ ಯಶೋ ವಾತಿ ಇತಿ ಯಶೋವಾನ್ ತೇನ ಯಶೋವತಾ ಎಂಬ ವ್ಯುತ್ಪತ್ತಿಯಂತೆ ಗತ್ಯರ್ಥಕವಾದ ವಾ ಧಾತುವನಿನಿಂದಲೂ ಈ ರೂಪ ನಿಷ್ಪನ್ನವಾಗಬಹುದು.

**ತಮಿಮಮಹಮಜಂ ಶರೀರಭಾಜಾಂ ಎಂಬ ಶ್ಲೋಕದ ಅರ್ಥ.**

ಭಾಗವತ ಪ್ರಥಮ ಸ್ಕಂಧ ನವಮಾಧ್ಯಾಯದಲ್ಲಿ ಬರುವ ಭೀಷ್ಮನ ಮಾತು. ಇದರ ಪೂರ್ಣರೂಪ ಮತ್ತು ವಿವರಣೆಗಳು ಹೀಗಿವೆ.

ತಮಿಮಮಹಮಜಂ ಶರೀರಭಾಜಾಂ
ಹೃದಿ ಹೃದಿ ವಿಷ್ಠಿತಮಾತ್ಮ ಕಲ್ಪಿತಾನಾಮ್।
ಪ್ರತಿದೃಶಮಿವ ನೈಕಧಾರ್ಕಮೇಕಂ
ಸಮಧಿಗತೋಽಸ್ಮಿ ವಿಧೂತ ಭೇದ ಮೋಹಃ ॥

ತನ್ನಿಂದಲೇ ಸೃಷ್ಟವಾದ ಎಲ್ಲ ಪ್ರಾಣಿಗಳ ಹೃದಯಗಳಲ್ಲಿ ಇರುವ ಈ ಕೃಷ್ಣನನ್ನು ಎಲ್ಲ ಕಡೆ ಇರುವವನು ಒಬ್ಬನೇ ಎಂಬುದಾಗಿ ಭೇದ ಭ್ರಮವಿಲ್ಲದ ನಾನು (ಭೀಷ್ಮನು) ತಿಳಿಯುತ್ತಿದ್ದೇನೆ. ಹೇಗೆ ಎಲ್ಲರ ಕಣ್ಣುಗಳಲ್ಲಿ ಪ್ರೇರಕನಾಗಿ ಅನೇಕ ರೂಪದಿಂದ ನಿಂತಿರುವ ಸೂರ್ಯನು

ವಾಸ್ತವಿಕವಾಗಿ ಒಬ್ಬನೇ ಆಗಿದ್ದಾನೋ ಹಾಗೆಯೇ ಪರಮಾತ್ಮನೂ ಒಬ್ಬನೇ ಇದ್ದಾನೆಂದು ತಿಳಿದಿದ್ದೇನೆ. ಈ ಶ್ಲೋಕವನ್ನು ಪರಮಾತ್ಮನ ಏಕತ್ವಕ್ಕೆ ಪ್ರಮಾಣವನ್ನಾಗಿ ಅನುವ್ಯಾಖ್ಯಾನದಲ್ಲಿ ಉದಾಹರಿಸಲಾಗಿದೆ.

**ಸನ್ನಿಪಾತಲಕ್ಷಣೋ ವಿಧಿಃ ಎಂಬ ನ್ಯಾಯದ ಅರ್ಥ.**

ಸನ್ನಿಪಾತ ಲಕ್ಷಣೋ ವಿಧಿರನಿಮಿತ್ತಂ ತದ್ವಿಘಾತಸ್ಯ ಎಂದು ನ್ಯಾಯ. ಸನ್ನಿಪಾತವೆಂದರೆ ಸನ್ನಿಧಿ - ಸಾಮೀಪ್ಯ. ಯಾವುದರ ಸನ್ನಿಧಾನವನ್ನು ನಿಮಿತ್ತವನ್ನಾಗಿಟ್ಟುಕೊಂಡು ಯಾವ ವಿಧಿಯು ಪ್ರವೃತ್ತವಾಗಿರುತ್ತದೋ ಆ ವಿಧಿಯು ಆ ಸನ್ನಿಧಾನದ ನಾಶಕ್ಕೆ ಕಾರಣವಾಗುವುದಿಲ್ಲ. ಉದಾ - ಶತ ಶಬ್ದದ ಜಸ್ ಪ್ರತ್ಯಯಕ್ಕೆ 'ಜಶ್ಶಸೋಃಶಿಃ' ಎಂಬುದರಿಂದ ಶಿ ಪ್ರತ್ಯಯ ಬರುತ್ತದೆ. ನಂತರ ಶಿ ಸರ್ವನಾಮಸ್ಥಾನಂ ಎಂಬುದರಿಂದ ಶಿ ಪ್ರತ್ಯಯಕ್ಕೆ ಸರ್ವನಾಮಸ್ಥಾನ ಸಂಜ್ಞೆಯಿರುವುದರಿಂದ 'ನಪುಂಸಕ ಸ್ಯ ಝಲಚಃ' ಎಂಬುದರಿಂದ ಶಿ ಯನ್ನು ನಿಮಿತ್ತವನ್ನಾಗಿಟ್ಟುಕೊಂಡು ಶತ ಶಬ್ದಕ್ಕೆ ನುಮ್ ಆಗಮ ಬಂದು ಶತನ್ ಎಂದಾಗುತ್ತದೆ. ಇಂತಹ ನಕಾರಾಂತವಾದ ಶತನ್ ಶಬ್ದಕ್ಕೆ 'ಷ್ಣಾಂತಾಃ ಷಟ್' ಎಂದು ಷಟ್ ಸಂಜ್ಞೆ ಬಂದು 'ಷಡ್‌ಭ್ಯೋ ಲುಕ್' ಎಂಬುದರಿಂದ ಷಟ್ ಸಂಜ್ಞೆಯುಳ್ಳ ಶತನ್ ಶಬ್ದದ ಪರದಲ್ಲಿರುವ ಶಿಗೆ ಲುಕ್ ಪ್ರಾಪ್ತವಾಗುತ್ತದೆ. ಆದರೆ ಈ ನ್ಯಾಯದ ಪ್ರಕಾರ ಶಿಸನ್ನಿಧಾನವನ್ನು ನಿಮಿತ್ತವನ್ನಾಗಿಟ್ಟುಕೊಂಡು ಬಂದಿರುವ ನುಮ್ ಶಿಗೆ ವಿಘಾತಕವಾದ ಲುಕ್‌ಗೆ ನಿಮಿತ್ತವಾಗುವುದಿಲ್ಲ. ಆದ್ದರಿಂದ ಶತನ್ ಎಂಬ ಪ್ರಾತಿಪದಿಕ ಸಿದ್ಧವಾಗುತ್ತದೆ.

ಈ ನ್ಯಾಯದಿಂದಲೇ ಉಪಜೀವ್ಯತ್ವವೂ ಕೂಡ ಬಾಧಕತ್ವೋಪಯೋಗಿ ಎಂದು ಸುಧೆಯಲ್ಲಿ ನಿರೂಪಿಸಿದ್ದಾರೆ.

**ಪರಿಸಂಖ್ಯಾ ನ್ಯಾಯ**

ಅದ್ವೈತಿಗಳು ಬ್ರಹ್ಮನು ಸ್ವಯಂ ತಾನೊಬ್ಬನೇ ಇರುವುದು. ಬೇರಾರೂ ಇಲ್ಲವೆಂದು ಹೇಳುತ್ತಾರೆ. ಆದರೆ ಸ್ವಯಂ ಎಂದು ಹೇಳುವುದು ಬೇರೆಯವರನ್ನು ಅಪೇಕ್ಷಿಸುತ್ತದೆ. ಏಕೆಂದರೆ ಪರಿಸಂಖ್ಯಾನ್ಯಾಯದಂತೆ ಸ್ವ ಎಂದರೆ ಬೇರೆಯವರಿಗಿಂತ ಭಿನ್ನ ಎಂದರ್ಥವಾಗುತ್ತದೆ. ಹೀಗೆ ಸ್ವಶಬ್ದವು

ಪರಾಪೇಕ್ಷವಾದ್ದರಿಂದ ಅದ್ವೈತಿಗಳು ಬೇರೆಯವರನ್ನು ಅಂಗೀಕರಿಸ ಬೇಕೆಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಇಲ್ಲಿ ಪರಿಸಂಖ್ಯಾನ್ಯಾಯ ಹೀಗಿದೆ - ಬೇರೆಯದನ್ನು ವ್ಯಾವೃತ್ತಿಗೊಳಿಸುವುದೇ ಪರಿಸಂಖ್ಯಾ. (ಬೇರೆಯದ್ದಕ್ಕಿಂತ ಭಿನ್ನ ಎಂದು ತಿಳಿಸುವುದು).

ಜೈಮಿನಿ ಸೂತ್ರಗಳ ಪ್ರಥಮಾಧ್ಯಾಯ ದ್ವಿತೀಯಪಾದ ಕಡೆಯ ಅಧಿಕರಣದಲ್ಲಿ ಈ ಪರಿಸಂಖ್ಯಾನ್ಯಾಯವು ಬಂದಿದೆ.

ಕರ್ಮಾನುಷ್ಠಾನ ಮಾಡುವಾಗ ಉಚ್ಚರಿಸಲ್ಪಡುವ ಮಂತ್ರಗಳಿಗೆ ಅರ್ಥ ವಿವಕ್ಷೆಯಿದೆಯೋ ಇಲ್ಲವೋ ಎಂದು ಸಂದೇಹ. ಮಂತ್ರಗಳಿಗೆ ಅರ್ಥವಿವಕ್ಷೆಯಿಲ್ಲ. ಏಕೆಂದರೆ ಇಮಾಮಗೃಭ್ಣನ್ ರಶನಾಮೃತಸ್ಯ ( ಈ ಸತ್ಯರೂಪವಾದ ಕುದುರೆಯ ಮೂಗುದಾಣ =ಕಡಿವಾಣವನ್ನು ಹಿಡಿಯಬೇಕು) ಎಂದು ಮಂತ್ರವಿದೆ. ಈ ಮಂತ್ರಕ್ಕೆ ಅರ್ಥವಿವಕ್ಷೆಯಿದ್ದರೆ. ಇಮಾಮಗೃಭ್ಣನ್ ರಶನಾಮೃತಸ್ಯೇತ್ಯಶ್ವಾಭಿಧಾನೀಮಾಧತ್ತೇ ( ಇಮಾಮ ಗೃಭ್ಣನ್ ಎಂಬ ಮಂತ್ರ ಹೇಳಿ ಕುದುರೆಯ ಕಡಿವಾಣವನ್ನು ಹಿಡಿಯಬೇಕು) ಎಂಬ ಬ್ರಾಹ್ಮಣ ವಾಕ್ಯಕ್ಕೆ ಪ್ರಯೋಜನವೇ ಇಲ್ಲದಂತಾದೀತು. ಮಂತ್ರಗಳಿಗೆ ಅರ್ಥ ವಿವಕ್ಷೆಯಿದ್ದರೆ ಈ ಮಂತ್ರದಿಂದಲೇ ಇಷ್ಟು ಅರ್ಥವು ತಿಳಿಯುವುದರಿಂದ ಬ್ರಾಹ್ಮಣ ವಾಕ್ಯವೇಕೆ? ಕುರುಡನನ್ನು ಬೇರೆಯವರು ಹಿಡಿದು ಕರೆದೊಯ್ಯಬೇಕು. ಕಣ್ಣಿದ್ದವನಿಗೆ ಬೇರೆಯವರ ಸಹಾಯವೇಕೆ? ಎಂದು ಪೂರ್ವಪಕ್ಷ.

ಸಿದ್ಧಾಂತ - ಕೇವಲ ಕುದುರೆಯ ಕಡಿವಾಣವನ್ನು ಹಿಡಿಯುವಾಗ ಈ ಮಂತ್ರವನ್ನು ಉಚ್ಚರಿಸಬೇಕು ಎಂಬರ್ಥವನ್ನು ಹೇಳಲು ಈ ಬ್ರಾಹ್ಮಣವಾಕ್ಯ ಹೊರಟಿಲ್ಲ. ಬರೇ ಅಷ್ಟೇ ಅರ್ಥವನ್ನು ಹೇಳುವುದಾಗಿದ್ದರೆ ಮಂತ್ರದ ಅರ್ಥ ವಿಚಾರ ಮಾಡಿದಾಗಲೇ ಅದು ತಿಳಿಯುವುದರಿಂದ ಬ್ರಾಹ್ಮಣ ವಾಕ್ಯ ವ್ಯರ್ಥವಾಗುತ್ತಿತ್ತು. ಆದರೆ ಬೇರೆಯದರ ಕಡಿವಾಣವನ್ನು ಹಿಡಿಯಬಾರದೆಂದು ಹೇಳಲು ಈ ಬ್ರಾಹ್ಮಣವಾಕ್ಯ ಹೊರಟಿದೆ. ಅಗ್ನಿ ಹೋತ್ರಕ್ಕೆ ಬೇಕಾದ ಕುಂಡವನ್ನು ತಯಾರಿಸಲು ಬೇಕಾದ ಮಣ್ಣನ್ನು ಕತ್ತೆ

ಕುದುರೆಗಳನ್ನು ಹೂಡಿದ ಗಾಡಿಯಲ್ಲಿ ತರಬೇಕು. ಎಂಬ ನಿಯಮವಿದೆ. ಆಗ ಕತ್ತೆಯ ಕಡಿವಾಣವನ್ನು ಹಿಡಿಯುವಾಗಲೂ ಈ ಇಮಾಮಗೃಭ್ಣನ್ ಎಂಬ ಮಂತ್ರವನ್ನು ಉಚ್ಚರಿಸಬಹುದಾಗಿತ್ತು. ಆದರೆ ಕೇವಲ ಕುದುರೆಯ ಕಡಿವಾಣವನ್ನು ಹಿಡಿಯುವಾಗ ಮಾತ್ರ ಈ ಮಂತ್ರ ವನ್ನುಚ್ಚರಿಸಬೇಕೆಂದು ತಿಳಿಸಲು ಈ ಬ್ರಾಹ್ಮಣವಾಕ್ಯ ಹೊರಟಿದೆ. ಆದ್ದರಿಂದ ಈ ಬ್ರಾಹ್ಮಣವಾಕ್ಯದಿಂದ ಮಂತ್ರಕ್ಕೆ ಗತಾರ್ಥತ್ವವಿಲ್ಲ. ಆದ್ದರಿಂದ ಮಂತ್ರಗಳಿಗೆ ಅರ್ಥವಿವಕ್ಷೆಯಿದೆ. ಪರಿಸಂಖ್ಯಾ ಎಂದರೆ ಒಂದು ಕೆಲಸ ಎರಡೂ ಕಡೆ ಪ್ರಾಪ್ತವಾದಾಗ ಒಂದು ಕಡೆ ಬರುವುದಿಲ್ಲವೆಂದು ತಿಳಿಸುವುದು.

ಅದರಂತೆ ಇಲ್ಲಿಯೂ ಪರಿಸಂಖ್ಯಾ ನ್ಯಾಯದಿಂದ ಸ್ವ ಎಂದರೆ ಇತರ ಹೀನ ಎಂದರ್ಥವಾಗುತ್ತದೆ.

**ಸಾಮಾನ್ಯತಾ ವಚಃ ಎಂಬ ಪ್ರಯೋಗ ಸರಿ.**

'ಸಮಾನಾನಾಂ ಭಾವಃ , ಸಾಮಾನ್ಯಂ 'ಎಂಬ ವ್ಯುತ್ಪತ್ತಿಯಿಂದ 'ಗುಣವಚನ ಬ್ರಾಹ್ಮಣಾದಿಭ್ಯಃ ಕರ್ಮಣಿ ಚ' ಎಂಬ ಸೂತ್ರದ ಪ್ರಕಾರ ಭಾವಾರ್ಥದಲ್ಲಿ ಷ್ಯಞ್ ಪತ್ಯಯ ಬಂದು ಸಾಮಾನ್ಯ ಶಬ್ದ ನಿಷ್ಪನ್ನವಾಗಿದೆ. ಅದರ ಮೇಲೆ ಮತ್ತೆ ಭಾವಾರ್ಥಕ ಪ್ರತ್ಯಯ ಬಂದು ಸಾಮಾನ್ಯತಾ ಎಂದು ರೂಪವಾಗುವುದು ಹೇಗೆ?

ಇದಕ್ಕೆ ಸಮಾಧಾನ ಹೀಗಿದೆ. 'ಚಾತುರ್ವರ್ಣ್ಯಾದಿಭ್ಯಃ ಸ್ವಾರ್ಥೇ ಷ್ಯಞ್' (ಚಾತುರ್ವರ್ಣ್ಯ ಮುಂತಾದ ಶಬ್ದಗಳಲ್ಲಿ ತಮ್ಮ ಅರ್ಥದಲ್ಲಿಯೇ ಷ್ಯಞ್ ಪ್ರತ್ಯಯ ಬರುತ್ತದೆ) ಎಂಬ ಸೂತ್ರದಂತೆ ಇಲ್ಲಿಯೂ ಸಮಾನ ಎಂಬರ್ಥದಲ್ಲಿಯೇ ಷ್ಯಞ್ ಪ್ರತ್ಯಯ ಬಂದು ಸಾಮಾನ್ಯಂ ಎಂದಾಗಿದೆ. ಅದಕ್ಕೆ ಸಮಾನ ಎಂದಷ್ಟೇ ಅರ್ಥ ಅದರ ಮೇಲೆ 'ತಸ್ಯ ಭಾವ ಸ್ತ್ವತಲೌ' ಎಂಬುದರಿಂದ ಭಾವಾರ್ಥದಲ್ಲಿ ತಲ್ ಪ್ರತ್ಯಯ ಬಂದು ಸಾಮಾನ್ಯತಾ ಎಂದಾಗಿದೆ. ಆದ್ದರಿಂದ ಸಾಮಾನ್ಯತಾವಚಃ ಎಂಬ ಅನುವ್ಯಾಖ್ಯಾನದ (೩ ಅ. ೪ ಪಾ. ೫ ಅಧಿ) ಪ್ರಯೋಗವು ಸರಿಯಾಗಿದೆ.

## ಮೂರನೇ ಅಧ್ಯಾಯದ ನಾಲ್ಕನೆಯ ಪಾದದನ್ಯಾಯಮಾಲಾ

ಔದಾರ್ಯಮುಚ್ಚಾವಚಶಕ್ತಿರಾತ್ಮ-
ಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ ।
ಸ್ವಾತಂತ್ರ್ಯಮಾಪೂರ್ಣವಿಶೇಷಯೋಗ್ಯತಾ
ವಿರೋಧ ಹಾನಿಶ್ಚ ಚತುರ್ಥಪಾದೇ ॥

ವ್ಯವಸ್ಥಿತಿಸ್ತ್ವವಿಶೇಷಃ ಸ್ಥಿತಿಶ್ಚ
ನಿಷೇಧಸಾಮಾನ್ಯವಿಧಿಕ್ರಿಯಾಣಾಮ್ ।
ವಿಭಕ್ತತಾ ಚಾತ್ವರಯೈವ ಸಿದ್ಧಿಃ
ವಿಪಕ್ಷಸಂಪ್ರಾಪ್ತಿ ವಿರೋಧ ಹೇತವಃ ॥

೧) ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ

'ಔದಾರ್ಯವು' ಈ ಅಧಿಕರಣದಲ್ಲಿ ಪೂರ್ವಪಕ್ಷಯುಕ್ತಿ - ಔದಾರ್ಯವೆಂದರೆ ತ್ಯಾಗ. ಜ್ಞಾನಿಗಳು ಸಾಂಸಾರಿಕ ಫಲಗಳನ್ನು ತ್ಯಾಗ ಮಾಡುತ್ತಾರೆ. ಅವರಿಗೆ ಮೋಕ್ಷಕ್ಕಿಂತ ಭಿನ್ನವಾದ ಫಲದಲ್ಲಿ ಇಚ್ಛೆ ಇರುವುದಿಲ್ಲ. ಹೀಗಿರುವಾಗ ಜ್ಞಾನದಿಂದ ಮೋಕ್ಷೇತರ ಪುರುಷಾರ್ಥಗಳೂ ದೊರೆಯುತ್ತವೆ ಎನ್ನುವುದು ಕೇವಲ ಪ್ರಶಂಸೆಯ ಮಾತು. ಆದ್ದರಿಂದ ಜ್ಞಾನಕ್ಕೆ ಮೋಕ್ಷ ಮಾತ್ರವೇ ಫಲವಾದ್ದರಿಂದ ಜ್ಞಾನಕ್ಕಾಗಿ ವಿಶೇಷ ಪ್ರಯತ್ನ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ವ್ಯವಸ್ಥಿತಿಯು ಇಲ್ಲಿ ಸಿದ್ಧಾಂತ ಯುಕ್ತಿ - ಪ್ರಾಯಶಃ ಜ್ಞಾನಿಗಳಿಗೆ ಮೋಕ್ಷೇತರ ಫಲದಲ್ಲಿ ಇಚ್ಛೆ ಇರುವುದಿಲ್ಲ. ಯಾರಿಗಾದರೂ ಸೌಭರಿ ಋಷಿಗಳಿಗೆ ಬಂದಂತೆ ಬೇರೆ ಫಲದಲ್ಲಿ ಇಚ್ಛೆಯುಂಟಾದರೆ ಆ ಅಭೀಷ್ಟ ಫಲ ಸಿದ್ಧಿಯು ಜ್ಞಾನದಿಂದಲೇ ಸಾಧ್ಯ ಎಂಬ ವ್ಯವಸ್ಥೆ ಇರುವುದರಿಂದ ಜ್ಞಾನಕ್ಕೆ ಮೋಕ್ಷ ಮಾತ್ರವೇ ಫಲವಲ್ಲ. ಇತರ ಪುರುಷಾರ್ಥಗಳೂ ಫಲ ಎಂದು ಸಿದ್ಧಾಂತ.

೨) ಓಂ ಅಸಾರ್ವತ್ರಿಕೀ ಓಂ

ಈ ಅಧಿಕರಣದಲ್ಲಿಯೂ ಔದಾರ್ಯವೇ ಪೂರ್ವಪಕ್ಷಯುಕ್ತಿ - ಇಲ್ಲಿ ಔದಾರ್ಯವೆಂದರೆ ಉತ್ಕೃಷ್ಟತ್ವ ಎಂದರ್ಥ ಮೋಕ್ಷಾಖ್ಯ ಫಲವು ಉತ್ಕೃಷ್ಟವಾದ್ದರಿಂದ ಎಲ್ಲರಿಗೂ ಅದರಲ್ಲಿ ಅಪೇಕ್ಷೆ ಇರುತ್ತದೆ. ಆದ್ದರಿಂದ

ಅರ್ಥೀ ಸಮರ್ಥೋ ವಿದ್ವಾನ್ ಅಧಿಕ್ರಿಯತೇ (ಅಪೇಕ್ಷೆ ಉಳ್ಳವನು ಸಮರ್ಥ ಮತ್ತು ತಿಳುವಳಿಕೆ ಉಳ್ಳವನು ಅಧಿಕಾರಿ) ಎಂಬ ನಿಯಮದ ಪ್ರಕಾರ ಮೋಕ್ಷ ಸಾಧನವಾದ ಜ್ಞಾನಕ್ಕೆ ಎಲ್ಲರೂ ಅಧಿಕಾರಿಗಳೆಂದು ಪೂರ್ವಪಕ್ಷ.

ವ್ಯವಸ್ಥಿತಿಯು ಇಲ್ಲಿ ಸಿದ್ಧಾಂತಯುಕ್ತಿ - ಎಲ್ಲ ಜೀವರೂ ಮೋಕ್ಷಾಪೇಕ್ಷಿಗಳಾಗಿದ್ದರೂ ವೇದದ ಅಧ್ಯಯನ ಉಳ್ಳವರು ಮಾತ್ರ ಅಧಿಕಾರಿಗಳು ಬೇರೆಯವರು ಅಲ್ಲ ಎಂದು ವ್ಯವಸ್ಥೆ ಮಾಡಿರುವುದರಿಂದ ಎಲ್ಲರೂ ಜ್ಞಾನಕ್ಕೆ ಅಧಿಕಾರಿಗಳಲ್ಲ. ವೇದಾಧ್ಯಯನಕ್ಕಾದರೂ ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ (ಅವೈಷ್ಣವರಿಗೆ ವೇದದಲ್ಲಿ ಅಧಿಕಾರವಿಲ್ಲ) ಎಂಬ ವಚನಾನುಸಾರವಾಗಿ ಎಲ್ಲರಿಗೂ ಅಧಿಕಾರವಿಲ್ಲ ಎಂದು ಸಿದ್ಧಾಂತ.

೩) ಓಂ ನಾವಿಶೇಷಾತ್ ಓಂ

ಈ ಅಧಿಕರಣದಲ್ಲಿ ಉಚ್ಚಾವಚ ಶಕ್ತಿಯು ಪೂರ್ವಪಕ್ಷಯುಕ್ತಿ -

ಜ್ಞಾನಾಧಿಕಾರಿಗಳ ಜ್ಞಾನತಾರತಮ್ಯಕ್ಕೆ ದೇವತ್ವ ಋಷಿತ್ವ ಮನುಷ್ಯೋತ್ತಮತ್ವರೂಪವಾದ ವಿಶೇಷ ಕಾರಣವನ್ನು ಕಲ್ಪಿಸಿ ಅಧಿಕಾರ ತಾರತಮ್ಯವನ್ನು ಕಲ್ಪಿಸಬೇಕಾಗಿಲ್ಲ. ಅವರವರ ಶಕ್ತಿ ತಾರತಮ್ಯದಿಂದಲೇ ಕೂಡಿಸಬಹುದೆಂದು ಪೂರ್ವಪಕ್ಷ.

ಅವಿಶೇಷವು ಇಲ್ಲಿ ಸಿದ್ಧಾಂತ ಯುಕ್ತಿ - ಅಧಿಕಾರ ತಾರತಮ್ಯವನ್ನು ಅಂಗೀಕರಿಸದಿದ್ದರೆ ಶಕ್ತಿತಾರತಮ್ಯವನ್ನೇ ನಿರ್ವಾಹ ಮಾಡಲು ಬರುವುದಿಲ್ಲ. ಮತ್ತು ಎಲ್ಲರಿಗೂ ಅವಿಶೇಷವಾಗಿ ಅಂದರೆ ಅಪವಾದ ಅಥವಾ ವ್ಯಭಿಚಾರವಿಲ್ಲದೇ ನಿಯಮೇನ ಭಕ್ತ್ಯಾದಿ ಅಧಿಕಾರಾನುಸಾರವಾಗಿಯೇ ಫಲವು ಕಂಡಿರುವುದರಿಂದ ಅಧಿಕಾರ ತಾರತಮ್ಯವನ್ನು ಅಂಗೀಕರಿಸಲೇ ಬೇಕು.

೪) ಓಂ ಸ್ತುತಯೇಽನುಮತಿರ್ವಾ ಓಂ

ಈ ಅಧಿಕರಣದಲ್ಲಿ ಆತ್ಮಸ್ವರೂಪದಾರ್ಢ್ಯ ಎನ್ನುವುದು ಪೂರ್ವಪಕ್ಷಯುಕ್ತಿ - ಅಪರೋಕ್ಷಜ್ಞಾನಿಗಳಿಗೆ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವು ನಿಶ್ಚಿತವಾದದ್ದರಿಂದ ಜ್ಞಾನಾನಂತರದ ಸತ್ಕರ್ಮ

ಮತ್ತು ದುಷ್ಕರ್ಮಗಳಿಂದ ಯಾವ ಪರಿಣಾಮವೂ ಆಗುವುದಿಲ್ಲ ಎಂದು ಪೂರ್ವಪಕ್ಷ.

ಸ್ಥಿತಿ ಎನ್ನುವುದು ಇಲ್ಲಿ ಸಿದ್ಧಾಂತ ಯುಕ್ತಿ -

ಏತಾವತೋಽಧಿಕಾ ನಾಸ್ತಿ ಪ್ರಾಪ್ತಿರಿತ್ಯಂತತಃ ಸ್ಥಿತಾ ।
ಯಾ ಸ್ಥಿತಿಸ್ತಾಂ ಸಮಾಪ್ನೋತಿ ಯಥಾ ಶಕ್ತಿ ಪ್ರಯತ್ನತಃ ।
ವಿಪರೀತ ಪ್ರವೃತ್ತೇಸ್ತು ತಸ್ಯಾಃ ಹ್ರಾಸೋಽಧಿಕಂ ಭವೇತ್॥

(ಇಷ್ಟಕ್ಕಿಂತ ಹೆಚ್ಚಿನ ಪ್ರಾಪ್ತಿ ಇಲ್ಲ. ಇದೇ ಕೊನೆಯಸ್ಥಿತಿ. ಎಂಬ ಆನಂದ ದಲ್ಲಿರುವ ಅಂತಿಮಸ್ಥಿತಿಯನ್ನು ಜ್ಞಾನಾನಂತರ ಮಾಡುವ ಸತ್ಕರ್ಮದಿಂದ ಪಡೆಯಬಹುದು. ಮಹತ್ತರವಾದ ದುಷ್ಕರ್ಮದಿಂದ ಆ ಸ್ಥಿತಿಗೆ ಹ್ರಾಸ ಉಂಟಾಗುತ್ತದೆ) ಎಂಬ ಪ್ರಮಾಣಕ್ಕನುಸಾರವಾಗಿ ದೇವತೆಗಳಿಗೆ ಜ್ಞಾನಾ ನಂತರದ ಸತ್ಕರ್ಮದಿಂದ ವಿಶೇಷ ಆನಂದಪ್ರಾಪ್ತಿ ಯಾಗುತ್ತದೆ. ಅಸತ್ಕರ್ಮದಿಂದ ಸ್ವರೂಪಯೋಗ್ಯತೆಗಿಂತ ಅಧಿಕವಾಗಿ ಪಡೆಯಬಹುದಾದ ಆನಂದ ಹ್ರಾಸವಾಗುತ್ತದೆ. ಮನುಷ್ಯರಿಗೆ ಮಾತ್ರ ಕ್ಲೃಪ್ತ ಆನಂದಲ್ಲಿಯೇ ಹ್ರಾಸವಾಗುತ್ತದೆ.

೫) ಓಂ ಸರ್ವಥಾಪಿ ತು ತಯೈವೋಭಯಲಿಂಗಾತ್ ಓಂ

ನಿಜ ಸ್ವಭಾವವು ಇಲ್ಲಿ ಪೂರ್ವಪಕ್ಷಯುಕ್ತಿ - ಜೀವರ ಸ್ವಭಾವವು ಭಿನ್ನಭಿನ್ನವಾಗಿರುತ್ತದೆ. ಆಯಾ ಜೀವರು ತಮ್ಮ ತಮ್ಮ ಸ್ವಭಾವಕ್ಕನು ಗುಣವಾಗಿ ಜ್ಞಾನಮೋಕ್ಷಗಳನ್ನು ಪಡೆಯುತ್ತಾರೆನ್ನುವುದು ಸರಿಯಲ್ಲ. ಎಲ್ಲ ಜೀವರ ಸ್ವಭಾವವೂ ಒಂದೇ ವಿಧವಾಗಿರುತ್ತದೆ. ಪ್ರಯತ್ನ ಶೀಲರಿಗೆ ಜ್ಞಾನ ಮೋಕ್ಷಗಳು ದೊರೆಯುತ್ತವೆ. ವೇದಾನಧಿಕಾರಿಗಳೂ ಪ್ರಯತ್ನ ಪೂರ್ವಕವಾಗಿ ವೇದಾಧ್ಯಯನ ಮಾಡಿದ್ದು ಕಂಡಿದೆ. ವಿಶ್ವಾಮಿತ್ರನು ಮಹಾಪ್ರಯತ್ನದಿಂದ ಬ್ರಾಹ್ಮಣತ್ವವನ್ನು ಪಡೆದುದು ಕಂಡಿದೆ. ಎಂದು ಪೂರ್ವಪಕ್ಷ.

ನಿಷೇಧ ಸಾಮಾನ್ಯವಿಧಿ ಕ್ರಿಯಾಣಾಂ ವಿಭಕ್ತತಾ ಎಂಬುದು ಸಿದ್ಧಾಂತ ಯುಕ್ತಿ -

೧) ಯೋಗ್ಯರಾದವರು ಮಾತ್ರ ದೇವ ಪದವಿಯನ್ನು ಇಚ್ಛಿಸಬೇಕು. ಬೇರೆಯವರು ಪ್ರಯತ್ನಪಟ್ಟರೆ ಅಂಧಂತಮಸ್ಸಿಗೆ ಹೋಗುತ್ತಾರೆ ಎಂಬುದಾಗಿ ನಿಷೇಧ ವಿಭಾಗವಿದೆ.

೨) ದೇವತೆಗಳ ಜ್ಞಾನ ಬಲ ಇತ್ಯಾದಿಗಳು ಸ್ಥಿರ ಬೇರೆಯವರದ್ದು ಅಸ್ಥಿರ ಎಂದು ಸಾಮಾನ್ಯ ವಿಭಾಗ.

೩) ಜ್ಞಾನೋಪದೇಶ ಮಾಡುವುದು ದೇವತೆಗಳಿಗೆ ವಿಹಿತ. ಋಷಿಗಳಿಗೆ ತಪಸ್ಸು, ಮನುಷ್ಯರಿಗೆ ಆಚಾರವು ವಿಹಿತ ಎಂದು ವಿಧಿ ವಿಭಾಗ.

೪) ದೇವತೆಗಳು ಸಮಗ್ರ ಕರ್ಮವನ್ನು ಮಾಡುತ್ತಾರೆ. ಋಷಿಗಳು ಅರ್ಧ, ಮನುಷ್ಯರು ದಶಾಂಶ ಮಾತ್ರ ಮಾಡುತ್ತಾರೆ. ಎಂದು ಕ್ರಿಯಾ ವಿಭಾಗವಿರುವುದರಿಂದ ಅಧಿಕಾರಾನುಗುಣವಾಗಿಯೇ ಜ್ಞಾನಾದಿಗಳು ಹೊರತು ಮಹಾ ಪ್ರಯತ್ನ ಸಾಧ್ಯವಿಲ್ಲ. ವಿಶ್ವಾಮಿತ್ರರಿಗಾದರೆ ಕ್ಷತ್ರಿಯತ್ವ ಸ್ವಾಭಾವಿಕವಲ್ಲವಾದ್ದರಿಂದಲೇ ಬ್ರಾಹ್ಮಣತ್ವ ಪ್ರಾಪ್ತಿಯಾಯಿತು.

೬) ಓಂ ನಚಾಧಿಕಾರಿಕಮಪಿ ಪತನಾನುಮಾನಾತ್ತದ ಯೋಗಾತ್ ಓಂ

ನಿಜ ಸ್ವಭಾವವು ಇಲ್ಲಿ ಪೂರ್ವಪಕ್ಷ ಯುಕ್ತಿ -

ಜೀವರಲ್ಲಿರುವ ಚೇತನತ್ವವು ಸ್ವಾಭಾವಿಕವೇ ಹೊರತು, ದೇವತ್ವಾದಿಗಳು ಸ್ವಾಭಾವಿಕವಲ್ಲ. ಸ್ವಧರ್ಮ ನಿಷ್ಠಃ ಶತಜನ್ಮಭಿಃ ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮಾದಿ ಪದವಿಯು ಪ್ರಯತ್ನಸಾಧ್ಯ. ಆ ಚೇತನತ್ವವಾದರೂ ಎಲ್ಲರಿಗೂ ಸಮಾನವೇ ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಬ್ರಹ್ಮಾದಿ ಪದವಿಯನ್ನೂ ಭಗವದೈಶ್ವರ್ಯವನ್ನೂ ಪಡೆಯಬಹುದೆಂದು ಪೂರ್ವಪಕ್ಷ.

ಇಲ್ಲಿಯೂ ನಿಷೇಧ ಸಾಮಾನ್ಯ ವಿಧಿಕ್ರಿಯಾಣಾಂ ವಿಭಕ್ತತಾ ಎಂಬುದೇ ಸಿದ್ಧಾಂತ ಯುಕ್ತಿ -

ದೇವತೆಗಳಲ್ಲದವರು ದೇವತಾ ಪದವಿಯನ್ನು ಇಚ್ಛಿಸಕೂಡದು. ಹಾಗೆ ಇಚ್ಛಿಸಿದರೆ ಅಂತಹವರು ಅಂಧಂತಮಸ್ಸನ್ನು ಹೊಂದುತ್ತಾರೆ. ದೇವತೆಗಳು ತಮ್ಮ ಪದವಿಯನ್ನು ಬಯಸಿದರೆ ದೋಷವಿಲ್ಲ.

'ನಾದೇವೋ ದೇವಮನ್ವಿಚ್ಛೇದ್ ಇಚ್ಛನ್ ಯಾತ್ಯಧರಂತಮಃ ।ನ ದೇವಃ ಸ್ವೀಯಂ ಪದಮನ್ವಿಚ್ಛನ್ ವಿದುಷ್ಯತಿ । ತದೇವ ಹಿ ಅಸ್ಯ ಸ್ವಮ್' ಎಂಬುದಾಗಿ ನಿಷೇಧ ವಿಭಾಗವಿದೆ. ಅಂದರೆ ದೇವತೆಗಳಲ್ಲದವರಿಗೆ ಮಾತ್ರ ಆ ಪದವಿಯ ನಿಷೇಧ ಮಾಡಲ್ಪಟ್ಟಿದೆ.

ಆದ್ದರಿಂದ ಎಲ್ಲರೂ ದೇವ ಪದವಿಯನ್ನಾಗಲೀ ದೇವತೆಗಳ ಐಶ್ವರ್ಯವನ್ನಾಗಲೀ ಹೊಂದಲು ಶಕ್ಯವಿಲ್ಲ ಎಂದು ಸಿದ್ಧಾಂತ.

೭) ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ

ಈ ಅಧಿಕರಣದಲ್ಲಿ ಸ್ವಾತಂತ್ರ್ಯವು ಪೂರ್ವಪಕ್ಷ ಯುಕ್ತಿ - ಜೀವರ ಇಂದ್ರಿಯಾದಿ ಪ್ರೇರಣೆಯಲ್ಲಿ ದೇವತೆಗಳೇ ಸ್ವತಂತ್ರರಾದ್ದರಿಂದ ದೇವತೆಗಳಿಗೇ ಜ್ಞಾನಾದಿ ಫಲವು ಹೊರತು ಜೀವರಿಗೆ ಸ್ವಲ್ಪವೂ ಫಲವಿಲ್ಲ ಎಂದು ಪೂರ್ವಪಕ್ಷ.

ಅತ್ವರಯೈವಸಿದ್ಧಿಃ - ವಿಲಂಬದಿಂದ ಸಿದ್ಧಿಯೆಂಬುದು ಸಿದ್ಧಾಂತ ಯುಕ್ತಿ. ಅಂದರೆ ದೇವತೆಗಳಿಗೆ ಮುಕ್ತಿಯು ಮನುಷ್ಯರಿಗಿಂತ ವಿಲಂಬವಾಗಿ ಸಿದ್ಧಿಸುತ್ತದೆ. ಮನುಷ್ಯರಿಗೆ ಜ್ಞಾನಾದಿಗಳು ಉಂಟಾಗಿ ಅದರಿಂದ ಮುಕ್ತಿಯಾಗಬೇಕು ಎಂಬ ಉದ್ದೇಶದಿಂದಲೇ ದೇವತೆಗಳು ನಿಧಾನವಾಗಿ ಪ್ರಾರಬ್ಧವನ್ನು ಭೋಗಿಸುತ್ತಾ ಜೀವರ ದೇಹೇಂದ್ರಿಯಾದಿಗಳನ್ನು ಪ್ರೇರಿಸುತ್ತಿರುತ್ತಾರೆ. ಆದ್ದರಿಂದಲೇ ಅವರಿಗೆ ವಿಲಂಬದಿಂದ ಮುಕ್ತಿ. ಜೀವರಿಗೆ ಮುಕ್ತಿ ರೂಪ ಫಲವೇ ಇಲ್ಲವೆಂದಾದ ಪಕ್ಷದಲ್ಲಿ ದೇವತೆಗಳು ಶೀಘ್ರದಿಂದಲೇ ಮುಕ್ತಿಯನ್ನು ಪಡೆಯುತ್ತಿದ್ದರು. ಅದನ್ನು ಬಿಟ್ಟು ವಿಲಂಬದಿಂದ ಏಕೆ ಪಡೆಯುವರು? ಆದ್ದರಿಂದಲೇ ಜೀವರಿಗೆ ಮುಕ್ತಿಯು ಉಂಟೆಂದು ಸಿದ್ಧವಾಗುತ್ತದೆ. ಅಲ್ಪಾಧಿಕಾರಿಗಳಾದ ಮನುಷ್ಯರಿಗೆ ಬ್ರಹ್ಮದೇವರ ಚರಮ ದಿನದ ಕೊನೆಯಲ್ಲಿ ಅಪರೋಕ್ಷವಾದ ಜನ್ಮದಲ್ಲಿಯೇ ಆ ದೇಹಪಾತಾನಂತರ ಮುಕ್ತಿಯಾಗುತ್ತದೆ ಆದ್ದರಿಂದ ಅಲ್ಲಿಯವರೆಗೆ ಅವರ ಪ್ರೇರಣೆಗಾಗಿ ದೇವತೆಗಳು ಇರುತ್ತಾರೆಂದು ಅಭಿಪ್ರಾಯ.

೮) ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ

ಇಲ್ಲಿ ಆಪೂರ್ಣವಿಶೇಷ ಯೋಗ್ಯತಾ ಎಂಬುದು ಪೂರ್ವಪಕ್ಷಯುಕ್ತಿ.-

ಸಕಲ ಕರ್ಮವಿಶೇಷಗಳಲ್ಲಿ ಯೋಗ್ಯತೆ ಎಂದರ್ಥ. ಯತಿಗಳಿಗಿಂತಲೂ ಗೃಹಸ್ಥಾಶ್ರಮಿಗಳಿಗೆ ಸಕಲ ಕರ್ಮಗಳಲ್ಲಿ ಅಂದರೆ ಯಜ್ಞಾದಿಗಳಲ್ಲಿ ಅಧಿಕಾರವಿದೆ. ಯತಿಗಳಿಗಾದರೂ ಅದರಲ್ಲಿ ಅಧಿಕಾರವಿಲ್ಲ. ಆದ್ದರಿಂದ ಮೋಕ್ಷದಲ್ಲಿ ಯತಿಗಳಿಗಿಂತಲೂ ಗೃಹಸ್ಥರಿಗೇ ಆಧಿಕ್ಯವೆಂದು ಪೂರ್ವಪಕ್ಷ.

ಇಲ್ಲಿಯೂ ಅತ್ವರಯೈವ ಸಿದ್ಧಿಃ ಎಂಬುದು ಸಿದ್ಧಾಂತ ಯುಕ್ತಿ - ''ತ್ವರಯೈವ ಗೃಹಿಣಃ ಸಾಧಯಂತಿ ಮುಕ್ತಿಮತ್ವರಯೈವ ಯತಯಸ್ತೇಭ್ಯಸ್ಚಾತ್ವರಯಾ ದೇವಾಸ್ತೇಷು ಚ ಬ್ರಹ್ಮಾ'' ಗೃಹಸ್ಥರು ಶೀಘ್ರದಿಂದಲೇ ಮುಕ್ತರಾಗುತ್ತಾರೆ. ಅವರಿಗಿಂತಲೂ ವಿಲಂಬದಿಂದ ಯತಿಗಳು. ಅವರಿಗಿಂತ ವಿಲಂಬವಾಗಿ ದೇವತೆಗಳು. ಅವರಿಗಿಂತಲೂ ವಿಲಂಬವಾಗಿ ಬ್ರಹ್ಮದೇವರು ಮುಕ್ತರಾಗುತ್ತಾರೆ. ಎಂದು ಶ್ರುತಿಯಿಂದ. ಗೃಹಸ್ಥರಿಗೇ ಶೀಘ್ರದಲ್ಲಿ ಮುಕ್ತಿ. ಯತಿಗಳಿಗೆ ವಿಲಂಬದಿಂದ. ಶೀಘ್ರದಲ್ಲಿ ಮುಕ್ತರಾದವರಿಗೆ ಮುಕ್ತಿಯಲ್ಲಿ ಸುಖವು ಅಲ್ಪ. ವಿಲಂಬದಿಂದ ಮುಕ್ತರಾದವರಿಗೆ ಸುಖ ಅಧಿಕ. ಆದ್ದರಿಂದ ಯತಿಗಳಿಗೇ ಆಧಿಕ್ಯವೆಂದು ಸಿದ್ಧಾಂತ.

೯) ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ

ಈ ಅಧಿಕರಣದಲ್ಲಿ ಆಪೂರ್ಣವಿಶೇಷಯೋಗ್ಯತಾ ಎಂಬುದು ಪೂರ್ವಪಕ್ಷಯುಕ್ತಿ. ಬಹಿರಂಗವಾಗಿ ಸಭಾಚತ್ವರಾದಿಗಳಲ್ಲಿ ತತ್ತ್ವೋಪದೇಶ ಮಾಡಿದರೆ ಆಪೂರ್ಣ=ಎಲ್ಲರಿಗೂ, ವಿಶೇಷಯೋಗ್ಯತಾ=ಜ್ಞಾನಯೋಗ್ಯತಾ ಬರುವುದರಿಂದ, ಬಹಿರಂಗದಲ್ಲಿ ಜ್ಞಾನಾವಿಷ್ಕಾರ ಮಾಡಬೇಕೆಂದು ಪೂರ್ವಪಕ್ಷ.

ಅತ್ವರಯೈವ ಸಿದ್ಧಿ ಎನ್ನುವುದು ಇಲ್ಲಿ ಸಿದ್ಧಾಂತ ಯುಕ್ತಿ - ''ತ್ಯಕ್ತ್ವಾ ತ್ವರಾಂ ಬ್ರಹ್ಮವಿದ್ಯಾಂ ವದೇತ ಜನಾಯ ಯೋಗ್ಯಾಯ ಸದೈವ ವಿದ್ವಾನ್''

ಅವಸರ ಮಾಡದೇ ವಿಚಾರ ಮಾಡಿ ಯೋಗ್ಯರಿಗೆ ಮಾತ್ರ ತತ್ವೋಪದೇಶ ಮಾಡಬೇಕು. ತ್ವರಾ ಮಾಡಿದರೆ ಸಿದ್ಧಿಯುಂಟಾಗುವುದಿಲ್ಲ ಎಂದು ಶ್ರುತಿಯಿರುವುದರಿಂದ ಅಯೋಗ್ಯರಿರುವ ಸಭಾದಿಗಳಲ್ಲಿ ಜ್ಞಾನಾವಿಷ್ಕಾರ ಮಾಡ ಕೂಡದೆಂದು ಸಿದ್ಧಾಂತ.

೧೦) ಓಂ ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್ ಓಂ

ವಿರೋಧ ಹಾನಿ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ - ಶ್ರವಣಾದಿ ಸಾಧನಗಳನ್ನು ಅನುಷ್ಠಾನ ಮಾಡಿದ ಜನ್ಮದಲ್ಲಿಯೇ ಅಪರೋಕ್ಷ ಜ್ಞಾನವಾಗುತ್ತದೆ ಎಂದು ಅಂಗೀಕರಿಸಿದರೆ ಯಾವ ವಿರೋಧವೂ ಇಲ್ಲವಾದ್ದರಿಂದ ಅದೇ ಜನ್ಮದಲ್ಲಿ ಅಪರೋಕ್ಷಜ್ಞಾನವಾಗುತ್ತದೆ ಎಂದು ಪೂರ್ವಪಕ್ಷ.

ಇಲ್ಲಿಯೂ ಅತ್ವರಯೈವ ಸಿದ್ಧಿಯು ಸಿದ್ಧಾಂತಯುಕ್ತಿ - ಸಾಧನಾನುಷ್ಠಾನ ಮಾಡಿದ ಜನ್ಮದಲ್ಲಿ ಅಪರೋಕ್ಷ ಉಂಟಾಗಲು ಪ್ರಾರಬ್ಧ ಕರ್ಮ ಏನಾದರೂ ಪ್ರತಿ ಬಂಧಕ ಉಂಟಾದ ಪಕ್ಷದಲ್ಲಿ ಮತ್ತೊಂದು ಜನ್ಮದಲ್ಲಿ ಅಪರೋಕ್ಷವಾಗುತ್ತದೆ ಎಂದು ಹೇಳುವ "ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ಪ್ರೇತ್ಯೈವ ಪಶ್ಯೇತ್ ಯೋಗಮೇವಾನ್ವವೇಕ್ಷ್ಯ" ಎಂದು ಶ್ರುತಿಯಿರುವುದರಿಂದ ಅದೇ ಜನ್ಮದಲ್ಲಿ ಅಪರೋಕ್ಷವೆಂಬ ನಿಯಮವಿಲ್ಲವೆಂದು ಸಿದ್ಧಾಂತ.

೧೧) ಓಂ ಮುಕ್ತಿ ಫಲಾನಿಯಮಸ್ತ -
ದವಸ್ಥಾವಧೃತೇ ಸ್ತದವಸ್ಥಾವಿಧೃತೇಃ ಓಂ

ಇಲ್ಲಿಯೂ ವಿರೋಧಹಾನಿ ಎಂಬುದು ಪೂರ್ವಪಕ್ಷಯುಕ್ತಿ - ಅಪರೋಕ್ಷವಾದ ಜನ್ಮದಲ್ಲಿಯೇ ಮುಕ್ತಿಯನ್ನು ಒಪ್ಪಲು ಯಾವ ವಿರೋಧವೂ ಇಲ್ಲವಾದ್ದರಿಂದ ಅದೇ ಜನ್ಮದಲ್ಲಿ ಮುಕ್ತಿ ಎಂದು ಪೂರ್ವಪಕ್ಷ.

ಅತ್ವರಯೈವ ಸಿದ್ಧಿಯೇ ಇಲ್ಲಿಯೂ ಸಿದ್ಧಾಂತಯುಕ್ತಿ - ಅಪರೋಕ್ಷ ಜ್ಞಾನಾನಂತರದಲ್ಲಿ ಭೋಗದಿಂದ ಪ್ರಾರಬ್ಧಕರ್ಮರೂಪ ಪ್ರತಿಬಂಧ

ಕವನ್ನು ನಿವಾರಣೆಗೊಳಿಸಿ ಅನಂತರದಲ್ಲಿಯೇ ಮುಕ್ತಿಯನ್ನು ಪಡೆಯು ವನು ಎಂಬ ವಿಷಯದಲ್ಲಿ ''ಅನೇಕ ಜನ್ಮ ಸಂಸಿದ್ಧಃ ತತೋ ಯಾತಿ ಪರಾಂ ಗತಿಂ'' ಎಂಬ ಭಗವದ್ವಚನವಿರುವುದರಿಂದ ಅಪರೋಕ್ಷವಾದ ಜನ್ಮದ ಲ್ಲಿಯೇ ಮುಕ್ತಿ ಎಂಬ ನಿಯಮವಿಲ್ಲ ಎಂದು ಸಿದ್ಧಾಂತ.



# ಚತುರ್ಥಾಧ್ಯಾಯ

**ಪರಿಮಳದ ಮಂಗಳಶ್ಲೋಕ.**

**ಆರಾಧಿತಃ ಸಾಧನೈರ್ಯೋ ಮುಕ್ತಿಂ ದದ್ಯಾಚ್ಚತುರ್ವಿಧಾಮ್ ।**
**ತಂ ವಂದೇ ಕಮಲಾನಾಥಮಭೀಷ್ಟಾವಾಪ್ತಿಸಿದ್ಧಯೇ ॥**

ವೈರಾಗ್ಯ, ಭಕ್ತಿ, ಜ್ಞಾನ ಉಪಾಸನಾರೂಪವಾದ ಸಾಧನಗಳಿಂದ ಆರಾಧಿಸಲ್ಪಟ್ಟ ಲಕ್ಷ್ಮೀಪತಿಯು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಭೋಗವೆಂಬ ನಾಲ್ಕುವಿಧವಾದ ಮುಕ್ತಿಯನ್ನು ದಯಪಾಲಿಸುವನೋ ಅಂತಹ ಲಕ್ಷ್ಮೀಪತಿಯನ್ನು ಅಭೀಷ್ಟಪ್ರಾಪ್ತಿಗಾಗಿ ನಮಸ್ಕರಿಸುವೆನು.

**ನಾಲ್ಕು ಪಾದಗಳ ಪ್ರಮೇಯ ಸೂಚನೆ.**

**ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ ನಿರ್ವೃತಾಃ ।**
**ನಂದಂತಿ ಸತತಂ ಮುಕ್ತಾಃ ಸಂಶ್ರಯೇ ತಂ ಶ್ರಿಯಃ ಪತಿಮ್ ॥**

ಯಾವ ಲಕ್ಷ್ಮೀಪತಿಯಾದ ಪರಮಾತ್ಮನ ಚರಣಕಮಲಗಳ ನೆರಳನ್ನು ಆಶ್ರಯಿಸಿ ಜೀವರು ಕ್ಲೇಶಗಳಿಂದ ಬಿಡುಗಡೆ ಹೊಂದಿ ಚತುರ್ವಿಧ ಮುಕ್ತಿಯನ್ನು ಪಡೆದವರಾಗಿ ಸುಖವನ್ನು ಅನಭವಿಸುವರೋ ಅಂತಹ ಶ್ರೀಲಕ್ಷ್ಮೀಪತಿಯನ್ನು ಆಶ್ರಯಿಸುವೆನು.

ಇದು ಶ್ರೀಮನ್ನ್ಯಾಯಸುಧೆಯ ಚತುರ್ಥಾಧ್ಯಾಯದ ಆರಂಭದಲ್ಲಿರುವ ಮಂಗಳಪದ್ಯ. ಇದರಲ್ಲಿ 'ನಿರ್ವೃತಾಃ' ಎಂಬುದಕ್ಕೆ ಕ್ಲೇಶದಿಂದ ಬಿಡುಗಡೆ ಹೊಂದಿದವರು ಎಂದು ಅರ್ಥ ಇಟ್ಟುಕೊಳ್ಳಲಾಗಿದೆ. 'ಕ್ಷೀಣಕರ್ಮಾಣಃ' (ಕರ್ಮಕ್ಷಯವನ್ನು ಹೊಂದಿದವರು) ಎಂದೂ ಅರ್ಥೈಸಬಹುದು. ಆದರಿಂದ ಕರ್ಮಕ್ಷಯವೆಂಬ ಪ್ರಥಮಪಾದದ ಪ್ರಮೇಯ ಸೂಚಿಸಿದಂತಾಗುತ್ತದೆ. 'ಮುಕ್ತಾಃ' ಎಂಬುದಕ್ಕೆ ದೇಹಬಂಧದಿಂದ ಬಿಡುಗಡೆ ಹೊಂದಿದವರು ಎಂದೂ ಅರ್ಥಮಾಡಬಹುದು. ಆದ್ದರಿಂದ 'ಉತ್ಕ್ರಾಂತಿ' ಎಂಬ ದ್ವಿತೀಯಪಾದದ ಪ್ರಮೇಯವು ಸೂಚಿತವಾಗುತ್ತದೆ. 'ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ' (ಭಗವಂತನ ಪಾದಕಮಲಗಳ ನೆರಳನ್ನಾಶ್ರಯಿಸಿ) ಎಂಬುದರಿಂದ

ಗಮ್ಯಸ್ಥಾನವನ್ನು ತಿಳಿಸಿದ ಪ್ರಯುಕ್ತ ಮೂರನೇ ಪಾದದ ಪ್ರಮೇಯವು ತಿಳಿಯುತ್ತದೆ.'ನಂದಂತಿ' (ಸುಖವನ್ನು ಅನುಭವಿಸುತ್ತಾರೆ) ಎಂಬುದರಿಂದ ಭೋಗರೂಪವಾದ ಚತುರ್ಥ ಪಾದದ ಪ್ರಮೇಯವು ಸೂಚಿತವಾಗುತ್ತದೆ.

**ನಾಲ್ಕನೇ ಅಧ್ಯಾಯದ ಮೊದಲನೇ ಪಾದದ ನ್ಯಾಯಮಾಲಾ**

**ಸುಶಕ್ಯತಾ ಶಶ್ವದತಿ ಪ್ರಸಿದ್ಧಿಃ**
**ವಿವೇಕ ವಿನ್ಯಾಸ ವಿಚಾರ ಸಂಜ್ಞಾಃ।**
**ನಾನಾಪ್ರವೃತ್ತಿಃ ಕೃತಕೃತ್ಯತಾ ಚ**
**ವಿಪಕ್ಷತರ್ಕಾಃ.............॥**

**ಮಹಾಫಲತ್ವಂ ಪ್ರವಿವಿಕ್ತತಾ ಚ**
**ಸಂಧಿಗ್ರಹಃ ಸಾಧನ ಮಾಪ್ತಕೃತ್ಯಮ್।**
**ವಿಶೇಷ ಕಾರ್ಯಂ ಕೃತಿಸಂಸ್ಥಿತಿಶ್ಚ**
**ಸುಯುಕ್ತಯೋ ನಿರ್ಣಯಗಾಃ ಸ್ವಪಕ್ಷೇ।**

ಓಂ ಆವೃತ್ತಿರಸಕೃದುಪಪದೇಶಾತ್ ಓಂ

ಈ ಅಧಿಕರಣದಲ್ಲಿ ಸುಶಕ್ಯತಾ ಎಂಬುದು ಪೂರ್ವಪಕ್ಷಯುಕ್ತಿ. ಶ್ರವಣಾದಿ ಸಾಧನಗಳ ಆವೃತ್ತಿ ಇಲ್ಲದೆಯೇ ಬ್ರಹ್ಮಾಪರೋಕ್ಷವಾಗುತ್ತದೆ ಎಂದು ಒಪ್ಪಿದರೆ. ಈ ಸಾಧನವು ಎಲ್ಲರಿಗೂ ಸುಲಭಸಾಧ್ಯವಾಗುತ್ತದೆ. ಸುಲಭತ್ವವು ಗುಣವಾದುದರಿಂದ ಇದನ್ನು ಅಂಗೀಕರಿಸಬೇಕು. ಆದ್ದರಿಂದ ಆವೃತ್ತಿ ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷ.

ಮಹಾಫಲತ್ವವು ಇಲ್ಲಿ ಸಿದ್ಧಾಂತಯುಕ್ತಿಯಾಗಿದೆ. ಅಂದರೆ ಫಲವು ಮಹಾಫಲವಾಗಿದ್ದ ಪಕ್ಷದಲ್ಲಿ ಸಾಧನಕ್ಕೆ ದುರ್ಲಭತ್ವವಿದ್ದರೂ ಬಾಧಕವಿಲ್ಲ. ಪ್ರಕೃತದಲ್ಲಿ ಮೋಕ್ಷವು ಮಹಾಫಲವಾದ್ದರಿಂದ ಅದರ ಸಾಧನವಾದ ಶ್ರವಣಾದಿಗಳಲ್ಲಿ ಆವೃತ್ತಿಯನ್ನು ಒಪ್ಪಿದರೂ ಅದು ಎಲ್ಲರಿಗೂ ಸುಲಭವಲ್ಲದಿದ್ದರೂ ಬಾಧಕವಿಲ್ಲವಾದ್ದರಿಂದ ಆವೃತ್ತಿ ಮಾಡಬೇಕೆಂದು ಸಿದ್ಧಾಂತ.

2) ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ

ಈ ಅಧಿಕರಣದಲ್ಲಿ ಶಶ್ವದತಿ ಪ್ರಸಿದ್ಧಿ ಎಂಬುದು ಪೂರ್ವಪಕ್ಷಯುಕ್ತಿ - ಭಗವಂತನಲ್ಲಿರುವ ಆತ್ಮತ್ವವು ಅಂದರೆ ಸ್ವಾಮಿತ್ವವು ಯಾವಾಗಲೂ ಅತ್ಯಂತ

ಪ್ರಸಿದ್ಧವೇ ಆಗಿರುವುದರಿಂದ ಅದರ ಉಪಾಸನೆಯು ವ್ಯರ್ಥ. ಅಪ್ರಸಿದ್ಧ ಗುಣಗಳ ಉಪಾಸನೆ ಮಾಡಿದರೆ ಅವುಗಳ ಪ್ರಸಿದ್ಧಿಯುಂಟಾ ಗುವುದು. ಅತಿ ಪ್ರಸಿದ್ಧವೇ ಆದ ಗುಣವನ್ನುಪಾಸನೆ ಮಾಡುವುದರಿಂದ ಏನೂ ಫಲವಿಲ್ಲ ಎಂದು ಪೂರ್ವಪಕ್ಷ.

ಪ್ರವಿವಿಕ್ತತಾ ಎನ್ನುವುದು ಇಲ್ಲಿ ಸಿದ್ಧಾಂತ ಯುಕ್ತಿ - ಪ್ರವಿವಿಕ್ತತಾ ಎಂದರೆ ವಿಶೇಷ. ಬೇರೆ ಗುಣಗಳಿಗಿಂತ ಆತ್ಮತ್ವವು ಪ್ರಸಿದ್ಧವಾದರೂ ಇದರಲ್ಲೊಂದು ವಿಶೇಷವಿದೆ. ಆತ್ಮತ್ವರೂಪ ಸ್ವಾಮಿತ್ವವನ್ನು ಉಪಾಸನೆ ಮಾಡುವುದರಿಂದ ಮುಕ್ತಿಯಲ್ಲಿ ಎಲ್ಲರಿಂದಲೂ ಅಪೇಕ್ಷಿತವಾದ ಸ್ವಾವರ ನಿಯಾಮಕತ್ವವು ಅಂದರೆ ತನಗಿಂತ ಕೆಳಗಿನವರನ್ನು ನಿಯಂತ್ರಿಸುವಿಕೆ ಎಂಬ ಈ ಗುಣವು ದೊರೆಯುತ್ತದೆ ಆದ್ದರಿಂದ ಆತ್ಮತ್ವವನ್ನು ಉಪಾಸನೆ ಮಾಡಬೇಕು. ಎಂದು ಸಿದ್ಧಾಂತ.

೩) ಓಂ ನ ಪ್ರತೀಕೇ ನಹಿ ಸಃ ಓಂ

ಈ ಅಧಿಕರಣದಲ್ಲಿ ವಿವೇಕ ಎಂಬುದು ಪೂರ್ವಪಕ್ಷ ಪ್ರಾಪಕಯುಕ್ತಿ. ವಿವೇಕ ಎಂದರೆ ಪೂರ್ವೋಕ್ತ ನ್ಯಾಯದಿಂದ ವಿಚಾರ ಮಾಡುವುದು. 'ಪೂರ್ವಾಧಿಕರಣದಲ್ಲಿ ಹೇಳಿದಂತೆ ಪ್ರಸಿದ್ಧಿಯಾಗಲೀ ಅಪ್ರಸಿದ್ಧಿಯಾಗಲೀ ಉಪಾಸನೆಗೆ ಪ್ರಯೋಜಕವಲ್ಲ. ಫಲವಿಶೇಷವಿದ್ದರೆ ಉಪಾಸನೆ ಮಾಡಬೇಕು. ನಾಮಾಭಿಮಾನಿ ಉಷಾದೇವಿಯೇ ಮೊದಲಾದ ಪ್ರತಿಮೆಯನ್ನೇ ಬ್ರಹ್ಮ ಎಂದು ಉಪಾಸನೆ ಮಾಡಿದರೆ ಕಾಮಚಾರೋ ಭವತಿ (ಯಥೇಚ್ಛವಾಗಿ ವರ್ತಿಸುವನು) ಎಂದು ಫಲವಿಶೇಷವಿದೆ.' ಎಂದು ವಿಚಾರಮಾಡಿದಾಗ ಪ್ರತೀಕವನ್ನು ಬ್ರಹ್ಮ ಎಂದು ಉಪಾಸನೆ ಮಾಡಬೇಕು ಎಂದು ಸಿದ್ಧವಾಗುವುದು ಎಂದು ಪೂರ್ವಪಕ್ಷ.

ಇಲ್ಲಿ ಸಂಧಿಗ್ರಹವು ಸಿದ್ಧಾಂತ ಯುಕ್ತಿ - ಸಂಧೀಯತೇ ಪ್ರಮೇಯಂ ಅನೇನ ಇತಿ ಸಂಧಿಃ ಎಂಬ ವ್ಯುತ್ಪತ್ತಿಯಿಂದ ಸಂಧಿ ಎಂದರೆ ಪ್ರಮೇಯಾನುಸಂಧಾನಕ್ಕೆ ಕಾರಣವಾದ ಯುಕ್ತಿ ಎಂದರ್ಥ. ಅದರ ಗ್ರಹ ಎಂದರೆ ಸ್ವೀಕಾರ. ಯಾವುದು ಯುಕ್ತಿ ಯುಕ್ತವೋ ಅದನ್ನೇ ಸ್ವೀಕರಿಸಬೇಕು ಎಂದರ್ಥ. ಉಷಾದೇವಿಯೇ ಮೊದಲಾದ ಪ್ರತಿಮಾಸ್ಥಾನೀಯರಾದ ದೇವತೆಗಳನ್ನು

ಬ್ರಹ್ಮ ಎಂದು ಉಪಾಸನೆ ಮಾಡುವುದು ಮಿಥ್ಯೋಪಾಸನೆಯಾಗುವ ಪ್ರಯುಕ್ತ ಅದು ಯುಕ್ತಿಯುಕ್ತವಲ್ಲವಾದ್ದರಿಂದ ಪ್ರತೀಕವನ್ನು ಬ್ರಹ್ಮ ಎಂದು ಉಪಾಸನೆ ಮಾಡಕೂಡದು.

೪) ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ

ಈ ಅಧಿಕರಣದಲ್ಲಿ ವಿನ್ಯಾಸ ವು ಪೂರ್ವಪಕ್ಷಯುಕ್ತಿ -

ವಿ-ವಿವಿಧವಾದ ಗುಣಗಳ ನ್ಯಾಸ - ಧ್ಯಾನ ಎಂದು ಅರ್ಥ. ಭಗವಂತನನ್ನು ಧ್ಯಾನ ಮಾಡಿದರೆ ಅವನ ವಿಶೇಷ ಪ್ರೀತಿಯನ್ನು ಗಳಿಸಬಹುದಾದ್ದರಿಂದ ವಿವಿಧ ಗುಣಗಳನ್ನೇ ಧ್ಯಾನ ಮಾಡಬೇಕು. ಹೊರತು ಪ್ರತಿ ದಿನವೂ ಬ್ರಹ್ಮತ್ವವನ್ನೇ ಧ್ಯಾನ ಮಾಡಬೇಕೆಂಬ ನಿಯಮವಿಲ್ಲ ಎಂದು ಪೂರ್ವಪಕ್ಷ.

ಸಾಧನ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ - ಬ್ರಹ್ಮತ್ವದ ಉಪಾಸನೆಯೇ ಸಾಧನಗಳಲ್ಲಿ ಅಧಿಕವಾದ ಸಾಧನವಾಗಿದೆ. ಏಕೆಂದರೆ ಬ್ರಹ್ಮತ್ವದಲ್ಲಿ ಎಲ್ಲ ಗುಣಗಳ ಅಂತರ್ಭಾವವಿದೆ. ಆದ್ದರಿಂದ ಪ್ರತಿ ದಿನವೂ ನಿಯಮೇನ ಬ್ರಹ್ಮತ್ವೋಪಾಸೆಯನ್ನು ಮಾಡಬೇಕೆಂಬುದು ಸಿದ್ಧಾಂತ.

೫) ಓಂ ಆದಿತ್ಯಾದಿ ಮತಯಶ್ಚಾಂಗ ಉಪಪತ್ತೇಃ ಓಂ

ಈ ಅಧಿಕರಣದಲ್ಲಿ ವಿಚಾರ ಎನ್ನುವುದು ಪೂರ್ವಪಕ್ಷ ಯುಕ್ತಿ - ವಿ-ವಿವಿಧ ಸ್ಥಾನಗಳಲ್ಲಿ ಚಾರ - ಸಂಚಾರ, ಎಂದರ್ಥ. ಸೂರ್ಯಾದಿ ದೇವತೆಗಳು ಕೇವಲ ಭಗವಂತನ ಕಣ್ಣು ಮೊದಲಾದ ಅಂಗಗಳಲ್ಲಿ ಮಾತ್ರವಲ್ಲದೇ ಅನಂತಾನಂತಜೀವರ ಕಣ್ಣು ಮೊದಲಾದ ಅಂಗಗಳ ಲ್ಲಿಯೂ ಸಂಚರಿಸುವುದರಿಂದ ಅವರು ಭಗವಂತನನ್ನು ಉಪಾಸನೆ ಮಾಡುವಾಗ ನಮಗೆ ಆಶ್ರಯವಾದ ಕಣ್ಣುಳ್ಳವನು? ಇತ್ಯಾದಿ ರೀತಿ ಯಿಂದಲೇ ಉಪಾಸನೆ ಮಾಡಬೇಕೆಂಬ ನಿಯಮವಿಲ್ಲ ಎಂದು ಪೂರ್ವಪಕ್ಷ.

ಇಲ್ಲಿ ಆಪ್ತಕೃತ್ಯಂ ಎಂಬುದು ಸಿದ್ಧಾಂತ ನ್ಯಾಯವಾಗಿದೆ- ಸೂರ್ಯಾದಿ ದೇವತೆಗಳು ಭಗವಂತನನ್ನು ಉಪಾಸನೆ ಮಾಡುವಾಗ ತಮಗೆ ಆಶ್ರಯ ವಾದ ಚಕ್ಷುರಾದಿ ಅಂಗಗಳುಳ್ಳವನು ವಿಷ್ಣು ಎಂದು ಉಪಾಸನೆ ಮಾಡಿದರೆ ಮಾತ್ರ ಆ ದೇವತೆಗಳು ತಮ್ಮ ಕರ್ತವ್ಯವನ್ನು ಪೂರ್ಣಗೊಳಿಸಿದಂತಾಗಿ

ತಮಗೆ ಯೋಗ್ಯವಾದ ಭಗವದಂಗಗಳಲ್ಲಿ ಲಯ ರೂಪವಾದ ಮುಕ್ತಿಯನ್ನು ಪಡೆಯವರು. ಆದ್ದರಿಂದ ಅವರು ಹಾಗೆಯೇ ಉಪಾಸನೆ ಮಾಡಬೇಕು.

೬) ಓಂ ಆಸೀನಃ ಸಂಭವಾತ್ ಓಂ

ಈ ಅಧಿಕರಣದಲ್ಲಿ ಸಂಜ್ಞಾ ಎಂಬುದು ಪೂರ್ವಪಕ್ಷ ಪ್ರಾಪಕಯುಕ್ತಿ- ಸಂ-ಸಮೀಚೀನವಾದ ಜ್ಞಾ-ಜ್ಞಾನ. ಅಂದರೆ ಜ್ಞಾನವು ಭಗವದ್ವಿಷಯಕ ವಾದರೆ ಸಮೀಚೀನವೆನಿಸುತ್ತದೆ. ಅಂತಹ ಭಗವದ್ವಿಷಯಕವಾದ ಜ್ಞಾನದಿಂದಲೇ ಫಲವು ದೊರೆಯುವುದಾದ್ದರಿಂದ ಆಸನಾದಿ ನಿಯಮಗಳು ಅನಾವಶ್ಯಕ ಎಂದು ಪೂರ್ವಪಕ್ಷ.

ವಿಶೇಷಕಾರ್ಯ ಎಂಬುದು ಇಲ್ಲಿ ಸಿದ್ಧಾಂತಯುಕ್ತಿ - ಆಸನಾದಿ ನಿಯಮಗಳಿಂದ ಭಗವದ್ವಿಷಯಕ ಜ್ಞಾನದಲ್ಲಿಯೇ ನಿಶ್ಚಲತ್ವಾದಿ ವಿಶೇಷವು ಉಂಟಾಗುವುದರಿಂದ ಆಸನಾದಿ ನಿಯಮವು ಆವಶ್ಯಕ ಎಂದು ಸಿದ್ಧಾಂತ.

೭) ಓಂ ಆಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ಓಂ

ನಾನಾಪ್ರವೃತ್ತಿ ಎಂಬುದು ಇಲ್ಲಿ ಪೂರ್ವಪಕ್ಷಯುಕ್ತಿ - ಮೋಕ್ಷವು ದೊರೆಯುವವರೆಗೆ ಅನುಷ್ಠಾನ ಮಾಡಲು ನಾನಾಸಾಧನಗಳ ಪ್ರಸಕ್ತಿ ಇರುವಾಗ ಧ್ಯಾನವನ್ನೇ ಏತಕ್ಕಾಗಿ ಮಾಡಬೇಕು. ಅಪರೋಕ್ಷದವರೆಗೆ ಧ್ಯಾನವನ್ನು ಮಾಡಿ ಅನಂತರ ಮೋಕ್ಷದವರೆಗೆ ಬೇರೆ ಬೇರೆ ಸಾಧನಗಳನ್ನು ಅನುಷ್ಠಾನ ಮಾಡಬಹುದು ಎಂದು ಪೂರ್ವಪಕ್ಷ.

ವಿಶೇಷಕಾರ್ಯವು ಇಲ್ಲಿ ಸಿದ್ಧಾಂತ ಯುಕ್ತಿ - ಧ್ಯಾನವಿಲ್ಲದೇ ಅಪ ರೋಕ್ಷ ರೂಪವಾದ ವಿಶೇಷಕಾರ್ಯವು ಉಂಟಾಗುವುದಿಲ್ಲ. ಆದ್ದರಿಂದ ಅಪರೋಕ್ಷದವರೆಗೆ ಧ್ಯಾನ ಮಾಡಬೇಕೆಂಬುದಂತೂ ನಿರ್ವಿವಾದ ಸಿದ್ಧವಾಗಿದೆ. ಅನಂತರವೂ ಶುಕಾದಿ ಜ್ಞಾನಿಗಳು ಧ್ಯಾನ ಮಾಡುವುದು ಕಂಡಿದೆ. ಅಂತಹ ಧ್ಯಾನದಿಂದ ಮೋಕ್ಷದಲ್ಲಿ ಆನಂದಾತಿಶಯ ರೂಪವಾದ ಕಾರ್ಯ ವಿಶೇಷವಿರುವುದರಿಂದ ಮೋಕ್ಷದವರೆಗೂ ಧ್ಯಾನವನ್ನು ಅನುಷ್ಠಾನಮಾಡಬೇಕೆಂದು ಸಿದ್ಧಾಂತ.

೮) ಓಂ ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷವಿನಾಶೌ ಓಂ

ಕೃತಕೃತ್ಯತಾ ಎನ್ನುವುದು ಇಲ್ಲಿ ಪೂರ್ವಪಕ್ಷಯುಕ್ತಿ - ಅಪರೋಕ್ಷಜ್ಞಾನವಾದ

ಕೂಡಲೇ ಸಾಧಕನ ಸಕಲ ಕರ್ಮಗಳೂ ನಾಶ ಹೊಂದುವ ಪ್ರಯುಕ್ತ ಅವನು ಕೃತಕೃತ್ಯನಾಗುವನು. ಆದ್ದರಿಂದ ಆಗಲೇ ಅವನಿಗೆ ಮುಕ್ತಿಯಾಗುವುದೆಂದು ಹೇಳಬೇಕು. ಆಗಲೇ ಮುಕ್ತಿಯಾಗದೆ ವಿಲಂಬವಾಗಿ ಮುಕ್ತಿಯಾಗು ವುದಾದರೆ ಅಲ್ಲಿಯವರೆಗೆ ಅವನು ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ಮಾಡಬೇಕಾಗುವುದರಿಂದ ಪುನಃ ಕರ್ಮಲೇಪ ಉಂಟಾಗಿ ಅದರ ನಾಶಕ್ಕೆ ಕಾರಣವೇ ಇಲ್ಲದಂತಾಗಿ ಮೋಕ್ಷವು ಅನುಪಪನ್ನವಾದೀತು. ಆದ್ದರಿಂದ ಅಪರೋಕ್ಷವಾದ ಕೂಡಲೇ ಮೋಕ್ಷವಾಗುತ್ತದೆಂದು ಒಪ್ಪಬೇಕೆಂದು ಪೂರ್ವಪಕ್ಷ.

ಕೃತಸಂಸ್ಥಿತಿ ಎನ್ನುವುದು ಇಲ್ಲಿ ಸಿದ್ಧಾಂತಯುಕ್ತಿ - ಅಪರೋಕ್ಷ ಜ್ಞಾನವಾದರೂ ಪ್ರಾರಬ್ಧಕರ್ಮವು ಅನುಭೋಗ ಪೂರ್ತಿಯಾಗುವ ವರೆಗೂ ಇದ್ದೇ ಇರುತ್ತದೆ. ಅದರ ಅನುಭೋಗ ಮಾಡುವವರೆಗೆ ಮೋಕ್ಷವಾಗುವುದಿಲ್ಲ. ಅಪರೋಕ್ಷ ಜ್ಞಾನಾನಂತರದ ಪುಣ್ಯ ಕರ್ಮದಿಂದ ಮೋಕ್ಷದಲ್ಲಿ ಆನಂದಾತಿಶಯವಾಗುವುದರಿಂದ ಅದರ ನಾಶವಾಗ ಬೇಕಾಗಿಲ್ಲ. ಅಪರೋಕ್ಷಾನಂತರದಲ್ಲಿ ಪಾಪಕರ್ಮ ಸಂಭವಿಸಿದರೂ ಜೀವನಿಗೆ ಅದರ ಲೇಪವಾಗುವುದಿಲ್ಲವಾದ್ದರಿಂದ ಮೋಕ್ಷವು ಅನುಪಪನ್ನ ವಾಗುವುದಿಲ್ಲ. ಎಂದು ಸಿದ್ಧಾಂತ.

**ನಾಲ್ಕನೇ ಅಧ್ಯಾಯ ಎರಡನೇ ಪಾದದ ನ್ಯಾಯಮಾಲಾ**

**ವ್ಯಾಮಿಶ್ರತಾ ಕಾರ್ಯಕರತ್ವಮರ್ಥ-**
**ಕ್ಲೃಪ್ತಿಃ ಸುದಾರ್ಢ್ಯಂ ಪರತಂತ್ರತಾ ಚ ।**
**ಸಮಾನಧರ್ಮಃ ಕೃತಶೇಷತಾ ಚ**
**ಲೋಕೋಪಮಾಪೂರ್ವಮತಾನುಸಾರಾಃ ।**

**ವಿಶೇಷಸಾಮ್ಯಶ್ರುತಿರಾಢ್ಯತಾ ಚ**
**ಸಮಾನಲೋಪೋ ಮಹಿಮಾ ವಿಶೇಷಃ ।**
**ಕೃತಾರ್ಥತಾ ಶಶ್ವದನು ಪ್ರವೃತ್ತಿಃ**
**ಸಿದ್ಧಾಂತ ನಿರ್ಣೀತಿ ವಿಶಿಷ್ಟ ಹೇತವಃ ॥**

೧) ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ

ಈ ಅಧಿಕರಣದಲ್ಲಿ ವ್ಯಾಮಿಶ್ರತಾ ಎಂಬುದು ಪೂರ್ವಪಕ್ಷ ಯುಕ್ತಿ - ವಾಕ್ ಪೂರ್ವರೂಪಂ ಮನ ಉತ್ತರ ರೂಪಂ ಎಂಬ ಶ್ರುತಿಯಲ್ಲಿ

ವಾಗಭಿಮಾನಿಗೆ ಪೂರ್ವರೂಪತ್ವವನ್ನು ಮನೋಭಿಮಾನಿಗೆ ಉತ್ತರ ರೂಪತ್ವವನ್ನು ಹೇಳಿದ್ದು ಕಂಡು ಬರುತ್ತದೆ. ಆದರೆ ಮನಃ ಪೂರ್ವರೂಪಂ ವಾಗುತ್ತರ ರೂಪಂ ಎಂಬ ಬೇರೊಂದು ಶ್ರುತಿ ವಾಕ್ಯವು ಮನೋಭಿಮಾನಿಗೆ ಪೂರ್ವರೂಪತ್ವವನನ್ನೂ ವಾಗಭಿಮಾನಿಗೆ ಉತ್ತರ ರೂಪತ್ವವನ್ನೂ ಹೇಳುತ್ತಿದೆ. ಇಂತಹ ವ್ಯಾಮಿಶ್ರತಾದಿಂದ (ಗೊಂದಲದಿಂದ) ಯಾರಿಗೆ ಯಾರಲ್ಲಿ ಲಯವೆಂಬುದು ನಿರ್ಣಯವಾಗುವುದಿಲ್ಲ ಎಂದು ಪೂರ್ವಪಕ್ಷ.

ವಿಶೇಷ ಸಾಮ್ಯ ಶ್ರುತಿ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ - ಮನಸಾ ವಾ ಅಗ್ರೇ ಸಂಕಲ್ಪಯತಿ ಅಥ ವಾಚಾ ವ್ಯಾಹರತಿ (ಮೊದಲು ಮನಸ್ಸಿನಿಂದ ಸಂಕಲ್ಪ ಮಾಡುತ್ತಾನೆ. ಅನಂತರ ಮಾತನಾಡುತ್ತಾನೆ) ಎಂಬುದಾಗಿ ಯುಕ್ತಿ ಮೂಲಕವಾಗಿ ವಾಗಭಿಮಾನಿಗಿಂತ ಮನೋಭಿಮಾನಿಗೆ ಪ್ರಾಧಾನ್ಯವನ್ನು ಹೇಳುವ ಶ್ರುತಿಯಿರುವುದರಿಂದ ಮನೋಭಿಮಾನಿಯಲ್ಲಿಯೇ ವಾಗಭಿ ಮಾನಿಗೆ ಲಯವೆಂದು ನಿರ್ಣಯ ಮಾಡಬಹುದು. ವಾಕ್ ಪೂರ್ವರೂಪಂ ಇತ್ಯಾದಿ ಶ್ರುತಿಯು ವಾಗಭಿಮಾನಿಯು ವಿಷ್ಣುನಾಮದಲ್ಲಿನ ಸಂಧ್ಯಕ್ಷರದಲ್ಲಿ ಪೂರ್ವವರ್ಣಾಭಿಮಾನಿ ಎಂಬ ಅಭಿಪ್ರಾಯದಿಂದ ಪ್ರವೃತ್ತವಾಗಿದೆ ಹೊರತು ಪ್ರಾಧಾನ್ಯಾಭಿಪ್ರಾಯದಿಂದಲ್ಲ. ಆದ್ದರಿಂದ ಅದು ಸಾಮ್ಯಶ್ರುತಿ ಅಂದರೆ ಸಾವಕಾಶವಾದ್ದರಿಂದ ಸಾಧಾರಣ ಶ್ರುತಿ. ವಿಶೇಷ ಮತ್ತು ಸಾಮ್ಯ ಶ್ರುತಿಗಳಲ್ಲಿ ವಿಶೇಷ ಶ್ರುತಿಯೇ ಗ್ರಾಹ್ಯ ಎಂದು ಸಿದ್ಧಾಂತ.

೨) ಓಂ ತನ್ಮನಃ ಪ್ರಾಣ ಉತ್ತರಾತ್ ಓಂ

ಈ ಅಧಿಕರಣದಲ್ಲಿ ಕಾರ್ಯಕರತ್ವ ಎಂಬುದು ಸಿದ್ಧಾಂತ ಯುಕ್ತಿ - ಅಂದರೆ ದೃಷ್ಟವಾದ ಮತ್ತು ಅದೃಷ್ಟವಾದ ಸಕಲ ಕಾರ್ಯಗಳೂ ಮನಃ ಪೂರ್ವವಾಗಿಯೇ ಆಗುವುದರಿಂದ ಮನಸ್ಸು ಸಕಲ ಕಾರ್ಯಕರವೆಂದಾ ಯಿತು. ಆದ್ದರಿಂದ ಇಂತಹ ಮನಸ್ಸಿಗೆ ಪ್ರಾಣನಿಗಿಂತ ಅವರತ್ವವು ಕೂಡುವುದಿಲ್ಲವಾದ್ದರಿಂದ ಮನೋಭಿಮಾನಿಗೆ ಪ್ರಾಣನಲ್ಲಿ ಲಯ ವಿಲ್ಲವೆಂದು ಪೂರ್ವಪಕ್ಷ.

ಆಢ್ಯತಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ - ಮನೋಭಿಮಾ ನಿಗಿಂತಲೂ ಪ್ರಾಣನಿಗೆ ಆಢ್ಯತ್ವ = ಅತಿ ಶ್ರೇಷ್ಠತ್ವವು ಶ್ರುತಿಸಿದ್ಧವಾಗಿದೆ.

ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।
ಮನಃಸ್ಥೇನ ವಿಶೇಷೇಣ ಕಾಮ್ಯೈಃ ಕರ್ಮಕೃದೇವ ಚ ।
ಪೃಥಕ್ ಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।
ಪ್ರಾಣ ಏಕೋ ವಶೀ ನಿತ್ಯಂ ಬಾಹ್ಯಾಂತಃ ಕರಣೇಶ್ವರಃ ।

ಪ್ರಾಣನು ಆಯಾ ಇಂದ್ರಿಯಗಳಲ್ಲಿ ನೆಲಸಿ ಆಯಾ ವಿಷಯಗಳ ಜ್ಞಾನವನ್ನು ಹುಟ್ಟಿಸುತ್ತಾನೆ. ಮನಃಸ್ಥಿತವಾದ ರೂಪವಿಶೇಷದಿಂದ ಇಚ್ಛೆಯನ್ನು ಹುಟ್ಟಿಸಿ ಸಕಲ ಕರ್ಮವನ್ನು ಮಾಡಿಸುವನು. ಪ್ರತ್ಯೇಕವಾದ ಒಂದು ರೂಪದಿಂದ ನಾನು ಎಂಬ ಜ್ಞಾನವನ್ನು ಹುಟ್ಟಿಸುತ್ತಾನೆ. ಹೀಗೆ ಪ್ರಾಣನು ಹೊರಗಿನ ಮತ್ತು ಒಳಗಿನ ಎಲ್ಲ ಇಂದ್ರಿಯಗಳಿಗೆ ಅಧಿಪತಿಯಾಗಿದ್ದಾನೆಂದು ಅವನಿಗೆ ಆಧ್ಯತ್ವ ಶ್ರುತವಾಗಿರುವುದರಿಂದ ಮನಸ್ಸಿಗೆ ಪ್ರಾಣನಲ್ಲಿ ಲಯವು ಯುಕ್ತವಾಗುತ್ತದೆಂದು ಸಿದ್ಧಾಂತ.

೩.) ಓಂ ಸೋಧ್ಯಕ್ಷೇ ತದುಪಗಮಾದಿಭ್ಯಃ ಓಂ

ಇಲ್ಲಿಯೂ ಕಾರ್ಯಕರತ್ವವು ಪೂರ್ವಪಕ್ಷಯುಕ್ತಿ -ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಮುಖ್ಯಪ್ರಾಣನಿಗೂ ಸಕಲ ಕಾರ್ಯಕಾರಿತ್ವವು ಇರುವುದರಿಂದ ಭಗವಂತನ ಸಾಮ್ಯ ಬಂದ ಪ್ರಯುಕ್ತ ಅವರಿಗೆ ಭಗವಂತನಲ್ಲಿ ಲಯವಿಲ್ಲ ಎಂದು ಪೂರ್ವಪಕ್ಷ.

ಆಢ್ಯತಾ ಎಂಬುದು ಸಿದ್ಧಾಂತ ಯುಕ್ತಿ - ಪರಮಾತ್ಮನು ಪ್ರಾಣನಿಗಿಂತಲೂ ಸ್ವತಂತ್ರನಾಗಿ ಜಗಜ್ಜನ್ಮಾದಿ ಬಹುತರವಾದ ಕಾರ್ಯಗಳನ್ನು ಮಾಡುವುದರಿಂದ ಪ್ರಾಣನಿಗಿಂತಲೂ ಆಢ್ಯನಾಗಿರುವುದರಿಂದ ಪ್ರಾಣನಿಗೂ ಪರಮಾತ್ಮನಿಗೂ ಸಾಮ್ಯ ಇಲ್ಲದ ಪ್ರಯುಕ್ತ ಭಗವಂತನಲ್ಲಿ ಲಯ ಯುಕ್ತ ಎಂದು ಸಿದ್ಧಾಂತ.

೪) ಓಂ ಭೂತೇಷು ತಚ್ಛ್ರುತೇಃ ಓಂ

ಈ ಅಧಿಕರಣದಲ್ಲಿ ಅರ್ಥಕ್ಲೃಪ್ತಿ ಎಂಬುದು ಪೂರ್ವಪಕ್ಷ ಯುಕ್ತಿ - 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಗೆ ಅಗ್ನಿಯಲ್ಲಿ ಸರ್ವದೇವತೆಗಳ ಲಯ ಎಂಬ ಅರ್ಥವೇ ಕ್ಲೃಪ್ತವಾದುದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯ ಎಂದು ಪೂರ್ವಪಕ್ಷ.

ಸಮಾನಲೋಪ ಎಂಬುದು ಸಿದ್ಧಾಂತ ಯುಕ್ತಿ - ಸಮಾನಲೋಪ ಎಂದರೆ ಮಾನಸಹಿತವಾದ ಲಯ ಎಂದರ್ಥ. 'ಭೂತೇಷು ದೇವಾ ವಿಲೀಯಂತೇ' ಎಂಬ ಮಾನಸಹಿತವಾಗಿ ಲಯವನ್ನು ಒಪ್ಪಬೇಕು. ಅಂದರೆ ಅಗ್ನಿಯಲ್ಲಿ ಲಯ. ಬೇರೆ ಭೂತಗಳಲ್ಲಿ ಲಯ ಹೊಂದಲು ಯೋಗ್ಯರಾದ ದೇವತೆಗಳಿಗೆ ಆಯಾ ಭೂತಗಳಲ್ಲಿ ಲಯ. ಹೀಗೆ ಯಥಾಯೋಗ್ಯ ಭೂತಗಳಲ್ಲಿ ಲಯ ಎಂದು ಸಿದ್ಧಾಂತ.

೫) ಓಂ ನೈಕಸ್ಮಿನ್ ದರ್ಶಯತೋ ಹಿ ಓಂ

ಅರ್ಥಕ್ಲೃಪ್ತಿಯೇ ಇಲ್ಲಿಯೂ ಪೂರ್ವಪಕ್ಷಯುಕ್ತಿ - ಇಲ್ಲಿ ಅರ್ಥಕ್ಲೃಪ್ತಿ ಎಂದರೆ ಅನ್ಯಥಾನುಪಪತ್ತಿ ಎಂದರ್ಥ. ಅಗ್ನಿಗೆ ವಾಯುವಿನಲ್ಲಿ ಲಯವಿದೆ ವಾಯುವಿಗೆ ಆಕಾಶದಲ್ಲಿ ಲಯವಿದೆ. ಆದ್ದರಿಂದ ಎಲ್ಲ ದೇವತೆಗಳಿಗೆ ಅಗ್ನಿಯಲ್ಲಿ ಲಯ ಹೇಳಿದರೆ ಭೂತಗಳಲ್ಲಿ ಲಯ ಹೇಳಿದಂತೆಯೇ ಆಯಿತು. ಪರಂಪರಯಾ ವಾಯು ಮತ್ತು ಆಕಾಶದಲ್ಲಿ ಲಯ ಇರುವುದರಿಂದ . ಹೀಗೆ ಹೇಳದಿದ್ದರೆ 'ಅಗ್ನೌ ಸರ್ವೇದೇವಾ ವಿಲೀಯಂತೇ' ಎಂಬ ಶ್ರುತಿ ಉಪಪನ್ನವಾಗಲಾರದು. ಆದ್ದರಿಂದ ಅಗ್ನೌ ಇತ್ಯಾದಿ ಶ್ರುತ್ಯನ್ಯಥಾನುಪಪತ್ತಿ ರೂಪ ಪ್ರಮಾಣದಿಂದ ಅಗ್ನಿಯಲ್ಲಿಯೇ ಲಯ ಎಂದು ಪೂರ್ವಪಕ್ಷ.

ಸಮಾನಲೋಪ ಎಂಬುದು ಸಿದ್ಧಾಂತ ಯುಕ್ತಿ - ಪೃಥಿವಿಯಲ್ಲಿ ಋಭುಗಳಿಗೆ, ವರುಣನಲ್ಲಿ ಅಶ್ವಿನ್ನಿಗಳಿಗೆ ಇತ್ಯಾದಿಯಾಗಿ ಪ್ರತ್ಯೇಕವಾಗಿ ಆಯಾ ಭೂತಗಳಲ್ಲಿ ಲಯ ಹೇಳತಕ್ಕ ವಿಶೇಷಶ್ರುತಿಗಳು ಇರುವದರಿಂದ ಮತ್ತು ಆಯಾ ಭೂತಗಳಿಂದ ಉತ್ಪನ್ನವಾದವುಗಳಿಗೆ ಆಯಾ ಭೂತಗಳಲ್ಲಿಯೇ ಲಯ ಹೇಳುವುದು ಯುಕ್ತಿಯುಕ್ತವಾದ್ದರಿಂದ ಆಯಾ ಭೂತಗಳಲ್ಲಿಯೇ ಲಯವನ್ನು ಹೇಳಬೇಕು. ಅಗ್ನಿಯಿಂದ ಉತ್ಪನ್ನರಾದ ಎಲ್ಲ ದೇವತೆಗಳಿಗೆ ಅಗ್ನಿಯಲ್ಲಿ ಲಯ ಎಂದು ಆ ಶ್ರುತಿಯನ್ನು ಅರ್ಥೈಸಬೇಕು. ಆಯಾ ಭೂತಾಭಿಮಾನಿಗಳಿಂದ ಹುಟ್ಟಿದಿರುವ ದೇವತೆಗಳಿಗೂ ಕೂಡ ಅವರ ಸಮಾನ ಕಕ್ಷ್ಯೆಯ ದೇವತೆಗಳು ಎಲ್ಲಿ ಲಯ ಹೊಂದುತ್ತಾರೋ ಅವರಿಗೂ ವಿಶೇಷವಚನವಿಲ್ಲದ ಪಕ್ಷದಲ್ಲಿ ಅಲ್ಲಿಯೇ

ಲಯವೆಂದು ಹೇಳಲು ಬರುವುದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂದು ಸಿದ್ಧಾಂತ. ಇಲ್ಲಿ 'ಸಮಾನಲೋಪ'ಎಂದರೆ ಮಾನಸಹಿತ ವಾದ=ವಿಶೇಷಶ್ರುತಿರೂಪಪ್ರ ಮಾಣಾನುಗುಣವಾದ ಲಯ ಎಂದೂ, ಸಮಾನಕಕ್ಷೆಯಲ್ಲಿರುವವರಿಗೆ - ಸಮಾನಸ್ಥಾನದಲ್ಲಿ ಲಯ ಎಂದೂ ಅರ್ಥ

೬) ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ

ಈ ಅಧಿಕರಣದಲ್ಲಿ ಸುದೃಢತ್ವ ಎಂಬುದು ಪೂರ್ವಪಕ್ಷಯುಕ್ತಿ. ಲಕ್ಷ್ಮೀದೇವಿಯರಲ್ಲಿರುವ ನಿತ್ಯ ಮುಕ್ತತ್ವವು ಅಥವಾ ಸಂಸಾರಾಭಾವವು ನಿತ್ಯವಾಗಿದೆ. ಸದೃಢವಾಗಿದೆ. ಆದ್ದರಿಂದ ಪರಮಾತ್ಮನಿಂದ ಸರ್ವಪ್ರಕಾರ 'ದಿಂದಲೂ ಸಾಮ್ಯವನ್ನು ಹೇಳಬೇಕಾಗುತ್ತದೆ. ಭಗವದಧೀನತ್ವವು ಉಪಪನ್ನವಾಗುವುದಿಲ್ಲ. ಆದ್ದರಿಂದ ಸಂಸಾರಿತ್ವವನ್ನು ಒಪ್ಪಿ ಲಯವನ್ನು ಒಪ್ಪಬೇಕು ಎಂದು ಪೂರ್ವಪಕ್ಷ.

ಮಹಿಮಾ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ - ನಿತ್ಯವಾದ ಪದಾರ್ಥಗಳನ್ನೂ ನಿಯಮನ ಮಾಡುವುದು ಭಗವಂತನ ಮಹಿಮೆ. ಲಕ್ಷ್ಮೀದೇವಿಯ ನಿತ್ಯ ಮುಕ್ತತ್ವವನ್ನು ತನ್ನ ನಿತ್ಯವಾದ ಶಕ್ತಿಯಿಂದ ನಿತ್ಯವೂ ನಿತ್ಯವಾಗುವಂತೆ ನಿಯಮಿಸುತ್ತಾನೆ. ಆದ್ದರಿಂದ ಲಕ್ಷ್ಮೀದೇವಿಯ ನಿತ್ಯ ಮುಕ್ತಿ ದೃಢವಾದರೂ ಈಶ್ವರನಿಂದ ಸರ್ವಸಾಮ್ಯಪ್ರಸಂಗವಿಲ್ಲವಾದ್ದರಿಂದ ಸಂಸಾರಿತ್ವ ಹೇಳಬೇಕಾಗಿಲ್ಲ. ಆದ್ದರಿಂದ ಲಯವೂ ಇಲ್ಲ. ಲಯವನ್ನು ಹೇಳುವ ಶ್ರುತಿಗೆ ಅತ್ಯಂತ ಸಾಮೀಪ್ಯ ಪರತ್ವವನ್ನು ಹೇಳಲು ಬರುವುದರಿಂದ ಅದರ ವಿರೋಧವೂ ಇಲ್ಲ.

೭) ಓಂ ತಾನಿ ಪರೇ ತಥಾ ಹ್ಯಾಹ ಓಂ

ಈ ಅಧಿಕರಣದಲ್ಲಿ ಪರತಂತ್ರತಾ ಎಂಬುದು ಪೂರ್ವಪಕ್ಷಯುಕ್ತಿ - ಎಲ್ಲ ದೇವತೆಗಳೂ ಪ್ರಾಣನಿಗೆ ಅಧೀನರಾದ್ದರಿಂದ ಪ್ರಾಣನಲ್ಲಿಯೇ ಲಯಹೊಂದುತ್ತಾರೆ ಹೊರತು ಭಗವಂತನಲ್ಲಿ ಅಲ್ಲ ಎಂದುಪೂರ್ವಪಕ್ಷ..

ವಿಶೇಷವು ಸಿದ್ಧಾಂತ ಯುಕ್ತಿ -

ಪ್ರಾಣಂ ಪ್ರಾಪ್ಯ ಪರಂ ದೇವಾಃ ತದನ್ಯೇ ಚೈವ ತದ್ಗತಾಃ ।
ಪ್ರಾಪ್ನುವಂತಿ ಪರಂ ದೇವಂ ವಸಂತಿ ಚ ಯಥಾಸುಖಮ್ ॥

(ಎಲ್ಲ ದೇವತೆಗಳು ಪ್ರಾಣನನ್ನು ಹೊಂದಿ ಅನಂತರ ಅವನ ಮೂಲಕ ಪರಮಾತ್ಮನನ್ನು ಹೊಂದಿ ಸುಖವಾಗಿ ಅಲ್ಲಿ ವಾಸಿಸುತ್ತಾರೆ) ಎಂಬ ಶ್ರುತಿ ವಿಶೇಷದಿಂದ ಪರಮಾತ್ಮನಲ್ಲಿ ಲಯ ಹೊಂದುತ್ತಾರೆಂದು ಸಿದ್ಧಾಂತ.

೮) ಓಂ ಅವಿಭಾಗೋ ವಚನಾತ್ ಓಂ

ಈ ಅಧಿಕರಣದಲ್ಲಿ ಸಮಾನಧರ್ಮವು ಪೂರ್ವಪಕ್ಷ ಪ್ರಾಪಕ ಯುಕ್ತಿ ಜೀವರ ಸತ್ಯಸಂಕಲ್ಪತ್ವಾದಿಗಳು ಭಗವದಧೀನ ಎಂದು ಹೇಳಿದರೆ ಪಾರತಂತ್ರ್ಯ ಮತ್ತು ತನ್ಮೂಲಕವಾಗಿ ದುಃಖಾದಿರೂಪವಾದ (ಸಮಾನಧರ್ಮ) ಸಂಸಾರಿ ಸಮಾನಧರ್ಮ ಬರುವ ಪ್ರಯುಕ್ತ ಮುಕ್ತರನ್ನು ಸ್ವತಂತ್ರರೆನ್ನಬೇಕು. ಎಂದು ಪೂರ್ವಪಕ್ಷ.

ಕೃತಾರ್ಥತಾ ಎಂಬುದು ಇಲ್ಲಿ ಸಿದ್ಧಾಂತಯುಕ್ತಿ - ಮುಕ್ತರು ಅಸ್ವತಂತ್ರರೇ ಆಗಿರುತ್ತಾರೆ. ಆದರೂ ಸಂಸಾರಕ್ಕೆ ಸಮಾನವಾದ ದುಃಖಾದಿ ಪ್ರಸಂಗವಿಲ್ಲ. ಏಕೆಂದರೆ ಭಗವದಿಚ್ಛಾನುಸಾರವಾಗಿದ್ದರೂ ಮುಕ್ತರ ಇಚ್ಛೆಗಳೆಲ್ಲವೂ ಅಲ್ಲಿ ಕೃತಾರ್ಥವಾಗುತ್ತವೆ ಅಂದರೆ ಪೂರೈಸಲ್ಪಡುತ್ತವೆ ಆದ್ದರಿಂದ ದುಃಖಾದಿ ಪ್ರಸಂಗವಿಲ್ಲವಾದ್ದರಿಂದ ಅಸ್ವತಂತ್ರರೆನ್ನುವುದರಲ್ಲಿ ಯಾವ ಬಾಧಕವೂ ಇಲ್ಲವೆಂದು ಸಿದ್ಧಾಂತ.

೯) ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನು ಗೃಹೀತಃ ಶತಾಧಿಕಯಾ ಓಂ

ಈ ಅಧಿಕರಣದಲ್ಲಿ ಕೃತಶೇಷತಾ ಎಂಬುದು ಪೂರ್ವಪಕ್ಷ ಯುಕ್ತಿ - ಅಜ್ಞಾನಿಗಳಿಗಿರುವಂತೆ ಜ್ಞಾನಿಗಳಿಗೂ ಪ್ರಾರಬ್ಧಕರ್ಮಶೇಷವು ಇರುವುದ ರಿಂದ ಅಜ್ಞಾನಿಗಳ ಮರಣಕ್ಕಿಂತ ಜ್ಞಾನಿಗಳ ಮರಣದಲ್ಲಿ ಯಾವ ವಿಶೇಷವೂ ಇಲ್ಲ. ಆದ್ದರಿಂದ ಜ್ಞಾನಕ್ಕೆ ಹೆಚ್ಚಿನ ಸಾಮರ್ಥ್ಯ ಇಲ್ಲ ಎಂದು ಪೂರ್ವಪಕ್ಷ.

ಶಶ್ವದನುಪ್ರವೃತ್ತಿ ಎನ್ನುವುದು ಸಿದ್ಧಾಂತ ಯುಕ್ತಿ -

ಜ್ಞಾನ ಉಂಟಾದಾಗಿನಿಂದ ಸಹಕಾರಿ ಇದ್ದಾಗ ಯಾವಾಗಲೂ ಫಲ ಕೊಡುವುದು ಅದರ ಸ್ವಭಾವ ಎಂಬ ಶ್ರುತಿಯಿರುವುದರಿಂದ ಜ್ಞಾನವು

ಜೀವನನ್ನು ಇತರ ನಾಡಿಯಲ್ಲಿ ಪ್ರಯಾಣ ಮಾಡಿಸುವ ಪ್ರಾರಬ್ಧ ಕರ್ಮವನ್ನು ನಿವಾರಣೆ ಗೊಳಿಸಿ ಬ್ರಹ್ಮನಾಡಿಯಿಂದಲೇ ಉತ್ಕ್ರಮಣವಾಗು ವಂತೆ ಮಾಡುತ್ತದೆ. ಮರಣ ಕಾಲದಲ್ಲಿ ಮಾಡಬೇಕಾದ ಮಾರ್ಗಸ್ಮರಣವು ಜ್ಞಾನಕ್ಕೆ ಸಹಕಾರಿ. ಆದ್ದರಿಂದ ಜ್ಞಾನಿಯಾದರೂ ಅವನು ಅಂತ್ಯಕಾಲದಲ್ಲಿ ಮಾರ್ಗಸ್ಮರಣೆ ಮಾಡದಿದ್ದರೆ ಅವನಿಗೆ ಬ್ರಹ್ಮನಾಡಿಯಿಂದ ಉತ್ಕ್ರಮಣವಾಗುವುದಿಲ್ಲ.

೧೦) ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ

ಲೋಕೋಪಮಾ ಎನ್ನುವುದು ಈ ಅಧಿಕರಣದ ಪೂರ್ವಪಕ್ಷ ಯುಕ್ತಿ ಲೌಕಿಕವಾದ ಕೃಷ್ಯಾದಿರೂಪವಾದ ಸಾಧನವನ್ನು ಮಾಡುವಾಗ ಫಲಸ್ಮರಣೆ ಕಂಡಿಲ್ಲ. ಅದರ ದೃಷ್ಟಾಂತದಿಂದ ಸ್ವರ್ಗ ಮತ್ತು ಮೋಕ್ಷಗಳ ಸಾಧನೆಯ ಲ್ಲಿಯೂ ಮಾರ್ಗರೂಪ ಫಲಸ್ಮರಣೆ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಇಲ್ಲಿಯೂ ಶಶ್ವದನು ಪ್ರವೃತ್ತಿ ಎನ್ನುವುದೇ ಸಿದ್ಧಾಂತ ಯುಕ್ತಿ-

ಕ್ರಿಯಾನು ವೃತ್ತಿರ್ಲೌಕಿಕೇ ಸಾಧನೇ ತು
ಮನೋಽನುವೃತ್ತಿರ್ವೈದಿಕೇ ಸಾಧನೇ ಸ್ಯಾತ್ ।
ಭವೇತ್ ಫಲಂ ಸರ್ವಥೇತ್ಯೇವ ತಸ್ಮಾತ್
ಸ್ಮರೇತ್ ಸದಾ ನಿಶ್ಚಿತತ್ವೇನ ವಿದ್ವಾನ್ ।

ಲೌಕಿಕ ಸಾಧನದಲ್ಲಿ ಕ್ರಿಯಾನುವೃತ್ತಿ -ವೈದಿಕ ಸಾಧನದಲ್ಲಿ ಮನೋ ನುವೃತ್ತಿ ಎಂದು ನಿಯಮ. ಆದ್ದರಿಂದಲೇ ಕೃಷಿಕರು ಯಥಾ ಶಕ್ತಿ ಉಳು ವಿಕೆಯನ್ನೇ ಆವೃತ್ತಿ ಮಾಡುತ್ತಾರೆ. ವೈದಿಕ ಸಾಧನೆಯಲ್ಲಿ ಮನಸ್ಸಿನ ಅನು ವೃತ್ತಿ ಎಂದರೆ ( ಅನುಗಮನ) ಸರ್ವದಾ ಸ್ಮರಣೆ ಆವಶ್ಯಕ. ಲೌಕಿಕ ಹಾಗೂ ವೈದಿಕ ಸಾಧನಗಳಲ್ಲಿ ಆವೃತ್ತಿಯ ಅಂಶದಲ್ಲಿ ಮಾತ್ರ ಸಾಮ್ಯವಿ ರುವುದು. ಆದ್ದರಿಂದ ಮಾರ್ಗರೂಪ ಫಲ ಸ್ಮರಣೆಯು ಆವಶ್ಯಕ ಎಂದು ಸಿದ್ಧಾಂತ.

## ನಾಲ್ಕನೇ ಅಧ್ಯಾಯ ಮೂರನೇ ಪಾದದ ನ್ಯಾಯಮಾಲಾ

..........ಸುಕ್ರಮ ವಿಕ್ರಮಮಾಪ
ಸಾಂತಾನಿಕಂ ಪ್ರಾಪ್ತಿರಭೀಷ್ಟತಾ ಚ
ಸೌಕರ್ಯಮಿತ್ಯಸ್ಯಮತಸ್ಯ ತರ್ಕಾಃ ।

ವಿಶೇಷ ಸಂಪ್ರಾಪ್ತಿರುರುತ್ವಮಾಪ್ತಿಃ
ಕ್ರಮಾನುರಾಗಃ ಕಥಿತಾನುವೃತ್ತಿಃ
ಸಿದ್ಧಾಂತ ನಿರ್ಣೀತಿಕರಾಃ........॥

೧) ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ

ಈ ಅಧಿಕರಣದಲ್ಲಿ ಸುಕ್ರಮವು ಪೂರ್ವಪಕ್ಷಯುಕ್ತಿ -

ಸುಕ್ರಮ ಎಂದರೆ ಅನೇಕ ಮಾರ್ಗ ಎಂದರ್ಥ. ತೇ ಅರ್ಚಿಷಮಭಿಸಂಭವಂತಿ, ಎಂಬುದಾಗಿಯೂ ಮತ್ತು ಸ ವಾಯುಮಾಗಚ್ಛತಿ ಎಂಬುದಾಗಿಯೂ ಉತ್ಕ್ರಾಂತಿ ಹೊಂದಿದವರಿಗೆ ಭಿನ್ನ ಭಿನ್ನ ಮಾರ್ಗಗಳನ್ನು ಹೇಳಲಾಗಿದೆ. ಅಧಿಕಾರಭೇದದಿಂದಲೇ ಈ ಮಾರ್ಗ ಭೇದವನ್ನು ಸರಿಪಡಿಸಬೇಕು. ಆದ್ದರಿಂದ ಯಾವ ಅಧಿಕಾರಿಗೆ ಯಾವ ಮಾರ್ಗ ಎಂದು ನಿರ್ಣಯಿಸಲು ಸಾಧ್ಯವಿಲ್ಲವಾದ್ದರಿಂದ ಮಾರ್ಗ ಸ್ಮರಣೆ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ವಿಶೇಷ ಸಂಪ್ರಾಪ್ತಿಯು ಇಲ್ಲಿ ಸಿದ್ಧಾಂತ ಯುಕ್ತಿ - ''ಸರ್ವೇ ವಾ ಏತೇ ಉತ್ಕ್ರಾಮಂತಿ ತೇ ಅರ್ಚಿಷಮೇವ ಅಭಿಯಂತಿ ತತೋ ವಾಯುಂ ತತೋಽಹಃ ತತಃ ಪೂರ್ವಪಕ್ಷಂ ಇತ್ಯೇಷ ಉ ಏವ ಬ್ರಹ್ಮ ಪಥಃ ...'' (ಉತ್ಕ್ರಾಂತಿ ಹೊಂದಿದವರು ಅರ್ಚಿರ್ಲೋಕವನ್ನು, ಅನಂತರ ವಾಯು ಲೋಕವನ್ನು ಅನಂತರ ಅಹರ್ಲೋಕ, ಶುಕ್ಲಪಕ್ಷಾಭಿಮಾನಿ ದೇವತೆಯ ಲೋಕ ಈ ಕ್ರಮದಿಂದ ಹೋಗುತ್ತಾರೆ ಇದು ಬ್ರಹ್ಮ ಪಥ) ಎಂಬ ಶ್ರುತಿ ವಿಶೇಷದಿಂದ ಜ್ಞಾನಿಗಳಿಗೆ ಒಂದೇ ಮಾರ್ಗ ವಿಶೇಷವು ಪ್ರಾಪ್ತವಾಗಿದೆ ಹೊರತು ಎರಡಲ್ಲ. ಅರ್ಚಿರ್ಲೋಕದ ನಂತರ ವಾಯುಲೋಕವಿರುವ ಪ್ರಯುಕ್ತ ಅರ್ಚಿರ್ಮಾರ್ಗವೆಂದರೂ ವಾಯು ಮಾರ್ಗವೆಂದರೂ ಒಂದೇ ಆಗಿದೆ.

೨) ಓಂ ವಾಯುಮಬ್ದಾದವಿಶೇಷವಿಶೇಷಾಭ್ಯಾಂ ಓಂ

ಈ ಅಧಿಕರಣದಲ್ಲಿಯೂ ಸುಕ್ರಮವೇ ಪೂರ್ವಪಕ್ಷಯುಕ್ತಿ - ಅರ್ಚಿಷೋ ವಾಯುಮಾಗಚ್ಛತಿ ಎಂಬುದಾಗಿ ಒಂದು ಶ್ರುತಿಯು ಅರ್ಚಿರ್ಲೋಕದ ನಂತರ ವಾಯು ಲೋಕವು ಪ್ರಾಪ್ಯ ಎನ್ನುತ್ತದೆ. ಅರ್ಚಿಷೋಽಹಃ ಎಂಬ ಮತ್ತೊಂದು ಶ್ರುತಿಯು ಅರ್ಚಿರ್ಲೋಕದ ನಂತರ ಅಹರ್ಲೋಕವು ಪ್ರಾಪ್ಯ ಎನ್ನುತ್ತಿದೆ. ಆದ್ದರಿಂದ ಅರ್ಚಿರ್ಲೋಕದ ನಂತರದಲ್ಲಿ

ಮಾರ್ಗವು ಕವಲೊಡೆದು ಎರಡಾಗುತ್ತದೆ ಎನ್ನಬೇಕು. ಆದ್ದರಿಂದ ಅನೇಕ ಮಾರ್ಗಗಳೇ ಇದ್ದಂತಾಗಿ ಯಾರಿಗೆ ಯಾವ ಮಾರ್ಗ ಎಂಬ ನಿರ್ಧಾರ ಅಶಕ್ಯವಾದ್ದರಿಂದ ಮಾರ್ಗ ಸ್ಮರಣೆ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ವಿಶೇಷಸಂಪ್ರಾಪ್ತಿ ಇಲ್ಲಿ ಸಿದ್ಧಾಂತ ಯುಕ್ತಿ - ''ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹಃ '' ಎಂಬುದಾಗಿ ಅರ್ಚಿರ್ಲೋಕದ ನಂತರದಲ್ಲಿ ದ್ವಿತೀಯ ಪ್ರಾಪ್ಯವಾದ ಲೋಕವು ವಾಯುಲೋಕ ನಂತರ ಅಹರ್ಲೋಕ ಎಂದು ವಿಶೇಷ ಶ್ರುತಿಯಿರುವುದರಿಂದ ಅರ್ಚಿರ್ಲೋಕದ ನಂತರದಲ್ಲಿ ವಾಯುಲೋಕ ಎಂದೇ ಹೇಳಬೇಕು. ಅರ್ಚಿಷೋಽಹಃ ಎಂಬ ಶ್ರುತಿಯಲ್ಲಿ ದ್ವಿತೀಯ ಶಬ್ದ ಇಲ್ಲದ್ದರಿಂದ ಅರ್ಚಿರ್ಲೋಕದಿಂದ ವಾಯುಲೋಕದ್ವಾರಾ ಅಹರ್ಲೋಕಕ್ಕೆ ಹೋಗುತ್ತಾನೆ. ಅದನ್ನು ಅರ್ಥೈಸಬಹುದಾದ್ದರಿಂದ ಮಾರ್ಗಭೇದ ಕಲ್ಪನೆ ಸರಿಯಲ್ಲ ಎಂದು ಸಿದ್ಧಾಂತ.

೩) ಓಂ ತಟಿತೋಽಧಿ ವರುಣಃ ಸಂಬಂಧಾತ್ ಓಂ

ಈ ಅಧಿಕರಣದಲ್ಲಿಯೂ ಸುಕ್ರಮವೇ ಪೂರ್ವಪಕ್ಷಯುಕ್ತಿ - ಸಂವತ್ಸರಾತ್ ವರುಣಲೋಕಂ ಎಂಬ ಶ್ರುತಿಯು ಸಂವತ್ಸರಾಭಿಮಾನಿ ಲೋಕದ ನಂತರದಲ್ಲಿ ವರುಣ ಲೋಕವು ಪ್ರಾಪ್ಯ ಎನ್ನುತ್ತದೆ. ಸಂವತ್ಸರಾತ್ ತಟಿತಮಾಗಚ್ಛತಿ ಎಂಬ ಶ್ರುತಿಯು ತಟಿದಭಿಮಾನಿ (ಮಿಂಚಿಗೆ ಅಭಿಮಾನಿ) ಲೋಕವು ಪ್ರಾಪ್ಯ ಎನ್ನುತ್ತದೆ. ಆದ್ದರಿಂದ ಸಂವತ್ಸರ ಲೋಕದಿಂದ ಮುಂದೆ ಸುಕ್ರಮ ಅಂದರೆ ಎರಡು ಮಾರ್ಗವನ್ನು ಕಲ್ಪಿಸಬೇಕಾದ್ದರಿಂದ ನಿಯತ ಮಾರ್ಗ ಇಲ್ಲದಂತಾಗಿ ಮಾರ್ಗಸ್ಮರಣೆ ಅನುಪಪನ್ನ ಎಂದು ಪೂರ್ವಪಕ್ಷ.

ವಿಶೇಷಸಂಪ್ರಾಪ್ತಿ ಎಂಬುದು ಸಿದ್ಧಾಂತ ಸ್ಥಾಪಕ ಯುಕ್ತಿಯಾಗಿದೆ. ತಟಿತಾ ಹ್ಯೂಹ್ಯತೇ ವರುಣ ಲೋಕಃ ಎಂಬುದಾಗಿ ತಟಿತ್ ಲೋಕವು ವರುಣ ಲೋಕವನ್ನು ಹೊತ್ತಿದೆ ಎಂದು ವಿಶೇಷವನ್ನು ಹೇಳಿದ್ದರಿಂದ ಸಂವತ್ಸರ ಲೋಕದಿಂದ ತಟಿಲ್ಲೋಕ ಅಲ್ಲಿಂದ ವರುಣ ಲೋಕ ಎಂಬುದಾಗಿಯೇ

ಸಂವತ್ಸರಾತ್ ವರುಣ ಲೋಕಂ ಎಂಬುದಕ್ಕೆ ಅರ್ಥೈಸಬೇಕು ಎಂದು ಸಿದ್ಧಾಂತ.

೪) ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ

ಈ ಅಧಿಕರಣದಲ್ಲಿಯೂ ಸುಕ್ರಮ ಎನ್ನುವುದು ಪೂರ್ವಪಕ್ಷಯುಕ್ತಿ - ಸ ವಾಯುಮಾಗಚ್ಛತಿ ಎಂಬಲ್ಲಿ ಹೇಳಲ್ಪಟ್ಟ ಅರ್ಚಿರ್ಲೋಕದ ನಂತರದಲ್ಲಿ ಪ್ರಾಪ್ಯನಾದ ವಾಯು ಎಂದರೆ ಮುಖ್ಯ ವಾಯುವನ್ನೇ ಗ್ರಹಿಸಬೇಕು. ವಾಯುಪದವು ಮುಖ್ಯವೃತ್ತಿಯಿಂದ ಮುಖ್ಯವಾಯುವನ್ನೇ ಬೋಧಿಸುತ್ತದೆ. ಆದ್ದರಿಂದ ಅರ್ಚಿರ್ಲೋಕದ ನಂತರ ಮುಖ್ಯವಾಯು ಲೋಕ ಎಂಬ ಈ ಮಾರ್ಗವೇ ಸುಕ್ರಮ=ಸಮೀಚೀನ ಮಾರ್ಗವಾಗು ವುದರಿಂದ, ಈ ಮಾರ್ಗದಲ್ಲಿಯಾದರೂ ಮುಖ್ಯ ವಾಯುವಿಗೆ ಪ್ರಥಮ ಪ್ರಾಪ್ಯತ್ವವೇ ಇರುವುದರಿಂದ ಅಂತಿಮ ಪ್ರಾಪ್ಯತ್ವ ರೂಪವಾದ ಶ್ರೇಷ್ಠತ್ವವು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ವಿಶೇಷಸಂಪ್ರಾಪ್ತಿಯು ಇಲ್ಲಿ ಸಿದ್ಧಾಂತ ಯುಕ್ತಿ -

ಉತ್ಕ್ರಾಂತೋ ವಿದ್ವಾನ್...... ವಿದ್ಯುತ ಮೇವ ಅಂತತ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ (ಉತ್ಕ್ರಾಂತಿ ಹೊಂದಿದ ಮುಕ್ತನು ಕೊನೆಗೆ ವಿದ್ಯುನ್ನಾಮಕ ಭಾರತಿಯನ್ನು ಪಡೆದು ಅನಂತರ ತತ್ಪತಿಯಾದ ವಾಯುವನ್ನು ಪಡೆದು ಅಲ್ಲಿಂದ ಪರಬ್ರಹ್ಮನನ್ನು ಹೊಂದುತ್ತಾನೆ) ಎಂಬ ಶ್ರುತ್ಯಂತರದಲ್ಲಿ ಅಂತಿಮ ಪ್ರಾಪ್ಯನೆಂದು ಹೇಳಲ್ಪಟ್ಟ ವಾಯುವಿಗೆ ಭಾರತೀಪತಿತ್ವರೂಪ ವಿಶೇಷಣ ಕೊಟ್ಟಿರುವುದರಿಂದ ಆ ಶ್ರುತಿವಿಶೇಷದಿಂದ ಅಂತಿಮಪ್ರಾಪ್ಯವಾಯುವೇ ಮುಖ್ಯವಾಯುವೆಂದು ತಿಳಿಯಬೇಕು. ಸ ವಾಯುಮಾಗಚ್ಛತಿ ಎಂಬಲ್ಲಿ ಯಾದರೂ ದ್ವಿತೀಯಪ್ರಾಪ್ಯತ್ವವನ್ನು ಹೇಳಿರುವುದರಿಂದ ಆ ವಾಯುವು ಆತಿವಾಹಿಕ ವಾಯು ಎಂದು ಗ್ರಹಿಸಬೇಕು. ಆದ್ದರಿಂದ ಮುಖ್ಯವಾಯುವಿನ ಶ್ರೇಷ್ಠತ್ವಕ್ಕೆ ಭಂಗವಿಲ್ಲವೆಂದು ಸಿದ್ಧಾಂತ.

೫) ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ

ವಿಕ್ರಮವು ಇಲ್ಲಿ ಪೂರ್ವಪಕ್ಷಯುಕ್ತಿ - ಸೋಮಾದಗ್ನಿಂ ಅಗ್ನೇರಿಂದ್ರ ಎಂಬಲ್ಲಿ ಚಂದ್ರನ ನಂತರದಲ್ಲಿ ಅವನಿಗಿಂತ ಅವರನಾದ ಅಗ್ನಿಗೆ ಪ್ರಾಪ್ಯತ್ವವನ್ನು ಹೇಳಿದ್ದಾರೆ. ಇಲ್ಲಿ ತಾರತಮ್ಯಕ್ಕೆ ವಿರುದ್ಧವಾದ ಕ್ರಮವು ಬಂದಿದೆ ಅದರಂತೆ ಮುಖ್ಯವಾಯುವನ್ನು ಪಡೆದ ನಂತರದಲ್ಲಿ ಅವರಿಗಿಂತ ಅವರರಾದ ಬೇರೊಬ್ಬ ದೇವತೆಯ ಮೂಲಕ ಪರಬ್ರಹ್ಮನನ್ನು ಹೊಂದಬಹುದು ಎಂದು ಪೂರ್ವಪಕ್ಷ.

ಊರುತ್ವ ಎನ್ನುವುದು ಸಿದ್ಧಾಂತ ಯುಕ್ತಿ - ಪರಬ್ರಹ್ಮನನ್ನು ಹೊಂದಿಸುವ ಶಕ್ತಿಯುಳ್ಳವರು ಮುಖ್ಯಪ್ರಾಣದೇವರೇ ಎಂದರ್ಥ. ವಾಯುರೇವ ಬ್ರಹ್ಮ ಗಮಯತಿ ತಸ್ಯ ಹ್ಯೇಷಾ ಶಕ್ತಿಃ (ಮುಖ್ಯವಾಯು ಒಬ್ಬರೇ ಪರಬ್ರಹ್ಮನ ಬಳಿ ಕರೆದೊಯ್ಯುವವರು. ಅವರಿಗೆ ಮಾತ್ರ ಆ ಶಕ್ತಿ ಇರುವುದು) ಎಂಬ ಶ್ರುತಿಯ ಪ್ರಕಾರ ಉತ್ತಮರಾದ ಮುಖ್ಯ ವಾಯುವೇ ಬ್ರಹ್ಮನನ್ನು ಹೊಂದಿಸುವ ಶಕ್ತಿಯುಳ್ಳವರಾದ್ದರಿಂದ ಮಧ್ಯದಲ್ಲಿ ಯಾವೊಬ್ಬ ದೇವತೆಯನ್ನು ಕಲ್ಪಿಸಬಾರದೆಂದು ಸಿದ್ಧಾಂತ.

೬) ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ

ಈ ಅಧಿಕರಣದಲ್ಲಿ ಸಾಂತಾನಿಕ, ಪ್ರಾಪ್ತಿ, ಅಭೀಷ್ಟತಾ, ಸೌಕರ್ಯ ಇವು ಪೂರ್ವಪಕ್ಷಯುಕ್ತಿಗಳು. ಆಪ್ತಿ ಆಪ್ತಿ, ಕ್ರಮಾನುರಾಗ, ಕಥಿತಾನುವೃತ್ತಿ ಇವು ಸಿದ್ಧಾಂತ ಯುಕ್ತಿಗಳು -

೧) ಸಾಂತಾನಿಕ ಎಂದರೆ ಸಂತತವಾಗಿ ಇರುವುದು. ಚತುರ್ಮುಖ ಬ್ರಹ್ಮನಿಗೆ ಮುಕ್ತಿಯಾಗುವವರೆಗೂ ಸಂಸಾರ ಬಂಧವು ಇರುವುದರಿಂದ ಅಲ್ಲಿಯವೆಗ ಯಾರಿಗೂ ಪರಬ್ರಹ್ಮ ಪ್ರಾಪ್ತಿ ಇಲ್ಲ. ಎಲ್ಲರೂ ನಿಯತವಾಗಿ ಕಾರ್ಯಬ್ರಹ್ಮ (ಚತುರ್ಮುಖನ) ಬಳಿಗೇ ಹೋಗಿ ಸೇರುವರು ಎಂದು ಪೂರ್ವಪಕ್ಷ

ಆಪ್ತಿ ಎನ್ನುವುದು ಸಿದ್ಧಾಂತ ಯುಕ್ತಿ - ಶ್ರುತಿಯಿಂದ ಪ್ರಾಪ್ತವಾದ ಪ್ರಮೇಯವನ್ನೇ ಸ್ವೀಕರಿಸಬೇಕು. ಯಾಂತಿ ದೇವಾಃ ಪರಂ ಕೇಚಿತ್ ಇತ್ಯಾದಿ

ಶ್ರುತಿ ಪ್ರಕಾರವಾಗಿ ಅಪ್ರತೀಕಾಲಂಬನರು ಅಂದರೆ ವ್ಯಾಪ್ತ್ಯೋಪಾಸಕರು ಪರಬ್ರಹ್ಮನ ಬಳಿ ಹೋಗುತ್ತಾರೆ. ಪ್ರತೀಕಾಲಂಬನರು ಚತುರ್ಮುಖರ ಬಳಿಗೆಎಂಬುದಾಗಿ ಯೋಗ್ಯತಾತಾರತಮ್ಯಾನುಸಾರವಾಗಿಟ್ಟು ಕೊಳ್ಳ ಬೇಕೆಂದು ಸಿದ್ಧಾಂತ.

೨) ಪ್ರಾಪ್ತಿ ಎಂಬುದು ಮತ್ತೊಂದು ಪೂರ್ವಪಕ್ಷ ನ್ಯಾಯ -

ಬ್ರಹ್ಮಗಮಯತಿ ಎಂಬಲ್ಲಿ ಬ್ರಹ್ಮ ಶಬ್ದಕ್ಕೆ ಪರಮ ಮುಖ್ಯವೃತ್ತಿಯಿಂದ ಪರಬ್ರಹ್ಮ ಎಂಬ ಅರ್ಥವೇ ಪ್ರಾಪ್ತವಾಗುವುದರಿಂದ ವಾಯು ಎಲ್ಲರನ್ನೂ ಪರಬ್ರಹ್ಮನ ಬಳಿಗೇ ಕರೆದೊಯ್ಯುವನು ಎಂದು ಪೂರ್ವಪಕ್ಷ.

ಆಪ್ತಿ ಎನ್ನುವುದೇ ಸಿದ್ಧಾಂತಯುಕ್ತಿ - ಹಿಂದೆ ಹೇಳಿದಂತೆ ಯಾಂತಿ ದೇವಾಃ ಪರಂ ಕೇಚಿತ್ ಎಂಬ ಪ್ರಮಾಣಾನುಸಾರವಾಗಿ ಯೋಗ್ಯತಾ ವಿಶೇಷಉಳ್ಳ ಅಪ್ರತೀಕಾಲಂಬನರು ಮಾತ್ರ ಪರಬ್ರಹ್ಮನ ಬಳಿ ಹೋಗುತ್ತಾರೆ. ಇತರರು ಕಾರ್ಯಬ್ರಹ್ಮನ ಬಳಿಗೆ ಹೋಗುತ್ತಾರೆ. ಎಂದು ಸಿದ್ಧಾಂತ.

೩) ಅಭೀಷ್ಟತಾ ಎಂಬುದು ಮತ್ತೊಂದು ಪೂರ್ವಪಕ್ಷಯುಕ್ತಿ -

ಯಾರಿಗೆ ಪರಬ್ರಹ್ಮ ಪ್ರಾಪ್ತಿಯು ಇಷ್ಟವೋ ಅವರು ಪರಬ್ರಹ್ಮನನ್ನು ಹೋಗಿ ಸೇರುತ್ತಾರೆ. ಚತುರ್ಮುಖ ಪ್ರಾಪ್ತಿಯನ್ನು ಬಯಸುವವರು ಅಲ್ಲಿಗೇ ಹೋಗಿ ಸೇರುತ್ತಾರೆ ಎಂದು ಪೂರ್ವಪಕ್ಷ.

ಇದೂ ಸರಿಯಲ್ಲ. ಕ್ರಮಾನುರಾಗ ಎನ್ನುವುದು ಸಿದ್ಧಾಂತಯುಕ್ತಿ. 'ಕ್ರಮಾನುರಾಗೀ ಭಗವಾನ್ ಕ್ರಮಾತ್ ಪುಂಭಿರವಾಪ್ಯತೇ' ಎಂಬ ಪ್ರಮಾಣಾನುಸಾರವಾಗಿ ಪರಮಾತ್ಮನು ಅವರವರ ಯೋಗ್ಯತಾ ಕ್ರಮದಿಂದ ಪ್ರಸನ್ನನಾಗುವನು ಮತ್ತು ಪ್ರಾಪ್ಯನಾಗುವನು ಎಂದೇ ಹೇಳಬೇಕು. ಆದ್ದರಿಂದ ಆಯಾ ಮುಕ್ತರು ತಮ್ಮ ತಮ್ಮ ಇಚ್ಛೆಯಂತೆ ಫಲವನ್ನು ಪಡೆಯುತ್ತಾರಾದರೂ ಆಯಾ ಫಲಕ್ಕೆ ಯೋಗ್ಯರಾದರೆ ಮಾತ್ರ ಆ ಫಲವನ್ನು ಹೊಂದುತ್ತಾರೆಂದು ಸಿದ್ಧಾಂತ.

೪) ಸೌಕರ್ಯ ಎಂಬುದು ಮತ್ತೊಂದು ಪೂರ್ವಪಕ್ಷಯುಕ್ತಿ - ಆಯಾ ಮುಕ್ತರು ತಮ್ಮ ತಮ್ಮ ಸೌಕರ್ಯದಂತೆ ಪರಬ್ರಹ್ಮನನ್ನೋ ಅಥವಾ ಚತುರ್ಮುಖನನ್ನೋ ಹೋಗಿ ಸೇರುತ್ತಾರೆಂದು ಪೂರ್ವಪಕ್ಷ.

ಇದೂ ಸರಿಯಲ್ಲ. ಕಥಿತಾನುವೃತ್ತಿ ಎಂಬುದು ಇಲ್ಲಿ ಸಿದ್ಧಾಂತ ಯುಕ್ತಿ - ಶ್ರುತಿಯಲ್ಲಿ ಹೇಳಲ್ಪಟ್ಟದ್ದನ್ನೇ ಅನುಸರಿಸಬೇಕು. 'ಸಪ್ರತೀಕಾಶ್ಚತುರ್ಮುಖಮಪ್ರತೀಕಾಃ ಪರಮಂ' ಇತ್ಯಾದಿ ಶ್ರುತಿಯ ಪ್ರಕಾರ ಹಿಂದೆ ಹೇಳಿದಂತೆಯೇ ಪ್ರತೀಕಾಲಂಬನರು ಚತುರ್ಮುಖನನ್ನು, ಅಪ್ರತೀಕಾಲಂಬನರು ಪರಬ್ರಹ್ಮನನ್ನು ಹೋಗಿ ಸೇರುತ್ತಾರೆ ಎಂದು ಸಿದ್ಧಾಂತ.

**ನಾಲ್ಕನೇ ಅಧ್ಯಾಯ ನಾಲ್ಕನೇ ಪಾದದ ನ್ಯಾಯಮಾಲಾ**

**ಅತಿಕ್ರಮೋಕ್ತಿಃ ಕೃತಿರರ್ಥಲಾಭಃ**
**ಪರಾಗತಿಃ ಪಾರಗತಿಸ್ತದೋಕಃ ।**
**ಸಮಸ್ತಕಾರ್ಯಂ ವಶಿತಾ ಚ ವಿಶ್ವ-**
**ಸಂಭಾವನಾಯುಕ್ತಯಸ್ತ್ವನ್ಯಪಕ್ಷೇ ॥**

**ಸಾಮಾನ್ಯರೂಪಂ ಪ್ರತಿಭಾನಮುಕ್ತಿ-**
**ರಾಶ್ಚರ್ಯತಾ ಕೃತ್ರಿಮತಾಸ್ತ ದೋಷಃ ।**
**ವಿಶೇಷಕ್ಲೃಪ್ತಿಃ ಕೃತ ನಿಶ್ಚಯಶ್ಚ**
**ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ॥**

೧) ಓಂ ಸಂಪದ್ಯಾವಿರ್ಭಾಯ ಸ್ವೇನ ಶಬ್ದಾತ್ ಓಂ

ಈ ಅಧಿಕರಣದಲ್ಲಿ ಅತಿಕ್ರಮೋಕ್ತಿಯು ಪೂರ್ವಪಕ್ಷಯುಕ್ತಿ-

ಏತಂ ಸೇತುಂ ತೀರ್ತ್ವಾ ಎಂಬುದಾಗಿ ಮೋಕ್ಷದಲ್ಲಿ ಅತಿ ಕ್ರಮಣವು (ದಾಟುವಿಕೆಯು) ಹೇಳಲ್ಪಟ್ಟಿದೆ. ಆದ್ದರಿಂದ ಜೀವರು ಮೋಕ್ಷದಲ್ಲಿ ಬ್ರಹ್ಮನನ್ನೂ ಅತಿಕ್ರಮಿಸಿ ಹೋಗುತ್ತಾರೆ ಎಂದು ಪೂರ್ವಪಕ್ಷ.

ಸಾಮಾನ್ಯರೂಪಂ ಎಂಬುದು ಸಿದ್ಧಾಂತ ಯುಕ್ತಿ - ಸಾಮಾನ್ಯ ರೂಪದಿಂದ ಅತಿಕ್ರಮಣ (ತರಣ)ವು ಹೇಳಲ್ಪಟ್ಟಿದೆಯೇ ಹೊರತು ಬ್ರಹ್ಮ ತೀರ್ತ್ವಾ ಎಂಬುದಾಗಿ ವಿಶೇಷ ರೂಪದಿಂದ ಹೇಳಲ್ಪಟ್ಟಿಲ್ಲ. ಆದ್ದರಿಂದ

ಇಮಾಂ ಘೋರಾಂ ಅಶಿವಾಂ ನದೀಂ ತೀರ್ತ್ವಾ ಬ್ರಹ್ಮ ಸಂಪದ್ಯತೇ (ಘೋರವಾದ ಅಮಂಗಲವಾದ ಈ ಸಂಸಾರ ನದಿಯನ್ನು ದಾಟಿ ಬ್ರಹ್ಮನನ್ನು ಪಡೆಯುತ್ತಾನೆ) ಎಂದು ವಿಶೇಷ ಶ್ರುತಿಯ ಬಲದಿಂದ ಏತಂ ಸೇತುಂ ತೀರ್ತ್ವಾ ಎನ್ನುವುದಕ್ಕೆ ಏತಂ ಸೇತುಂ ಉದ್ದಿಶ್ಯ-ಈ ಬ್ರಹ್ಮನನ್ನು ಪಡೆಯುವ ಉದ್ದೇಶ್ಯದಿಂದ ಸಂಸಾರವನ್ನು ದಾಟಿ ಎಂದು ಅರ್ಥವನ್ನು ಹೇಳಬೇಕೆಂದು ಸಿದ್ಧಾಂತ.

೨) ಓಂ ಮುಕ್ತಃ ಪ್ರತಿಜ್ಞಾನಾತ್ ಓಂ

ಈ ಅಧಿಕರಣದಲ್ಲಿ ಕೃತಿಯು ಪೂರ್ವಪಕ್ಷಯುಕ್ತಿ - ಸ ತತ್ರ ಪರ್ಯೇತಿ 'ಜಕ್ಷನ್ ಕ್ರೀಡನ್ ರಮಮಾಣಃ' ಎಂದು ಭೋಗ ಪ್ರತಿಪಾದಕ ಶ್ರುತಿಯಲ್ಲಿ ಪರ್ಯೇತಿ ಎಂಬುದಾಗಿ ಕೃತಿ (ಕ್ರಿಯೆ)ಯು ಹೇಳಲ್ಪಟ್ಟಿದೆ. ಕೃತಕೃತ್ಯನಾದ ಮುಕ್ತನಿಗೆ ಕೃತಿಯನ್ನು ಹೇಳುವುದು ಸರಿಯಲ್ಲವಾದ್ದರಿಂದ ಈ ಶ್ರುತಿಯಲ್ಲಿ ಮುಕ್ತನು ಪ್ರತಿಪಾದ್ಯನಲ್ಲ ಎಂದು ಪೂರ್ವಪಕ್ಷ.

ಪ್ರತಿಭಾನಂ ಎಂಬುದು ಸಿದ್ಧಾಂತಯುಕ್ತಿ - ಆ ಶ್ರುತಿಯಲ್ಲಿ ಹಿಂದೆ ಸ್ವೇನರೂಪೇಣ ಅಭಿನಿಷ್ಪದ್ಯತೇ ಎಂಬುದಾಗಿ ಸ್ವರೂಪಾವಿರ್ಭಾವವು ಹೇಳಲ್ಪಟ್ಟಿದೆಯಾದ್ದರಿಂದ ಮುಕ್ತನೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ. ಪರ್ಯೇತಿ ಎಂಬುದಾಗಿ ಹೇಳಲ್ಪಟ್ಟ ಕೃತಿಯೂ ಸಂಸಾರಿಯ ಕೃತಿಗಿಂತ ಭಿನ್ನವಾದ ಮುಕ್ತಕೃತಿಯೇ ಆಗಿದೆ. ಅದು ಕೃತಕೃತ್ಯನಿಗೂ ಉಪಪನ್ನ ವಾಗುತ್ತದೆ ಎಂದು ಸಿದ್ಧಾಂತ.

೩) ಓಂ ಆತ್ಮಾ ಪ್ರಕರಣಾತ್ ಓಂ

ಈ ಅಧಿಕರಣದಲ್ಲಿ ಅರ್ಥಲಾಭವು ಪೂರ್ವಪಕ್ಷಯುಕ್ತಿ -

'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂಬಲ್ಲಿ ಪರಂಜ್ಯೋತಿ ಪದದಿಂದ ಸೂರ್ಯನನ್ನು ಇಟ್ಟುಕೊಂಡು ಮುಕ್ತನು ಸೂರ್ಯನನ್ನು ಪಡೆಯುತ್ತಾನೆ ಎಂದು ಅರ್ಥ ಹೇಳಿದರೆ 'ಸ ತೇಜಸಿ ಸೂರ್ಯೇ ಸಂಪನ್ನೋ ಭವತಿ' ಎಂಬ ಶ್ರುತಿಯೊಂದಿಗೆ

ಏಕಾರ್ಥತ್ವರೂಪ ಪ್ರಯೋಜನ ಲಾಭ ಇರುವುದರಿಂದ ಪರಂಜ್ಯೋತಿ ಎಂದರೆ ಸೂರ್ಯನೇ ಎಂದು ಪೂರ್ವಪಕ್ಷ.

ಉಕ್ತಿಯು ಇಲ್ಲಿ ಸಿದ್ಧಾಂತ ಯುಕ್ತಿ - 'ಆತ್ಮೈವ ಹಿ ಪರಂ ಜ್ಯೋತಿಃ .. ತಮೇವ ಜೀವೋಽಭಿಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ ' ಎಂಬ ನಿರವಕಾಶ ಉಕ್ತಿ ಇರುವುದರಿಂದ ಪರಂಜ್ಯೋತಿ ಪದದಿಂದ (ಆತ್ಮ) ಪರಮಾತ್ಮನನ್ನೇ ಗ್ರಹಿಸಬೇಕೆಂದು ಸಿದ್ಧಾಂತ.

೪) ಓಂ ಅವಿಭಾಗೇನ ದೃಷ್ಟತ್ವಾತ್ ಓಂ

ಪರಾಗತಿಯು ಈ ಅಧಿಕರಣದ ಪೂರ್ವಪಕ್ಷಯುಕ್ತಿ -ಮುಕ್ತಿಯಲ್ಲಿ ಈಶ್ವರ ಭುಕ್ತವಾದ ಭೋಗಗಳನ್ನೇ ಜೀವರಿಗೆ ಹೇಳಿದರೆ, ಈಶ್ವರನು ಆನಂದ ಪೂರ್ಣನಾದ್ದರಿಂದ ಕದಾಚಿತ್ ಅಭೋಗವೂ ಸಂಭವಿಸಬಹುದಾದ್ದರಿಂದ ಜೀವರಿಗೂ ಭೋಗಾಭಾವ ಪ್ರಸಂಗ ಉಂಟಾಗುತ್ತದೆ. ಆದರೆ ಮೋಕ್ಷವು ಪರಗತಿ ಅಂದರೆ ಪರಮ ಪುರುಷಾರ್ಥರೂಪ. ಆದ್ದರಿಂದ ಜೀವರಿಗೆ ಈಶ್ವರಾಭುಕ್ತ ಭೋಗಗಳನ್ನೂ ಹೇಳಬೇಕು. ಆ ಪಕ್ಷದಲ್ಲಿ ಈಶ್ವರನಿಗೆ ಸರ್ವಭೋಕ್ತೃತ್ವ ಬರಲಾರದು ಎಂದು ಪೂರ್ವಪಕ್ಷ.

ಆಶ್ಚರ್ಯತಾ ಎನ್ನುವುದು ಇಲ್ಲಿ ಸಿದ್ಧಾಂತ ಯುಕ್ತಿ - ಇತರತ್ರ ದುರ್ಲಭವಾದ ಧರ್ಮಗಳು ಭಗವಂತನಲ್ಲಿವೆ. ಆದ್ದರಿಂದಲೇ ಅವನು ಆಶ್ಚರ್ಯ. ಅವನು ಪೂರ್ಣಾನಂದನಾದರೂ ಪೂರ್ಣಭೋಗ ಉಳ್ಳವನು ಎಂದು 'ಪೂರ್ಣಾನಂದಃ ಪೂರ್ಣಭುಕ್ ' ಎಂಬ ಶ್ರುತಿಯು ಹೇಳುತ್ತದೆ. ಆದ್ದರಿಂದ ಭೋಗಾಭಾವ ಪ್ರಸಂಗವೇ ಇಲ್ಲವಾದ್ದರಿಂದ ಈಶ್ವರ ಭುಕ್ತ ಭೋಗಗಳ ಲೇಶವನ್ನು ಜೀವರು ಭೋಗಿಸುತ್ತಾರೆಂದು ಸಿದ್ಧಾಂತ.

೫) ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ

ಈ ಅಧಿಕರಣದಲ್ಲಿ ಪಾರಗತಿ ಎನ್ನುವುದು ಪೂರ್ವಪಕ್ಷಯುಕ್ತಿ - ಜೀವನು ಮುಕ್ತನಾಗುವಾಗ ಎಲ್ಲ ದೇಹಗಳನ್ನೂ ತೊರೆದಿರುವುದರಿಂದ ಅವನಿಗೆ ಭೋಗವು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಅಕೃತ್ರಿಮತಾ ಎಂಬುದು ಸಿದ್ಧಾಂತ ಯುಕ್ತಿ - ಕೃತ್ರಿಮದೇಹಗಳನ್ನು ತೊರೆದರೂ ಅಕೃತ್ರಿಮವಾದ ಚಿದ್ದೇಹದಿಂದ ಭೋಗವನ್ನು ಅನುಭವಿಸುತ್ತಾನೆಂದು ಸಿದ್ಧಾಂತ.

೬) ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ

ತದೋಕಃ ಎನ್ನುವುದು ಪೂರ್ವಪಕ್ಷಯುಕ್ತಿ - ಮುಕ್ತರು ಭಗವಂತನ ಮನೆಯಲ್ಲಿರುವವರಾದ್ದರಿಂದ ಭೂಲೋಕದ ಮನೆಗಳಲ್ಲಿ ಭೋಗವು ಶ್ರಮಸಾಧ್ಯವಾಗಿರುವಂತೆ ಅಲ್ಲಿಯೂ ಭೋಗವು ಶ್ರಮಸಾಧ್ಯ ಎಂದು ಪೂರ್ವಪಕ್ಷ.

ಅಸ್ತದೋಷವು ಸಿದ್ಧಾಂತಯುಕ್ತಿ - ಪರಮಾತ್ಮನ ಮಂದಿರವು ನಿರ್ದುಷ್ಟವಾದ್ದರಿಂದ ಅಲ್ಲಿಯ ಭೋಗಗಳು ಶ್ರಮಸಾಧ್ಯವಲ್ಲ. ಕೇವಲ ಸಂಕಲ್ಪ ಸಾಧ್ಯವೆಂದು ಸಿದ್ಧಾಂತ.

೭) ಓಂ ಅತ ಏವ ಚಾನನ್ಯಾಧಿಪತಿಃ ಓಂ

ಇಲ್ಲಿಯೂ ತದೋಕಃ ಎನ್ನುವುದೇ ಪೂರ್ವಪಕ್ಷಯುಕ್ತಿ -

ಭೂಮಿಯಲ್ಲಿ ಹೇಗೆ ಜನರು ರಾಜಾದಿ ಗೃಹಗಳಿಗೆ ಹೋದಾಗ ಅವರರಾದ ಭೃತ್ಯರ ನಿಯಮನಕ್ಕೆ ಒಳ ಪಡುತ್ತಾರೋ ಅದರಂತೆ ಪರಮಾತ್ಮನ ಮಂದಿರವೂ ಪರಗೃಹವೆನಿಸುವುದರಿಂದ ಅವರರಾದ ಜೀವರಿಂದ ನಿಯಮ್ಯತ್ವವು ಇರುತ್ತದೆಂದು ಪೂರ್ವಪಕ್ಷ.

ಅಸ್ತದೋಷವು ಸಿದ್ಧಾಂತಯುಕ್ತಿ - ಪರಮಾತ್ಮನ ಮಂದಿರವು ನಿರ್ದುಷ್ಟವಾದುದರಿಂದಲೇ ಅಲ್ಲಿ ಮುಕ್ತರು ಅಧಮಜನರಿಂದ ನಿಯಮ್ಯರಾಗುವುದಿಲ್ಲ. ಎಂದು ಸಿದ್ಧಾಂತ.

೮) ಓಂ ಅಭಾವಂ ಬಾದರಿರಾಹ ಹ್ಯೇವಂ ಓಂ

ಅಧಿಕರಣದಲ್ಲಿ ಸಮಸ್ತಕಾರ್ಯ ಎಂಬುದು ಪೂರ್ವಪಕ್ಷಯುಕ್ತಿ -

ಸುಪ್ತಿಯಲ್ಲಿ ಚಿದ್ದೇಹವಿದ್ದರೂ ಆಗ ಸ್ರಕ್ ಚಂದನಾದಿ ವಿಷಯ ಭೋಗ ಕಂಡಿಲ್ಲವಾದ್ದರಿಂದ ಅದು ಭೋಗ ಪ್ರಯೋಜಕವಲ್ಲ. ಸ್ಥೂಲ ದೇಹ ಮತ್ತು ಅದರಲ್ಲಿ ಅಭಿಮಾನವೇ ಪ್ರಯೋಜಕ ಎನ್ನಬೇಕು. ಅದನ್ನು

ಮುಕ್ತಿಯಲ್ಲಿ ಒಪ್ಪಿದರೆ ದುಃಖಾದಿ ಸಮಸ್ತ ಕಾರ್ಯಗಳು ಉಂಟಾಗಬೇಕು. ದೇಹವಿಲ್ಲದಿದ್ದರೆ ನಿರ್ಭೋಗ ಪ್ರಸಂಗ ಎಂದು ಪೂರ್ವಪಕ್ಷ.

ವಿಶೇಷಕ್ಲೃಪ್ತಿಯು ಸಿದ್ಧಾಂತಯುಕ್ತಿ - ಅಮುಕ್ತರು ಪ್ರಕೃತಿ ಬದ್ಧರಾದ ಪ್ರಯುಕ್ತ ಅವರಿಗೆ ಮಾತ್ರ, ದೇಹವಿಲ್ಲದಿದ್ದರೆ ಭೋಗವಿಲ್ಲ. ದೇಹ ಒಪ್ಪಿದರೆ ದುಃಖ ಎಂಬ ಪ್ರಸಂಗಕ್ಕೆ ಆಸ್ಪದವಾಗುತ್ತಾರೆ. ಮುಕ್ತಜೀವ ರಾದರೂ ಅಗ್ನಿಸ್ತಂಭನ ಮಾಡುವವನಂತೆ ಜಡದೇಹವನ್ನು ತಮ್ಮ ವಶದಲ್ಲಿ ಟ್ಟುಕೊಂಡಿ ರುವರಾದ್ದರಿಂದ ಜಡ ದೇಹ ಉಳ್ಳವರಾದರೂ ದುಃಖಿಗಳಾ ಗುವುದಿಲ್ಲ. ದೇಹರಹಿತರಾದರೂ ಭೋಗ ಹೀನರಾಗುವುದಿಲ್ಲ ಎಂದು ಅವರಲ್ಲಿ ವಿಶೇಷ ವಿರುವುದರಿಂದ ನಿರ್ದುಃಖತ್ವ ಮತ್ತು ಭೋಗ ಕೂಡು ತ್ತದೆ. ಬಾಹ್ಯದೇಹಾಭಿಮಾನವಿಲ್ಲದಿದ್ದರೂ ಸ್ವಪ್ನದಲ್ಲಿ ಭೋಗ ಉಂಟಾಗು ವಂತೆ ಮುಕ್ತಿಯಲ್ಲಿ ದೇಹವಿಲ್ಲದಿದ್ದರೂ ಭೋಗ ಆಗಬಹುದು. ಜಡದೇಹ ಒಪ್ಪಿದರೂ ದೀಪವು ಎಣ್ಣೆಯನ್ನು ಮಾತ್ರ ಸ್ವೀಕರಿಸಿ ಕಶ್ಮಲವನ್ನು ಬಿಡುವಂತೆ ಜೀವರು ಜಡ ದೇಹದಲ್ಲಿ ದುಃಖವನ್ನು ಬಿಟ್ಟು ಕೇವಲ ಸುಖವನ್ನು ಭೋಗಿಸುತ್ತಾರೆಂದು ಕೂಡಿಸಬಹುದೆಂದು ಸಿದ್ಧಾಂತ.

೯) ಓಂ ಜಗದ್ವ್ಯಾಪಾರವರ್ಜಂ ಓಂ

ಸಮಸ್ತಕಾರ್ಯ ಎನ್ನುವುದು ಪೂರ್ವಪಕ್ಷಯುಕ್ತಿ - ಮುಕ್ತರಿಗೆ ಸಂಕಲ್ಪ ಮಾತ್ರದಿಂದಲೇ ಸಮಸ್ತಕಾರ್ಯಕಾರಿತ್ವವು ಸಂಭವಿಸುವುದರಿಂದ ಜಗಜ್ಜನ್ಮಾದಿಕರ್ತೃತ್ವವೂ ಅವರಲ್ಲಿ ಬರಬಹುದಾದ್ದರಿಂದ ಜನ್ಮಾದಿ ಕರ್ತೃತ್ವ ರೂಪ ಬ್ರಹ್ಮ ಲಕ್ಷಣಕ್ಕೆ ಅತಿವ್ಯಾಪ್ತಿ ಎಂದು ಪೂರ್ವಪಕ್ಷ.

ವಿಶೇಷಕ್ಲೃಪ್ತಿಯು ಸಿದ್ಧಾಂತಸ್ಥಾಪಕಯುಕ್ತಿ - ಮುಕ್ತರಿಗೆ ಅಯೋಗ್ಯ ವಾದ ವಿಷಯದಲ್ಲಿ ಶಕ್ತಿ ಇರುವುದಲ್ಲ. ಚಿನ್ನವು ಎಷ್ಟು ಶುದ್ಧವಾಗಿದ್ದರೂ ಬೆಂಕಿಯ ಕಾರ್ಯವನ್ನು ಮಾಡುವುದಿಲ್ಲವಷ್ಟೆ. ಒಬ್ಬ ಪುರುಷನು ಎಷ್ಟು ಶಕ್ತನಾದರೂ ಜಡವನ್ನು ಚೇತನವನ್ನಾಗಿ ಮಾಡಲಾರ. ಮುಕ್ತರಿಗೆ ತಮಗೆ ಅಯೋಗ್ಯವಾದ ವಿಷಯದಲ್ಲಿ ಕಾಮನೆಯೇ ಉಂಟಾಗುವುದಿಲ್ಲ. ಇದೇ ಅವರ ಸತ್ಯಕಾಮತ್ವ. ಈ ವಿಶೇಷವು ''ವ್ಯಾಪಾರೋ ಜಗತೋ ವಿಷ್ಣೋಃ''

ಇತ್ಯಾದಿ ಪ್ರಮಾಣ ಸಿದ್ಧವಾದ್ದರಿಂದ ಭಗವಲ್ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ ಎಂದು ಸಿದ್ಧಾಂತ.

೧೦) ಓಂ ಸ್ಥಿತಿಮಾಹದರ್ಶಯತಶ್ಚೈವಂ ಪ್ರತ್ಯಕ್ಷನುಮಾನೇ ಓಂ

ವಶಿತಾ ಎನ್ನುವುದು ಈ ಅಧಿಕರಣದ ಪೂರ್ವಪಕ್ಷಯುಕ್ತಿ - ಮುಕ್ತರಲ್ಲಿ ಅಣಿಮಾದಿಸಿದ್ಧಿಗಳು ಇರುವುದರಿಂದ ವಶಿತ್ವವೂ ಇರುತ್ತದೆ. ಅಂದರೆ ಎಲ್ಲವನ್ನೂ ತಮ್ಮ ಅಧೀನದಲ್ಲಿಟ್ಟುಕೊಳ್ಳುವಿಕೆ. ಅದರಿಂದಾಗಿ ಅವರು ಮುಕ್ತಿಯಲ್ಲಿ ಮಾಡುವ ಉಪಾಸನಾದಿಗಳಿಂದ ಆನಂದಾದಿಗಳ ವೃದ್ಧಿಯನ್ನು ಪಡೆಯುತ್ತಾರೆ. ಹೀಗಾಗಿ ಮುಕ್ತಿಯೂ ಸಂಸಾರ ಸಮಾನ ಧರ್ಮವಾಯಿತೆಂದು ಪೂರ್ವಪಕ್ಷ.

ಕೃತನಿಶ್ಚಯ ಎನ್ನುವುದು ಸಿದ್ಧಾಂತ ಯುಕ್ತಿ - ಮುಕ್ತ ಜೀವರು ಮೋಕ್ಷದಲ್ಲಿ ಮಾಡುವ ಉಪಾಸನಾದಿಗಳೆಲ್ಲವೂ ಅಭ್ಯಾಸ ಪಾಟವ ಮತ್ತು ಸ್ನೇಹಪ್ರಯುಕ್ತವಾಗಿರುವುದರಿಂದ ಫಲರೂಪವೇ ಹೊರತು ಸಾಧನ ರೂಪವಲ್ಲ. ಆದ್ದರಿಂದ ಮೋಕ್ಷಕ್ಕೆ ಸಂಸಾರ ಸಮಾನ ಧರ್ಮತ್ವವಿಲ್ಲ ಎಂದು ಸಿದ್ಧಾಂತ.

೧೧) ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ

ವಿಶ್ವಸಂಭಾವನಾ ಎನ್ನುವುದು ಪೂರ್ವಪಕ್ಷಯುಕ್ತಿ -

ಏನು ಬೇಕಾದರೂ ಆಗುವ ಸಂಭವ ಎಂದರ್ಥ. ಮಹಾಭಾರತ ಯುದ್ಧದಲ್ಲಿ ತ್ರಯೋದಶೀ ದಿನದಲ್ಲಿಯೇ ಪಕ್ಷವು ಮುಗಿದಂತೆ ಮುಂದೆಂದಾದರೊಮ್ಮೆ ಮುಕ್ತರು ಪುನಃ ಸಂಸಾರಕ್ಕೆ ಬರುವ ಸಂಭವವಿದೆ ಎಂದು ಪೂರ್ವಪಕ್ಷ.

ಮಾಹಾತ್ಮ್ಯವು ಸಿದ್ಧಾಂತಯುಕ್ತಿ - ಭಗವಂತನು ಸತ್ಯಕಾಮ ಇದು ಅವನ ಮಹಿಮೆ. ಮುಕ್ತರು ಎಂದೆಂದೂ ಸಂಸಾರಕ್ಕೆ ಮರಳದಿರಲಿ ಎಂದೇ ಭಗವಂತನ ಇಚ್ಛೆ. ಅದು ಸತ್ಯವಾದದ್ದರಿಂದ ಮುಕ್ತರಿಗೆ ಪುನರಾವೃತ್ತಿ ಇಲ್ಲ ಎಂದು ಸಿದ್ಧಾಂತ.

**ಪರಿಮಳದ ಅಮತಿಮಮಂಗಳಶ್ಲೋಕಗಳು**

**ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।**
**ಯದವೋಚಮಹಂ ತೇನ ಪ್ರೀಯತಾಂ ಕಮಲಾಲಯಃ ॥**

ಎಲ್ಲರ ಎಲ್ಲ ಇಂದ್ರಿಯಗಳನ್ನು ಪ್ರೇರಿಸುವ, ಲಕ್ಷ್ಮೀ ಮತ್ತು ಮುಖ್ಯಪ್ರಾಣರಿಗೊಡಯನಾದ ಪರಮಾತ್ಮನಿಂದ ಪ್ರೇರಿತನಾಗಿ ಏನನ್ನು ನುಡಿದಿದ್ದೇನೆಯೋ ಆದರಿಂದ ಲಕ್ಷ್ಮೀಪತಿಯಾದ ಶ್ರೀಹರಿಯು ಪ್ರೀತನಾಗಲಿ.

**ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾ ಬುಧಾಃ ।**
**ಆಘ್ರಾಯೇಮಂ ಪರಿಮಲಂ ಸೇವಂತಾಂ ತೇ ಸುಧಾಮಿಮಾಮ್ ॥**

ಶ್ರೀಮನ್ನ್ಯಾಯಸುಧಾವನ್ನು ಪಾನಮಾಡಬಯಸಿದ ಜ್ಞಾನಿಗಳಾದ ರಸಿಕರು ಈ ಪರಿಮಳವನ್ನು ಆಘ್ರಾಣಿಸಿ ಸುಧೆಯ ಸ್ವಾದವನ್ನು ಸವಿಯಲಿ.

**ಜ್ಞಾನಾಬ್ಧಿರಪ್ಯವಾದೀದ್ಯತ್ ಸ್ಖಲತ್ತ್ವಂ ಸ್ವಾತ್ಮನಸ್ತದಾ ।**
**ಮಾದೃಶಾನಾಂ ಸ್ಖಲತ್ತ್ವಂ ಕಿಂ ವಾಚ್ಯಂ ಕ್ಷಾಮ್ಯಂತು ತದ್ಬುಧಾಃ ॥**

ಜ್ಞಾನಸಮುದ್ರರಾದ ಶ್ರೀಮಟ್ಟೀಕಾಕೃತ್ಪಾದರೇ ತಮ್ಮ ಗ್ರಂಥದಲ್ಲಿ ಸ್ಖಾಲಿತ್ಯವನ್ನು ಶಂಕಿಸಿಕೊಂಡಿರುವಾಗ ನಮ್ಮಂತಹವರ ಕೃತಿಯಲ್ಲಿ ಸ್ಖಾಲಿತ್ಯವಿದೆಯೆಂದು ಪ್ರತ್ಯೇಕವಾಗಿ ಏನು ಹೇಳುವುದು? ಜ್ಞಾನಿಗಳಾದವರು ಅದನ್ನು ಕ್ಷಮಿಸಲೆಂದು ಅವರಲ್ಲಿ ಕೇಳಿಕೊಳ್ಳುತ್ತೇನೆ.

**ಶ್ರೀಕೃಷ್ಣಾರ್ಪಣಮಸ್ತು**

ಪ್ರತ್ಯಕ್ಷರಂ ಪ್ರತಿಪದಂ
ಅನೇಕಾಕೂತಗರ್ಭಿತಾ ।
ಪ್ರತಿಭಾತಿ ಸುಧಾಽಥಾಪಿ
ಗ್ರಂಥಾಲ್ಪತ್ವಾಯ ನೋಚ್ಯತೇ ॥

ಶ್ರೀಮನ್ನ್ಯಾಯಸುಧಾಗ್ರಂಥವು ಪ್ರತಿಯೊಂದು ಅಕ್ಷರ ಮತ್ತು ಪದಗಳಲ್ಲಿಯೂ ಅನೇಕ ಅಭಿಪ್ರಾಯ ವಿಶೇಷವುಳ್ಳದ್ದಾಗಿ ಕಂಡು ಬರುತ್ತಿದೆ. ಆದರೂ ಈ ಪರಿಮಳ ಗ್ರಂಥವು ಸಂಕ್ಷಿಪ್ತವಾಗಿರಲೆಂಬ ಉದ್ದೇಶ್ಯ ದಿಂದ ಇಲ್ಲಿ ಅದನ್ನು ಹೆಚ್ಚು ವಿವರಿಸಿಲ್ಲ.

ಯಷ್ಟೀಕಾಂ ಕೃತವಾನ್ ಹರೇರನುಪಮಾಂ
ಪ್ರೀತ್ಯೈ ಸುಧಾದ್ಯಾಕೃತೇಃ
ಯಾಮಾಲೋಚ್ಯ ಸುಧಾದಿಶಾಸ್ತ್ರನಿಪುಣಾಃ
ಸಂತೋ ಬಭೂವುರ್ಭುವಿ ।
ಸತ್ಸಿದ್ಧಾಂತಮಸೌ ಸತಾಮುಪದಿಶನ್
ವೇದಾರ್ಥಮಾವರ್ಣಯನ್
ತುಷ್ಟೋ ಮೇ ಗುರುರಾಘವೇಂದ್ರಯತಿರಾಟ್
ದದ್ಯಾದಲಂ ಮಂಗಲಮ್ ॥

ಧೀರ ಶ್ರೀ ರಾಘವೇಂದ್ರ! ತ್ವದತುಲರಸನಾರಂಗನೃತ್ಯತ್ ಸ್ವಯಂಭೂ

ಯೋಷಾಧಮ್ಮಿಲ್ಲ ಭಾರಶ್ಲಥ ಕುಸುಮತತಿಸ್ತ್ವದ್ಗಿರಃ ಸಂಗಿರಾಮಃ!

ಯಾಭಿಃ ಸಂಮಿಶ್ರಿತಾಭಿರ್ನಿರವಧಿ ವಸುಧಾವಿಶ್ರುತಾ ಸಾ ಸುಧಾಽಪಿ

ಕ್ಷೋಣೀಗೀರ್ವಾಣಗಮ್ಯಂ ಪರಿಮಲ ಮತುಲಂಸಾಂಪ್ರತಂಸಂಪ್ರಪೇದೇ!!

ಶ್ರೀ ವಾದೀಂದ್ರ ತೀರ್ಥರು

ಜ್ಞಾನಿವರೇಣ್ಯರಾದ ಮಂತ್ರಾಲಯ ಪ್ರಭುಗಳೇ!
ವಾಗ್ದೇವತೆಯಾದ ಸರಸ್ವತೀದೇವಿಯು ನಿಮ್ಮ
ನಾಲಿಗೆಯೆಂಬ ರಂಗ ಸ್ಥಳದಲ್ಲಿ ನರ್ತಿಸಿದಾಗ
ಅವರ ಮುಡಿಯಿಂದ ಉದುರಿದ ಕುಸುಮಗಳೇ
'ಶ್ರೀಮನ್ನ್ಯಾಯಸುಧಾ' ಗ್ರಂಥದ ಮೇಲೆ
ನೀವು ರಚಿಸಿದ ಟಿಪ್ಪಣೀ ವಚನಗಳು.
ಅವುಗಳನ್ನು ಒಟ್ಟುಗೂಡಿಸಿದಾಗ
ಉಂಟಾದ ಪರಿಮಳ ವೇ

**'ಶ್ರೀಮನ್ನ್ಯಾಯಸುಧಾ**
**ಪರಿಮಳ'**

॥ಶ್ರೀಮನ್ ಮೂಲರಾಮೋ ವಿಜಯತೇ॥ ॥ಶ್ರೀಗುರುರಾಜೋ ವಿಜಯತೇ॥



ಶ್ರೀ ೧೦೦೮ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರ
ವರಕುಮಾರಕರಾದ
ಶ್ರೀ ೧೦೦೮ ಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದಂಗಳವರು
ಪ್ರಸ್ತುತ ಪೀಠಾಧಿಪತಿಗಳು
ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ
ಮಂತ್ರಾಲಯ

Printed By : B.V.T Setty B'Lore. / (080) 6604089